University of Mysore

Oriental Research Institute Publications

KANNADA SERIES No 31

GENERAL EDITOR

H DEVEERAPPA, M A,

*Superintendent in Charge,*

*Oriental Research Institute, Mysore*

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

ಆರನೆಯ ಸಂಪುಟ

# ಉದ್ಯೋಗಪರ್ವ

THE

# KARNĀTAKA MAHĀBHĀRATA

BY

KUMĀRA VYĀSA

Vol VI

# UDYOGA PARVA

EDITED BY

*Vidvan* S N KRISHNA JOIS

MYSORE

PRINTED BY THE SENIOR ASST DIRECTOR, GOVT BRANCH PRESS

1956

# ಪ್ರಸ್ತಾವನೆ

---

ಗದುಗಿನ ಭಾರತದ 'ಉದ್ಯೋಗಪರ್ವ'ದ ಪ್ರತಿಗಳು ಮುಗಿದು ಹೋಗಿದ್ದುದರಿಂದಲೂ ಅನೇಕ ವಿದ್ಯಾಸಂಸ್ಥೆಗಳಲ್ಲಿ ಈ ಕಾವ್ಯವು ಪಠ್ಯ ಪುಸ್ತಕವಾಗಿರುವುದರಿಂದಲೂ ಇದನ್ನು ಪರಿಷ್ಕರಿಸಿ ಎರಡನೆಯ ಬಾರಿ ಪ್ರಕಟಿಸಲಾಗಿದೆ 'ಆದಿಪಂಚಕ'ದ ಉಳಿದ ಪರ್ವಗಳೂ ಪುನರ್ಮುದ್ರಣಕ್ಕಾಗಿ ಸಿದ್ಧವಾಗುತ್ತಿವೆ.

ಈ ಎರಡನೆಯ ಆವೃತ್ತಿಯಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಲಾಗಿದೆ ಅವುಗಳಲ್ಲಿ ಮುಖ್ಯವಾದುದು ಸಂಧಿಗಳ ಪುನರ್ವಿಂಗಡಣೆ ಈ ವಿಷಯದಲ್ಲಿಯೂ ಸಂಪ್ರತಿಗಾಗಿ ಬಳಸಿಕೊಂಡಿರುವ ಮಾತೃಕೆಗಳ ವಿಷಯದಲ್ಲಿಯೂ ಸಂಪೂರ್ಣ ವಿವರಗಳನ್ನು ಪೀಠಿಕೆಯಲ್ಲಿ ಕೊಡಲಾಗಿದೆ

ಈಗಾಗಲೇ ಅನೇಕ ಕಡೆಗಳಲ್ಲಿ ಅನೇಕ ವಿಧಗಳಲ್ಲಿ ಚರ್ಚಿಸಲ್ಪಟ್ಟಿರುವ ಈ ಕವಿಯ ಕಾಲ, ದೇಶ, ಮತಗಳ ವಿಷಯಕ್ಕೆ ಅತ್ಯಲ್ಪ ಪ್ರಾಧಾನ್ಯ ಕೊಡಲಾಗಿದೆ ಉದ್ಯೋಗಪರ್ವದ ಕಥೆಯನ್ನೂ, ಪ್ರಕೃತಪರ್ವಕ್ಕೆ ಸಂಬಂಧಪಟ್ಟಂತೆ ವ್ಯಾಸಭಾರತ–ಕುಮಾರವ್ಯಾಸಭಾರತಗಳಿಗೂ, ಪಂಪಭಾರತ–ನಾರಣಪ್ಪನ ಭಾರತಗಳಿಗೂ, ದೂತವಾಕ್ಯ–ಗದುಗಿನ ಭಾರತಗಳಿಗೂ ಇರುವ ಸಾಮ್ಯವೈಷಮ್ಯಗಳನ್ನೂ ತೋರಿಸಲಾಗಿದೆ

ಅಚ್ಚಿಗಾಗಿ ಹಸ್ತಪ್ರತಿಯನ್ನು ಸಿದ್ಧಪಡಿಸುವಲ್ಲಿ ಮೈಸೂರು ಅರಮನೆ ಸರಸ್ವತೀಭಂಡಾರದಲ್ಲಿರುವ ಮೂರು ಮಾತೃಕೆಗಳನ್ನು ಬಳಸಿಕೊಳ್ಳಲಾಯಿತು ಈ ಪ್ರತಿಗಳನ್ನು ಎರವಲಾಗಿ ಕೊಟ್ಟ ಅರಮನೆಯ ಸರಸ್ವತೀಭಂಡಾರದ ಅಧಿಕಾರಿಗಳಿಗೆ ನಮ್ಮ ಅಭಿವಂದನೆಗಳು

ಎಚ್ ದೇವೀರಪ್ಪ

# ವಿಷಯಾನುಕ್ರಮಣಿಕೆ

---

# ಪೀಠಿಕೆ

ಗದುಗಿನ ಭಾರತವೆಂದೂ, ಭಾರತಕಥಾಮಂಜರಿಯೆಂದೂ ಪ್ರಸಿದ್ಧವಾಗಿರುವ ಈ ಷಟ್ಪದೀಕಾವ್ಯವು ಕನ್ನಡ ನಾಡಿನ ಎಲ್ಲ ರಸಿಕರ ಮನವನ್ನೂ ಸೂರೆಗೊಂಡಿರುತ್ತದೆ ಈ ಕಾವ್ಯಕುಸುಮಮಂಜರಿಯು ಎಂದೆಂದಿಗೂ ಬಾಡದ ಚೆಲುವುಳ್ಳುದು, ಎಂದೆಂದಿಗೂ ಅಳಿಯದ ಕಂಪುಳ್ಳುದು ಎಂದು ಹೇಳಿದರೆ ಸಾಲದು ಇದು ದಿನದಿನಕ್ಕೂ ಹೊಸತುಹೊಸತಾಗಿ ಹೆಚ್ಚುಹೆಚ್ಚಾಗಿ ರಸಿಕರಿಗೆ ಆನಂದವೀಯುತ್ತಿದೆ ಅಷ್ಟೇ ಅಲ್ಲ, ಅರಸುಗಳಿಗೆ ವೀರವಾಗಿಯೂ ದ್ವಿಜರಿಗೆ ಪರಮವೇದದ ಸಾರವಾಗಿಯೂ ಕಂಗೊಳಿಸುತ್ತಿದೆ

ಈ ಕವಿಯ ಹೆಸರು ಕುಲ ಗೋತ್ರ ಯಾವುದೂ ಗೊತ್ತಾಗುವುದಿಲ್ಲ ಶ್ರೇಷ್ಠತಮ ಕಲಾಕೃತಿಯನ್ನು ರಚಿಸಿ ಕನ್ನಡಿಗ ರಸಿಕರ ಗೌರವಾದರಗಳಿಗ ಪಾತ್ರನಾಗಿರುವ ಈ ಮಹಾಕವಿ ‘ನಮ್ಮವನು’ ಎಂದು ಹೇಳಿಕೊಳ್ಳುವುದಕ್ಕೆ ಯಾವ ಕನ್ನಡಿಗನಿಗೆ ತಾನೆ ಹೆಮ್ಮೆಯಾಗುವುದಿಲ್ಲ? ಆದುದರಿಂದಲೇ ಈಕವಿ ಕೆಲವರಿಗೆ ವೈಷ್ಣವನಂತೆ, ಕೆಲವರಿಗೆ ವೀರಶೈವನಂತೆ, ಕೆಲವರಿಗೆ ಶೈವನಂತೆ ಕಂಡಿದ್ದಾನೆ ಕನ್ನಡ ಜಾಣರೆಲ್ಲ ಈ ಕೃತಿಯನ್ನು ಮೆಚ್ಚಿಕೊಂಡಿರುವರೆನ್ನುವುದಕ್ಕೆ ಇನ್ನೇನು ಸಾಕ್ಷಿ ಬೇಕು ‘ವೀರ ನಾರಾಯಣನೆ ಕವಿ*’, ‘ಲಿಪಿಗಾರ ಕುಮರವ್ಯಾಸ’ ಎಂದು ಹೇಳಿ ಕೊಂಡಿರುವ ಕವಿಯ ನಿರ್ಮಮತೆ ಅನುಕರಣೀಯವಾದುದು

ಈ ಮಹಾಕವಿಯ ಕನ್ನಡ ಮಹಾಭಾರತದ ಉದ್ಯೋಗಪರ್ವವು ಶ್ರೀ ರಾಮಾಯಣದ ಸುಂದರಕಾಂಡದಂತೆ ಸಾರವಾದದ್ದು ಈ ಪರ್ವದ ಕಥಾಭಾಗವು ಸೇನೆಯ ಉದ್ಯೋಗದಿಂದ [ಯುದ್ಧಕ್ಕಾಗಿ ಸೇನೆಯ ಶೇಖರಣೆಯಿಂದ] ಆರಂಭವಾಗುತ್ತದೆ ಅಲ್ಲದೆ ಕೌರವ ಪಾಂಡವರ ಸಂಧಿಗಾಗಿ ಕೃಷ್ಣನು ಉದ್ಯೋಗಿಸುತ್ತಾನೆ ಆದಕಾರಣ ಈ ಪರ್ವಕ್ಕೆ ಉದ್ಯೋಗಪರ್ವವೆಂದು ಹೆಸರುಬಂದಿದೆ

ಗದುಗಿನ ಭಾರತವು ಕನ್ನಡದೇಶದ ಮನೆಮನೆಯನ್ನೂ ಬೆಳಗಬಲ್ಲ ಬೆಳಗಬೇಕಾಗಿರುವ ನಂದಾದೀಪವೆಂದರೆ ಆ ದೀಪದ ಕುಡಿ ಉದ್ಯೋಗಪರ್ವ ಎಂದು ಹೇಳಬೇಕಾಗುತ್ತದೆ.

---

*ಈ ಕವಿಯನ್ನು ನಾರಣಪ್ಪನೆಂದು ಕರೆಯುವುದು ರೂಢಿಯಲ್ಲಿದೆ ಈತನ ಕಾಲ ಸುಮಾರು ಕ್ರಿ. ಶ. 1230–35 [ಕುಮಾರವ್ಯಾಸ ಪ್ರಶಸ್ತಿ ಪುಟ ೨೧].

# ಕಥಾಸಾರ

## ೧ನೆಯ ಸಂಧಿ

ಅಭಿಮನ್ಯುವಿನ ಮದುವೆಯು ವಿಜೃಂಭಣೆಯಿಂದ ನಡೆದಮೇಲೆ ಪಾಂಡವರು ಮದುವೆಯ ಉತ್ಸವದಿಂದಲೂ, ಕೃಷ್ಣನ ದರ್ಶನದಿಂದಲೂ ಸಂತುಷ್ಟರಾಗಿ ಉಪಪ್ಲಾವ್ಯನಗರದಲ್ಲಿ ವಾಸಿಸುತ್ತಿದ್ದರು ಒಂದು ದಿವಸ ಕೃಷ್ಣನು ಯುಧಿಷ್ಠಿರನ ಒಡ್ಡೋಲಗಕ್ಕೆ ಬಂದು ಎಲ್ಲ ರಾಜರ ಎದುರಿನಲ್ಲಿ "ಜೂಜಿನ ವ್ಯಾಜದಿಂದ ಪಾಂಡವರು ಅರಣ್ಯದಲ್ಲಿ ಬಹಳ ನೊಂದಿರುತ್ತಾರೆ ಇವರು ತಮ್ಮ ರಾಜ್ಯವನ್ನು ಸೇರುವುದು ಎಂದು ? ಇವರ ಸ್ಥಿತಿ ಏನು ?" ಎಂದು ರಾಜಕಾರ್ಯವನ್ನು ನುಡಿದನು ಇದನ್ನು ಕೇಳಿ ದ್ರುಪದರಾಜನು "ದೇವ ! ನಿನ್ನನ್ನೇ ನಂಬಿರುವ ಧರ್ಮರಾಜಾದಿಗಳನ್ನು ಕಾಪಾಡುವ ಭಾರ ನಿನ್ನದು ಅದು ನಿನಗೆ ತಿಳಿದೇ ಇದೆ ನೀನು ಹೇಳುವುದನ್ನು ತಲೆಯಲ್ಲಿ ಅಂತು ನಡೆಸುವುದು ಮಾತ್ರ ನಮಗೆ ಗೊತ್ತಿದೆ" ಎಂದು ಹೇಳಿದನು ಆಗ ಕೃಷ್ಣನು "ಧರ್ಮರಾಜ ! ಭೀಷ್ಮಾದಿಗಳ ಸಮೀಪಕ್ಕೆ ಶಿಷ್ಟರನ್ನು ಕಳುಹಿಸಿ ರಾಜ್ಯವನ್ನು ಪಡೆಯಲು ಸಾಮವನ್ನು ಬಳಸಬೇಕು ಕೊಡಲು ಸಮ್ಮತಿಸದಿದ್ದರೆ ಅವರೊಡನೆ ಯುದ್ಧಮಾಡಬೇಕು ಇದೇ ನನ್ನ ಮತ" ಎಂದನು ಕೂಡಲೇ ಬಲರಾಮನು "ಎಲೆ ಮರುಳು ಮಾಧವ ! ಧರ್ಮರಾಜನು ಜೂಜಿನಲ್ಲಿ ರಾಜ್ಯವನ್ನು ಕಳೆದುಕೊಂಡಿರುತ್ತಾನೆ ಪುನಃ ಇವನು ಪಣವನ್ನು ಒಡ್ಡಿ ಜೂಜಿನಿಂದಲೇ ರಾಜ್ಯವನ್ನು ಪಡೆಯಲಿ , ಇಲ್ಲದಿದ್ದರೆ ಯುದ್ಧಮಾಡಲಿ, ಗೆದ್ದು ರಾಜ್ಯವನ್ನು ತೆಗೆದುಕೊಳ್ಳಲಿ ಈ ವಿಚಾರದಲ್ಲಿ ದುರ್ಯೋಧನನು ತಪ್ಪುಮಾರ್ಗದಲ್ಲಿ ನಡೆದಿಲ್ಲ" ಎಂದು ಹೇಳಲು, ಸಾತ್ಯಕಿಯು ಬಿರುಸಾಗಿ ಮಾತನಾಡಿ "ಯುದ್ಧದಲ್ಲಿ ಶತ್ರುಗಳನ್ನು ನಾಶಮಾಡಿ ಕ್ಷತ್ರಿಯರು ರಾಜ್ಯವನ್ನು ತೆಗೆದುಕೊಳ್ಳುವುದು ನ್ಯಾಯವಾದುದೇ ಸಹಜ ಬೇಡುವುದು ಸಮ್ಮತವಲ್ಲ" ಎಂದನು

ಇದನ್ನು ಕೇಳಿ ದ್ರುಪದನು ನಕ್ಕು "ಈ ಸಾತ್ಯಕಿಯ ಅಭಿಪ್ರಾಯವೇ ನನಗೂ ಸಮ್ಮತವು ಕೌರವನು ಯುದ್ಧದಿಂದಲ್ಲದೆ ರಾಜ್ಯವನ್ನು ಕೊಡುತ್ತಾನೆಯೆ ? ಆದರೂ, ಸಾತ್ಯಕಿಯೇ! ಕೇಳು , ಮೊದಲು ಒಬ್ಬ ದೂತನನ್ನು ಕೌರವನ ಬಳಿಗೆ ಕಳುಹಿಸಿ ಸಾಮವನ್ನು ಬಳಸಿ ನೋಡೋಣ" ಎಂದನು

"ದ್ರುಪದನ ಅಭಿಪ್ರಾಯವು ಸರಿಯಾದುದು , ಯುದ್ಧವನ್ನು ಸೂಚಿಸಿ ನಮ್ಮ ಪಕ್ಷಕ್ಕೆ ರಾಜರನ್ನು ಕರೆಸಿ ಯುದ್ಧಕ್ಕೆ ಸನ್ನದ್ಧರಾಗಿ , ಕೌರವನಲ್ಲಿಗೆ ರಾಜ್ಯಬೇಡಲು ಒಬ್ಬ ದೂತನನ್ನು ಕಳುಹಿಸಿ ನಾನು ಅಭಿಮನ್ಯುವಿನ ಮದುವೆಗಾಗಿ ಬಂದವನು , ರಾಜಕಾರ್ಯದ ಸ್ಥಿತಿಗಳನ್ನೆಲ್ಲಾ ತಿಳಿದು ಕರೆಸಿದಾಗ ನಾನು ಬರುತ್ತೇನೆ ನೀವು ಸೌಖ್ಯದಿಂದಿರಿ"

ಎಂದು ಕೃಷ್ಣನು ಹೇಳಿ ಪಾಂಡವರು, ದ್ರೌಪದಿ, ಅಭಿಮನ್ಯು ಮತ್ತು ಸುಭದ್ರೆ ಇವರನ್ನು ಹರಸಿ ದ್ವಾರಕಿಗೆ ಪ್ರಯಾಣಮಾಡಿದನು

ದ್ರುಪದನು ಒಂದು ದಿನ ಮಂತ್ರಾಲೋಚನೆಮಾಡಿ, ಸಾಮೋಪಾಯದಿಂದ ರಾಜ್ಯವನ್ನು ಕೊಡುವಂತೆ ಕೇಳಲು ತನ್ನ ಪುರೋಹಿತನನ್ನು ಕೌರವನ ಪಟ್ಟಣಕ್ಕೆ ಕಳುಹಿಸಿದನು ಬಳಿಕ ಯುದ್ಧಕ್ಕೆ ನೆರವಾಗಬೇಕೆಂದು ಪಾಂಡವರು ರಾಜರಿಗೆ ಓಲೆಯನ್ನು ಕಳುಹಿಸಲು, ಅವರಲ್ಲಿ ಕೆಲವರು ಪಾಂಡವರ ಪಕ್ಷಕ್ಕೂ ಮತ್ತೆ ಕೆಲವರು ಕೌರವರ ಪಕ್ಷಕ್ಕೂ ಸಹಾಯಕ್ಕಾಗಿ ಸೈನ್ಯದೊಡನೆ ತಂಡೋಪತಂಡವಾಗಿ ಬಂದರು ಇದನ್ನು ನೋಡಿ ದುರ್ಯೋಧನನು "ಶತ್ರುಗಳು ಬಲಿಷ್ಠರಾಗುತ್ತಿದ್ದಾರೆ, ನಾವು ಮೈಮರೆತು ಕುಳ್ಳಿರದೆ ಜಾಗ್ರತೆಯಿಂದಿರಬೇಕು"ಎಂದು ಯೋಚಿಸಿ, ಆಪ್ತರಿಗೆ ಈ ಸಮಾಚಾರವನ್ನು ತಿಳಿಸಿ, ಕೃಷ್ಣನನ್ನು ಒಳಗುಮಾಡುವುದಕ್ಕಾಗಿ ದ್ವಾರಕಿಗೆ ಗುಪ್ತವಾಗಿ ಪ್ರಯಾಣಮಾಡಿದನು

ಗೂಢಚಾರರು ಈ ಸುದ್ದಿಯನ್ನು ಬೇಗನೆ ಕುಂತೀಸುತರಿಗೆ ತಿಳಿಸಿದರು ಧರ್ಮರಾಜನು ಹೆದರಿ, ಅರ್ಜುನನನ್ನು ಕೂಡಲೇ ದ್ವಾರಕಿಗೆ ಅದೇ ಕಾರ್ಯಕ್ಕಾಗಿ ಕಳುಹಿಸಿದನು

ಅರ್ಜುನನು ದ್ವಾರಕಿಗೆ ಪ್ರಯಾಣಮಾಡಿದಾಗ ಶುಭಶಕುನಗಳು ಆದುವು ಆತನು "ದ್ವಾರಕಿಯು ಸಾಮಾನ್ಯವಾದ ನಗರಿಯಲ್ಲ ಇಲ್ಲೇ ಅಲ್ಲವೇ ಹರಿಯು ಶ್ರುತಿಗಳಿಗೆ ಪ್ರತ್ಯಕ್ಷವಾದುದು ಮತ್ತು ತಾಪಸರನ್ನು ಬದುಕಿಸಿದುದು! ಮುಕ್ತಿಯು ಕರತಳಾಮಲಕವಾಗಿರುವುದು ಇಲ್ಲೇ, ತರ್ಕತಂತ್ರದ ಯುಕ್ತಿಯು ಇಲ್ಲಿ ಯಾವ ಪ್ರಯೋಜನಕ್ಕೂ ಬಾರದು" ಎಂದು ದ್ವಾರಕಾಪುರಿಯನ್ನು ಸ್ತುತಿಸುತ್ತ ಪಟ್ಟಣಕ್ಕೆ ಬಂದು, ಕೃಷ್ಣನ ಅರಮನೆಯನ್ನು ಪ್ರವೇಶಿಸಿದನು ಆಗ ಕೃಷ್ಣನು ಮಂಚದ ಮೇಲೆ ನಿದ್ರಾಕೇಳಿಯಲ್ಲಿ ಇರುವುದನ್ನು ಅರ್ಜುನನು ಕಂಡು, ಆತನನ್ನು ಎಚ್ಚರಗೊಳಿಸದೆ ಭಕ್ತಿಯಿಂದ ಕೈಮುಗಿದು ಆತನ ಚರಣಗಳ ಸಮೀಪಕ್ಕೆ ಹೋದನು ಬಳಿಕ ದುರ್ಯೋಧನನು ಕೃಷ್ಣನ ತಲೆಯ ಪಾರ್ಶ್ವಕ್ಕೆ ಹೋಗಿ ಕುಳಿತುಕೊಂಡನು

ಸ್ವಲ್ಪ ಹೊತ್ತಿನಲ್ಲೇ ಕೃಷ್ಣನು ಮೈಮುರಿದು ಮೇಲಕ್ಕೆದ್ದು ಮುಗುಳ್ನಗೆಯಿಂದ ಎದುರಿನಲ್ಲಿದ್ದ ಅರ್ಜನನನ್ನು ನೋಡಿದನು ಮತ್ತೆ ಹಿಂದಿರುಗಿ ನೋಡಿ ತಲೆಯ ಪಾರ್ಶ್ವದಲ್ಲಿ ಮನೋವಿಕಾರದಿಂದ ಕೂಡಿ ಕುಳಿತಿದ್ದ ದುರ್ಯೋಧನನನ್ನೂ ಕಂಡು ಆಶ್ಚರ್ಯಚಕಿತನಾದನು ಇವರಿಬ್ಬರಿಗೂ ವೀಳೆಯವನ್ನು ಕೊಟ್ಟು ಸತ್ಕರಿಸಿ "ನೀವಿಬ್ಬರೂ ಏಕಕಾಲದಲ್ಲಿ ಇಲ್ಲಿಗೆ ಬಂದಿರುತ್ತೀರಿ ಇದು ಆಶ್ಚರ್ಯವಲ್ಲವೇ! ಮಾನ್ಯರಾದ ನೀವು ನಮ್ಮಲ್ಲಿಗೆ ಬಂದ ಕಾರ್ಯವೇನು?" ಎಂದು ಕೃಷ್ಣನು ಕೇಳಿದನು ಅದಕ್ಕೆ ದುರ್ಯೋಧನನು "ಯಾದವ ಕೌರವರಲ್ಲಿ ಭೇದವೇ? ನಾವು ಈ ರೀತಿ ಬಂದುದರಿಂದ ಆದ ಲಾಘವವೇನು? ನಮಗೆ ನಿಮಗಿಂತ ಸ್ನೇಹಿತರು

ಮತ್ತಾರು? ಸೋದರರಾದ ನಮಗೂ ಪಾಂಡವರಿಗೂ ವೈಮನಸ್ಯ ಉಂಟಾಗಿದೆ ನಾವಿಬ್ಬರೂ ರಾಜ್ಯಕ್ಕಾಗಿ ಯುದ್ಧಮಾಡುತ್ತೇವೆ, ನೀವು ಇಬ್ಬರಿಗೂ ಸಹಾಯ ಮಾಡಬೇಕು" ಎಂದನು

ಇದನ್ನು ಕೇಳಿ ಕೃಷ್ಣನು "ಕೌರವೇಶ್ವರ! ಕೇಳು, ಭೂರಮಣಿ ಯಾವ ದೊರೆಯೊಡನೆ ಒಕ್ಕಲುತನವಿರುತ್ತಾಳೆ? ಯಾರನ್ನು ಮೆಚ್ಚಿರುತ್ತಾಳೆ? ಯಾರೊಡನೆ ಸಹಗಮನ ಮಾಡಿರುತ್ತಾಳೆ? ದೊರೆಗಳು ಈ ವಿಷಯವನ್ನು ಸ್ವಲ್ಪವೂ ವಿಮರ್ಶಿಸದೆ ಭೂಮಿಯನ್ನು ತಮ್ಮವಳೆಂದೇ ಭಾವಿಸಿ ನರಕ ಸಾಮ್ರಾಜ್ಯಕ್ಕೆ ಹೋಗುತ್ತಾರೆ ರಾಜ್ಯಕ್ಕಾಗಿ ಸೋದರರು ಯುದ್ಧಮಾಡಿ ಹಾಳಾದರೆಂದು ಬ್ರಹ್ಮನಾಯುಃಪರಿಯಂತರವೂ ಲೋಕವು ನಿಮ್ಮನ್ನು ಆಡಿಕೊಳ್ಳುವುದಿಲ್ಲವೆ? ನಿಮ್ಮಲ್ಲಿ ಪರಸ್ಪರ ಜಗಳಬೇಡ ನೀವುಗಳು ಕೂಡಿ ಬದುಕುವುದು ಒಳ್ಳೆಯದು ಅದನ್ನು ನೋಡಿ ನಾವು ಸಂತೋಷಪಡು ತ್ತೇವೆ ಟಗರನ್ನು ಹುರಿದುಂಬಿಸಿ ಕಾಳಗಮಾಡುವುದನ್ನು ನೋಡು ವಂತೆ, ನೀಚರು ನಿಮ್ಮನ್ನು ಯುದ್ಧಕ್ಕಾಗಿ ಹುರಿಮಾಡುತ್ತಿದ್ದಾರೆ ಹುರಿಮಾಡುವ ಈ ನೀಚರು ಕೊನೆಯಲ್ಲಿ ನಿಮ್ಮ ಸ್ಥಿತಿಯನ್ನು ನೋಡಿ ಹಿಂದೆ ನಗುತ್ತಾರೆ ನೀವಿಬ್ಬರೂ ಅಪಕೀರ್ತಿಯನ್ನು ಪಡೆಯುತ್ತೀರಿ" ಎಂದನು

ಅದಕ್ಕೆ ದುರ್ಯೋಧನನು "ಮುರವೈರಿ! ಅವಧರಿಸು, ಈಗ ಧರ್ಮ ಶ್ರವಣಕ್ಕಾಗಿ ನಿಮ್ಮಲ್ಲಿಗೆ ನಾವು ಬಂದಿಲ್ಲ ದೊರೆಗಳಿಗೆ ತಕ್ಕಂತೆ ನಮಗೆ ಯುದ್ಧದಲ್ಲಿ ಆಸಕ್ತಿಯುಂಟಾಗಿದೆ ನೀವು ನಮ್ಮಿರ್ವರಿಗೂ ಸಮಾನ ಆದುದರಿಂದ ನೀವು ಇಬ್ಬರಿಗೂ ಸಹಾಯಮಾಡಬೇಕು" ಎಂದು ಹೇಳಲು, ಕೃಷ್ಣನು ತಂಬುಲಸೂಸುವಂತೆ ನಕ್ಕು, ಅರ್ಜುನನನ್ನು ನೋಡಿ, ಅವನ ಅಭಿಪ್ರಾಯವನ್ನು ಕೇಳಲು, ದುರ್ಯೋಧನನ ಅಭಿಪ್ರಾಯವನ್ನೇ ತಾನೂ ಒಪ್ಪಿರುವೆನೆಂದು ಅರ್ಜುನನು ಹೇಳಿದನು ಆಗ ಕೃಷ್ಣನು "ಅದನ್ನೇ ನೀನೂ ಒಪ್ಪಿರುವೆಯಾದರೆ ಅರ್ಜುನ! ಕೇಳು, ಯುದ್ಧ ಮಾಡದ ನಾನು ಒಂದು ಕಡೆ, ಯುದ್ಧ ಮಾಡುವ ನಮ್ಮ ಅಪರಿಮಿತ ನಾರಾಯಣಸೇನೆ ಕೃತವರ್ಮ ಮತ್ತು ಬಲರಾಮನೇ ಆದಿಯಾದ ಯಾದವರೆಲ್ಲ ಒಂದು ಕಡೆ ಈ ಎರಡರಲ್ಲಿ ನಿನಗೆ ಮೆಚ್ಚಿಗೆಯಾದುದನ್ನು ವರಿಸು" ಎಂದು ಹೇಳಿದನು ಅದನ್ನು ಕೇಳಿ ಅರ್ಜುನನು ಕೈಮುಗಿದು "ಮುರಹರ! ಕೌರವನು ಸಿರಿ ವಂತ ಈ ಯಾದವ ಸೈನ್ಯವನ್ನು ಕಾಪಾಡಲು ಸಮರ್ಥ ರಾಜ್ಯಶ್ರೀ ಇಲ್ಲದ ಅಡವಿಯ ತಿರಿಕರಾದ ನಮಗೆ ಇಷ್ಟು ಸೇನೆಯನ್ನೂ ರಕ್ಷಿಸಲು ಸಾಧ್ಯವೇ? ನಾವು ಬಡವರು, ನೀನು ದಿಟವಾಗಿಯೂ ಬಡವರಿಗೆ ಬೆಂಬಲನೆಂದು ಕೇಳಿರುತ್ತೇನೆ, ನಮಗೆ ನೀನೊಬ್ಬನೆ ಸಾಕು" ಎಂದನು

ಬಳಿಕ ದುರ್ಯೋಧನನು "ಮರೆಯ ಮಾತುಗಳು ಏತಕ್ಕೆ? ಪಾಂಡ ವರಿಗಾಗಿ ನೀವು ಬಹಳ ಮರುಗುತ್ತೀರಿ, ಸುಖವಾಗಿ ಪಾಂಡವರನ್ನೇ

ಉದ್ಧರಿಸಿ ನನಗೆ ಯಾದವ ಸೈನ್ಯವನ್ನೇ ಕೃಪೆಮಾಡಿ ನೀವು ಇದನ್ನು ಬದಲಾಯಿಸಬಾರದು ನಾನೂ ಇದನ್ನೇ ಬೇಡಿಕೊಳ್ಳುತ್ತೇನೆ" ಎಂದು ಕೃಷ್ಣನಿಗೆ ಹೇಳಿದನು

ಅದಕ್ಕೆ ಕೃಷ್ಣನು "ಕೌರವ! ಹಸುಳೆತನ ಮೊದಲುಮಾಡಿ ಇಲ್ಲಿಯ ವರೆಗೂ ಅನೇಕ ರಾಕ್ಷಸರೊಡನೆ ಹೊಡೆದಾಡಿ ಅವರನ್ನು ಕೊಂದಿರುತ್ತೇನೆ ಈಗ ಆ ಯೌವನದ ಪರಾಕ್ರಮವೂ ಇಲ್ಲ ನನ್ನ ಚಕ್ರವೂ ಮೊಂಡಾಗಿದೆ ನಾನು ಉಂಡಾಡಿಭಟ್ಟನಾಗಿದ್ದೇನೆ" ಎಂದನು

ದುರ್ಯೋಧನನು ಶ್ರೀಕೃಷ್ಣನನ್ನು ಬೀಳ್ಕೊಂಡು ಯಾದವಬಲ ದೊಡನೆ ಹಸ್ತಿನಾನಗರಿಗೆ ತೆರಳಿದನು ಬಳಿಕ ಕೃಷ್ಣನು ನಸುನಕ್ಕು "ಮರುಳು ಧನಂಜಯನೇ, ಕತ್ತಿಯನ್ನು ಬಿಟ್ಟು ಒರೆಯನ್ನು ತೆಗೆದುಕೊಳ್ಳುವ ದಡ್ಡನಂತೆ, ಯುದ್ಧಮಾಡದ ಕೆಲಸಕ್ಕೆ ಬಾರದ ನನ್ನನ್ನು ಬಯಸಿದೆಯಲ್ಲ! ಇದನ್ನು ಕೇಳಿದರೆ ನಿನ್ನ ಸಹೋದರರು ನಿನ್ನನ್ನು ಮರುಳನೆನ್ನದೆ ಬಿಡು ವರೇ?" ಎನಲು, ಅರ್ಜುನನು ಗಹಗಹಿಸಿ ನಕ್ಕು "ದೇವ! ನಿಮ್ಮ ಮನಸ್ಸನ್ನು ಯಾರಲ್ಲಿ ಮುಚ್ಚಿಡುತ್ತಿದ್ದೀರಿ? ನಿಮ್ಮ ಶಿಷ್ಯನಲ್ಲೇ ಈ ಇಂದ್ರ ಜಾಲ? ನಿಮ್ಮ ಗರುಡಿಯಲ್ಲಿ ನನಗೂ ಶ್ರಮವುಂಟು ಅದಿರಲಿ, ನನ್ನ ಸಹೋದರರು ನಿಮ್ಮ ಮಹಿಮೆಯನ್ನು ಅರಿಯರೇ?" ಎಂದನು

ಅದಕ್ಕ ಕೃಷ್ಣನು "ನಾನು ಬರಿಗೈಯವನು ನನಗೆ ನಿಮ್ಮಲ್ಲಿ ಕೆಲಸವೇನು? ಬೀಡಾರದಲ್ಲಿ ಊಟಮಾಡಿ ಸುಮ್ಮನೆ ಕುಳಿತುಕೊಂಡು ನಿಮ್ಮ ಹಂಗಿಗನಾಗಲಾರೆ ನನ್ನನ್ನು ನೀವು ದೇವರೆಂದೇ ತಿಳಿದಿರು ತ್ತೀರಿ ಎನ್ನಲ್ಲಿ ದೇವತನವಿಲ್ಲವೆಂಬುದನ್ನು ನಾನು ಬಲ್ಲೆ ಬಂದು ಮಾಡುವುದೇನು? ಹೇಳು" ಎಂದನು

ಇದನ್ನು ಕೇಳಿ ಅರ್ಜುನನು "ನೀವು ಕೇವಲ ದೇವರಲ್ಲ ದೇವರ ದೇವರೊಡೆಯರು, ನಿಮ್ಮನ್ನು ಹೊಗಳಲು ವೇದಗಳಿಗೂ ಸಾಧ್ಯವಿಲ್ಲ ಆ ಮಾತಿರಲಿ ನಾವು ನಿಮ್ಮ ಭಕ್ತರು, ನೀವು ಭಕ್ತರ ಭೃತ್ಯರು, ಸಾರಥಿಯಾಗಿ ನಮ್ಮನ್ನು ಕಾಪಾಡಬೇಕು" ಎಂದು ಕೃಷ್ಣನಿಗೆ ನಮಸ್ಕರಿ ಸಿದನು ಆಗ ಕೃಷ್ಣನು ಅರ್ಜುನನನ್ನೆತ್ತಿ ಸಾರಥಿತನವನ್ನು ಕೈಗೊಂಡೆ ನೆಂದು ತಿಳಿಸಿ ಆತನೊಡನೆ ಹೊರಟನು

## ೨ನೆಯ ಸಂಧಿ

ಧರ್ಮರಾಜನು ಅರ್ಜುನನನ್ನು ದ್ವಾರಕಿಗೆ ಕಳುಹಿಸಿದಮೇಲೆ "ಅರ್ಜುನ ದುರ್ಯೋಧನರಲ್ಲಿ ಕೃಷ್ಣನು ಯಾರಿಗೆ ಒಳಗಾಗುತ್ತಾ ನೆಯೋ" ಎಂದು ಯೋಚಿಸುತ್ತಿರಲು ಅವನ ಬಲಗಣ್ಣು ಅದಿರಿತು ಎದುರಿನಲ್ಲಿ ಮಾರ್ಗಾಯಾಸದಿಂದ ಬಳಲಿದ ಒಬ್ಬನು ಬಂದು "ರಾಜನೇ! ಏಳು, ಪರದೈವನಾದ ಕೃಷ್ಣನು ಬಿಜಯಂಗೈಯ್ಯುತ್ತಿದ್ದಾನೆ, ತಳಿರು

ತೋರಣಗಳನ್ನು ಕಟ್ಟಿಸು, ಇನ್ನು ನಿನಗೆ ಸುರನರೋರಗರಲ್ಲಿ ಯಾರು ತಾನೆ ಸಮಾನರು? ಇನ್ನು ನೀನು ಶತ್ರುಗಳನ್ನು ಸದೆದಂತೆಯೇ ಕೃಷ್ಣನು ನಿನ್ನ ಸಹೋದರನ ಸಾರಥಿಯಾಗಲು ಒಪ್ಪಿರುತ್ತಾನೆ ರಾಜ್ಯವು ಇನ್ನು ನಿನ್ನದೇ ಇದಕ್ಕಾಗಿ ಚಿಂತಿಸಬೇಡ" ಎಂದು ತಿಳಿಸಲು, ಶಿಥಿಲಸಂಶಯು ನಾದ ಧರ್ಮರಾಜನು ಆತನನ್ನು ಬಹುಮಾನಿಸಿದನು ಬಳಿಕ ಕೃಷ್ಣ ನನ್ನು ಎದುರುಗೊಂಡು ಕರೆತರಲು ಧರ್ಮರಾಜನು ಸಕಲದಳದೊಡನೆ ಹೋಗಿ ಆತನ ಚರಣಗಳಿಗೆ ಅಡ್ಡಬಿದ್ದು "ದೇವ! ಮುನಿಗಳಿಗೂ ಗೋಚರಿ ಸಲು ಸಮಯುವಿಲ್ಲದ ಪರಾತ್ಪರನಾದ ನೀನು ನಮಗೆ ಒಲಿದು ಬಿಜಯ ಮಾಡಿರುತ್ತೀಯೆ" ಎಂದು ಹೇಳಲು, ಕೃಷ್ಣನು ನಕ್ಕು ಅವನನ್ನೆತ್ತಿ "ಧರ್ಮರಾಜ! ನಾನು ಅರ್ಜುನನ ಸಾರಥಿಯಲ್ಲದೆ ಎಲ್ಲಿಯು ವಸ್ತು ಹೇಳು" ಎಂದನು ಆಗ ಧರ್ಮರಾಜನು "ಎಲ್ಲರೆದುರಿನಲ್ಲೂ ನಮ್ಮನ್ನು ನಾಚಿಸಬೇಡ" ಎಂದು ಹೇಳಿ ಕೃಷ್ಣನನ್ನು ಅರಮನೆಗೆ ಕರೆತಂದನು

ಇತ್ತ ಧರ್ಮರಾಜನ ಓಲೆಯಂತೆ ಶಲ್ಯನು ಸಹಾಯಮಾಡಲು ಸೈನ್ಯದೊಡನೆ ಹೊರಟನು ಇವನು ಬರುತ್ತಿರುವುದನ್ನು ಕೌರವನು ತಿಳಿದು ಪರಾಕ್ರಮಿಯಾದ ಈತನನ್ನು ತನ್ನ ಪಕ್ಷಕ್ಕೆ ತಿರುಗಿಸಿದರೆ ಯುದ್ಧ ದಲ್ಲಿ ತಾನು ಗೆಲ್ಲುವುದು ಖಂಡಿತವೆಂದು ಮನಸ್ಸಿನಲ್ಲಿ ನಿಶ್ಚೈಸಿ, ಶಲ್ಯನ ಸೈನ್ಯವು ಬೀಡು ಬಿಡುವ ಕಡೆಗಳಲ್ಲೆಲ್ಲಾ ಬೀಡಾರಗಳನ್ನು ಹಾಕಿಸಿ, ಊಟ ಉಪಚಾರಗಳಿಗೆ ಅಳವಡಿಸಿದ್ದುದನ್ನು ಕಂಡು ಶಲ್ಯನು ಸಂತುಷ್ಟನಾದನು ಬಳಿಕ ಶಲ್ಯನು "ನಮ್ಮ ಸೈನ್ಯವನ್ನೆಲ್ಲ ಸಂತೈಸಿದವನು ಕೌರವನೋ? ಧರ್ಮರಾಜನೋ? ಯಾರೇ ಆಗಲಿ ನಾನು ಮೆಚ್ಚಿರುತ್ತೇನೆ, ಸಂತೈಸಿ ದವನು ಎದುರಿಗೇ ಬರಲಿ, ನನ್ನ ಶರೀರವನ್ನೇ ಆತನಿಗೆ ಸಮರ್ಪಿಸು ತ್ತೇನೆ" ಎಂದು ಡಂಗುರ ಹೊಡಿಸಿದನು ಇದನ್ನು ಕೇಳಿ ಕೌರವನು ಅವ ನಲ್ಲಿಗೆ ಬರಲು ಆತನನ್ನು ಎದುರುಗೊಂಡು ಸಂತೋಷದಿಂದ ಆಲಿಂಗಿಸಿ, ಕುಶಲಪ್ರಶ್ನೆ ಮಾಡಿದನು "ಬಳಿಕ, ದುರ್ಯೋಧನ! ಈ ಬೀಡಾರಗಳನ್ನು ರಚಿಸಿದವನು ನೀನೇ ಅಲ್ಲವೆ? ನಾನು ನಿನಗೆ ಹಂಗಿಗ ನಿನಗೆ ಇಷ್ಟ ವಾದುದನ್ನು ಕೇಳು" ಎಂದು ಶಲ್ಯನು ಹೇಳಲು, ದುರ್ಯೋಧನನು "ಮಾವ! ಬಿನ್ನಹ ನೀವು ಕುಂತೀತನಯರನ್ನು ಬಿಡಿ ನನಗೆ ಬೆಂಬಲ ವಾಗಿ ಹಸ್ತಿನಾಪುರಕ್ಕೆ ಮರಳಿ" ಎಂದನು ಇದನ್ನು ಕೇಳಿ ಶಲ್ಯನ ಮನಸ್ಸು ಅಳುಕಿತು ಆದರೂ ಅವನು "ದುರ್ಯೋಧನ! ಧರ್ಮ ರಾಜನು ಸೋದರಳಿಯ ನೀನೂ ನಮ್ಮವನೇ ನನಗೆ ನೀವಿಬ್ಬರೂ ಸಮಾನ ನಿನ್ನ ಮನಸ್ಸಿನಂತೆ ನಿನ್ನಲ್ಲಿಗೇ ಬರುತ್ತೇನೆ ಸಂಸಾರವೆಂಬ ಮರಕ್ಕೆ ಬಂಧುದರ್ಶನವು ಫಲವಲ್ಲವೇ? ಪಾಂಡವರೈವರನ್ನೂ ನೋಡಿ ಬಹುದಿನಗಳಾದವು ಅವರನ್ನು ಈಗ ಹೋಗಿ ನೋಡಿ ನಾನು ಹಿಂತಿರುಗಿ ಬರುತ್ತೇನೆ. ಸೇನೆಯೊಡನೆ ನೀನು ವಾರಣಾವತಿಗೆ ಹೋಗು" ಎಂದು

ಹೇಳಿ, ತಾನು ಉಪಪ್ಲಾವ್ಯ ನಗರಿಗೆ ಬಂದನು ಶಲ್ಯನನ್ನು ಕಂಡೊಡನೆಯೇ ಪಾಂಡವರು ಆತನಿಗೆ ಕಾಣಿಕೆಯಿತ್ತು ಆಲಿಂಗಿಸಿ ಹರ್ಷಿಸಿದರು ಕುಶಲ ಪ್ರಶ್ನೆಯಾದಮೇಲೆ ಶಲ್ಯನು ದುಃಖಿಸಿ, ತಾನು ದುರ್ಯೋಧನನಿಗೆ ವಶವಾದ ರೀತಿಯನ್ನೆಲ್ಲ ಅವರಿಗೆ ವಿವರಿಸಿದನು

"ಮಕ್ಕಳಿರಾ! ರಾಜ್ಯಶ್ರೀಯು ನಿಮ್ಮದೇ ಆಗುತ್ತದೆ ನೀವು ಸತ್ಯಕ್ಕಾಗಿ ಹದಿಮೂರು ವರ್ಷಗಳು ನವೆದಿರುತ್ತೀರಿ ಮುಂದೆ ನಿಮಗೆ ಅನುಕೂಲ್ಯವುಂಟು ಇಂದ್ರನು ವೃತ್ರಾಸುರನನ್ನು ಕೊಂದ ಕಾರಣ ರಾಜ್ಯಸಂಪತ್ತನ್ನು ಕಳೆದುಕೊಂಡು ದುಃಖಿತನಾದ ಕೊನೆಗೆ ಶಚಿಯ ದೆಸೆಯಿಂದಲೂ, ಋಷಿಗಳ ಮಹಿಮೆಯಿಂದಲೂ ನಹುಷನನ್ನು ಇಂದ್ರ ಪದವಿಯಿಂದ ಕೆಳಕ್ಕೆ ನೂಕಿ ಪುನಃ ರಾಜ್ಯಲಕ್ಷ್ಮಿಯನ್ನು ಪಡೆಯಲಿಲ್ಲವೇ? ಅಂತೆಯೇ ನೀವೂ ಈಗ ರಾಜ್ಯವನ್ನು ಮತ್ತೆ ಪಡೆಯುವಿರಿ" ಎಂದನು

ಇದನ್ನು ಕೇಳಿ ಧರ್ಮರಾಜನು "ಮಾವ! ನೀವು ಕರ್ಣನಿಗೆ ಸಾರಥಿಯಾದರೆ ಯುದ್ಧ ಭೂಮಿಯಲ್ಲಿ ಅವನನ್ನು ನಿಂದಿಸಿ ತೇಜೋವಧೆ ಮಾಡಿ, ನಾವು ಗೆಲ್ಲುವಂತೆ ಪ್ರಯತ್ನಿಸಬೇಕು" ಎಂದು ಕೇಳಿಕೊಂಡು ಶಲ್ಯನನ್ನು ಸತ್ಕರಿಸಿ ಕಳುಹಿಸಿಕೊಟ್ಟನು ಶಲ್ಯನು ಹಸ್ತಿನಾವತಿಗೆ ತೆರಳಿದನು

ಎರಡು ಕಡೆಗೂ ಬರುವ ದೊರೆಗಳ ಗುಂಪನ್ನು ನೋಡಿದವರ ಕಣ್ಣು ಜೊಂಪಿಸುತ್ತಿತ್ತು ಕಾದುವವನ ಮನಸ್ಸು ಒಡೆದು ಮೂರು ಕವಲಾಗುತ್ತಿತ್ತು ರಾಜರ ಕತ್ತಿಗಳ ಕಾಂತಿ ಆಕಾಶದಲ್ಲಿ ಝಗಝಗಿಸುತ್ತಿತ್ತು ದಿಗಂತಗಳನ್ನು ದಾಟಿ ಸೇನೆಯು ಪ್ರಸರಿಸಿರುವಂತೆ ಕಾಣುತ್ತಿತ್ತು ಈವಿಧವಾದ ನೂತನಸೃಷ್ಟಿ ಆ ಹಳೆ ಬ್ರಹ್ಮನಿಗೆ ಸಾಧ್ಯವೇ! ಎನ್ನುವಂತಿತ್ತು "ಸೇನೆಯ ಭಾರಕ್ಕೆ ಆದಿಕೂರ್ಮನು ಕುಸಿಯನೇ' ಆದಿಶೇಷನು ನಾಶವಾಗದಿರುವನೇ? ದಿಗ್ಗಜಗಳು ಜೀವಂತವಾಗಿರುವುವೇ?" ಎಂದು ಸಂಶಯವನ್ನುಂಟುಮಾಡುವಂತೆ ಸೇನೆಯು ಬರುತ್ತಿತ್ತು ಚೋಳ, ಪಾಂಡ್ಯ, ಕೇರಳ, ಶಿಶುಪಾಲನಂದನನಾದ ಧೃಷ್ಟಕೇತು, ವರಾಳ, ಮಾಗಧ, ಚೀನ, ಭೋಟಕ, ಬರ್ಬರ ಮೊದಲಾದ ದೇಶದ ರಾಜರು ತಮ್ಮತಮ್ಮ ಬಲದೊಡನೆ ಭೀಮನನ್ನು ಬಂದು ಕಂಡರು ಭಗದತ್ತನೇ ಮೊದಲಾದ ರಾಜರು ಕೌರವರ ಕಡೆಗೆ ಬಂದು ಸೇರಿದರು

ಬುದ್ಧಿವಂತನಾದ ದ್ರುಪದರಾಜಪುರೋಹಿತನು ಹಸ್ತಿನಾಪಟ್ಟಣಕ್ಕೆ ಹೋಗಿ ಕೌರವನನ್ನು ಕಂಡು ಅವನೊಡನೆ ರಾಜಕಾರ್ಯವನ್ನು ಮಾತಾಡಿದನು ದ್ರೋಣಕೃಪಭೀಷ್ಮರುಗಳ ಮಾತನ್ನೂ ಲೆಕ್ಕಿಸದೆ ದುರ್ಯೋಧನನು ಚಪಳಕರ್ಣನೊಡನೆ ಯೋಚಿಸಿ ಪಾಂಡವರೊಡನೆ ಯುದ್ಧಮಾಡಲು ನಿಶ್ಚೈಸಿದನು ಹರ್ಷದಿಂದ ಆತನು ಕೂಡಲೆ ಸಂಜಯನನ್ನು ಕರೆಸಿ "ಸಂಜಯ! ನೀನು ಶತ್ರುಪಾಳಯಕ್ಕೆ ಹೋಗು ಅಲ್ಲಿ ಪಾಂಡವರನ್ನು ಕುರಿತು, ನೀವು ರಾಜ್ಯವನ್ನು ಬೇಡಿಸಿ ಕಳುಹಿಸಿರು

ತ್ತೇರಿ ಅದನ್ನು ಯುದ್ಧದಲ್ಲಿ ಅಸಿಧಾರೆಯಲ್ಲಿ ಕೊಡುತ್ತೇವೆ ಸುಮ್ಮನೆ ಕೊಟ್ಟರೆ ಅದು ಕ್ಷತ್ರಿಯರಿಗೆ ಅಧರ್ಮವು ಎಂಬುದನ್ನು ಅವರಿಗೆ ತಿಳಿಸಿ ಬಾ " ಎಂದು ಹೇಳಿಕಳುಹಿಸಿದನು.

ಮಂತ್ರಿಯಾದ ಸಂಜಯನು ಪಾಂಡವರ ಪಾಳಯಕ್ಕೆ ಪ್ರಯಾಣ ಮಾಡಿದನು ಧರ್ಮರಾಜನು ಸಂಜಯನು ಬಂದಿರುವುದನ್ನು ಕೇಳಿ ಒಡ್ಡೋಲಗವನ್ನು ರಚಿಸಿದನು.

ಧರ್ಮರಾಜನ ಬಲಗಡೆ ಕೃಷ್ಣ ವಿರಾಟ ದ್ರುಪದ ಕೈಕೆಯರೂ, ಎಡ ಗಡೆ ಭೀಮ ಅರ್ಜುನ ನಕುಲ ಸಹದೇವರೂ, ಮಂತ್ರಿಗಳೂ, ಹಿಂದೆ ರಾಜ ಸ್ತ್ರೀಯರೂ, ಪರಿಮಳದವರೂ, ಮುಂದೆ ಕರಣಿಕರೂ, ವೈದ್ಯರೂ ಕವಿ ಗಳೂ ತಾರ್ಕಿಕರೂ, ಭರತಶಾಸ್ತ್ರನಿಪುಣರೂ, ಪಾರಕರೂ, ಪಾಡಿಗಳೂ, ಕರಿತುರಗಶಿಕ್ಷಕರೂ, ಉಪಹಾಸಕರೂ, ವೈತಾಳಿಕರೂ, ಚಿತ್ರಕಾರರೂ, ಮಲ್ಲರೂ, ಮಾವತರೂ, ರಾವುತರೂ, ಶಿಲ್ಪಿಗಳೂ, ಮಾಯಾವಿಗಳೂ, ಮೂಕರೂ, ವಾಮನರೂ ಮೃಗಜೀವಿಗಳೂ, ಶಕುನಜ್ಞರೇ ಮೊದಲಾದ ವರೂ, ಸಾಮಂತರಾಜರೂ ಸಾಲುಸಾಲಾಗಿ ಕುಳಿತಿದ್ದರು

ಧರ್ಮರಾಜನ ಈ ಓಲಗವು ಇಂದ್ರನ ಸಭೆಗೆ ಮಿಗಿಲಾಗಿದ್ದಿತು ಕಂಚುಕಿಗಳು ಎಚ್ಚರಿಸಲು ಸಭೆಯು ನಿಶ್ಶಬ್ದವಾಯಿತು ಬಳಿಕ ಕೃಷ್ಣನು ಸಭೆಗೆ ಸಂಜಯನನ್ನು ಕರೆಸಿದನು ಸಂಜಯನು ಬಂದು ರಾಜನಿಗೆ ಕಾಣಿಕೆ ಇತ್ತು ಹರ್ಷದಿಂದ ಆತನಿಗೆ ನಮಸ್ಕರಿಸಿ, ಅಕ್ಕಪಕ್ಕದಲ್ಲಿದ್ದ ರಾಜರನ್ನೂ, ಆಯುಧಧಾರಿಗಳಾದ ಯುದ್ಧಪ್ರಚಂಡರನ್ನೂ ಕಂಡು ಹೆದರಿ ಬೆರಗಾದನು "ರಾಜ್ಯ ಹೋಗಿ ಪಾಂಡವರು ಹನ್ನೆರಡು ವರ್ಷಗಳ ಕಾಲ ಕಾಡಿನಲ್ಲಿ ಕಷ್ಟಪಟ್ಟರು ಎಷ್ಟು ಕ್ಷಿಪ್ರಕಾಲದಲ್ಲಿ ಭೂಮಂಡಲದ ರಾಜರೆಲ್ಲ ಇಲ್ಲಿ ನೆರೆದಿರುತ್ತಾರೆ!" ಎಂದು ಆಶ್ಚರ್ಯಚಕಿತನಾಗಿ, ಸಂಜಯನು "ಕೃಷ್ಣನಿಗೆ ದೊರೆಯದಿರುವುದು ಏನುಂಟು? ಮುರರಿಪು ಕೋಪಿಸಿದರೆ ಯಾರನ್ನು ತಾನೆ ಮುರಿಯಲಾರ?" ಎಂದು ಮನಸ್ಸಿನಲ್ಲೇ ಯೋಚಿಸಿ, ಕೌರವನು ಕಳುಹಿಸಿದ್ದ ಉಡುಗೊರೆಗಳನ್ನು ಆತನು ಕೊಡಲು ಧರ್ಮರಾಜನು ಅವನ್ನು ಸ್ವೀಕರಿಸಿದನು ಬಳಿಕ ಧರ್ಮರಾಜನು, "ದೊಡ್ಡಪ್ಪನು ಮಕ್ಕಳನ್ನು ಮರೆಯಲಾರ, ಆತನಿಗೆ ನಮ್ಮಲ್ಲಿ ಪ್ರೀತಿಯಿಲ್ಲವೇ? ಎಂದು ಹೇಳಿ, ಸಂಜಯ! ಧೃತರಾಷ್ಟ್ರ, ಗಾಂಧಾರೀದೇವಿ, ಭೀಷ್ಮ, ದ್ರೋಣ, ಕೃಪ ಇವರೆಲ್ಲರೂ ಕುಶಲರೇ? ಗುರುಸುತನು ಕ್ಷೇಮಿಯೇ? ಕುರುಪತಿಯು ಹೇಗಿದ್ದಾನೆ? ಆತನ ಸಹೋದರರು, ಮಕ್ಕಳು, ಭಾನುಮತಿ ಉಳಿದ ಅರಸಿಯರು ಕರ್ಣ ಮೊದಲಾದವರು ಹೇಗಿದ್ದಾರೆ?" ಎಂದು ಪ್ರಶ್ನಿಸಿದನು ಅದಕ್ಕೆ ಸಂಜಯನು, "ಜೀಯ! ಎಲ್ಲರೂ ಸುಖಿಗಳು ಕೌರವ ಭೀಷ್ಮ ದ್ರೋಣ ಗೌತಮರು, ನಿಮ್ಮ ಬಾಂಧವ ಪರಿಜನರೇ ಆದಿ ಯಾಗಿ ಎಲ್ಲರ ಕುಶಲವನ್ನೂ ವಿಚಾರಿಸುವಂತೆ ತಿಳಿಸಿ ನನ್ನನ್ನು ಕಳುಹಿಸಿರು

ತ್ತಾರೆ" ಎಂದನು ಇದನ್ನು ಕೇಳಿ ಧರ್ಮರಾಜನು ನಗುತ್ತ "ಭೀಷ್ಮ ದ್ರೋಣ ಗೌತಮರ ಕಾರುಣ್ಯಾತಿಶಯದಿಂದ ಮೊದಲು ನಾವು ಬಲಯುತ ರಾಗಿದ್ದೇವೆ, ಮತ್ತು ಧರ್ಮವನ್ನೂ ಆಚರಿಸಿದ್ದೇವೆ ಇನ್ನು ಧೃತರಾಷ್ಟ್ರನು ತನ್ನ ಮಕ್ಕಳ ಬಾಂಧವ್ಯವನ್ನು ಚೆನ್ನಾಗಿ ಕಾಯುತ್ತಾನೆ" ಎಂದು ಹೇಳಿ ದನು

ಬಳಿಕ ಕೃಷ್ಣನು "ಸಂಜಯ! ನೀನು ಬಂದ ಕಾರ್ಯವೇನು? ಕೌರವರು ಏನೆಂದರು? ಕೌರವೇಶ್ವರನು ಏನನ್ನು ಹೇಳಿಕಳುಹಿಸಿದ್ದಾನೆ? ಅವರ ಮಾತುಗಳು ವಿನಯದಿಂದ ಕೂಡಿದ್ದರೂ ಇರಲಿ, ಶೌರ್ಯಯುತ ವಾಗಿದ್ದರೂ ಆಗಲಿ, ಸ್ವಲ್ಪವೂ ಬಿಡದೆ ಹೇಳು" ಎಂದು ಕೇಳಿದನು ಆಗ ಸಂಜಯನು "ಪಾಂಡವರಿಗೆ ರಾಜ್ಯಾಭಿಲಾಷೆ ಇದ್ದರೆ ನಮ್ಮೊಡನೆ ಯುದ್ಧ ಮಾಡಲಿ, ಸಂಧಿಗೆ ಮನಸ್ಸು ಮಾಡದಿರಲಿ ಸಂಧಿಯು ವೀರಕ್ಷತ್ರಿಯರಿಗೆ ಮತವೇ? ಯಾಚಿಸುವವರು ದೊರೆಗಳೇ? ಅದನ್ನು ನಾವು ಹೇಳಬಾರದು ಪಾಂಡವರು ತಮ್ಮ ಜನನವನ್ನು ನೋಡಿ ಮಾತಾಡಲಿ ಅವರು ಪಾಂಡು ವಿನ ಸುತರಲ್ಲ ಮೊದಲು ಬ್ರಹ್ಮಚರ್ಯಾಶ್ರಮ, ಮದುವೆಯಾದಮೇಲೆ ಗೃಹಸ್ಥಾಶ್ರಮ, ಬಳಿಕ ಕಾಡಿನಲ್ಲಿ ವಾನಪ್ರಸ್ಥಾಶ್ರಮ, ಕೊನೆಗೆ ಸನ್ನ್ಯಾ ಸಾಶ್ರಮವನ್ನು ಸ್ವೀಕರಿಸಿದ ಧರ್ಮರಾಜನು, ಈಗ ರಾಜ್ಯಕ್ಕಾಗಿ ಅಭಿ ಲಾಷೆಪಡುವುದು ಅನುಚಿತ ಯೌವನಮದದಿಂದಿರುವ ಭೀಮಾರ್ಜುನ ರಲ್ಲಿ ನಮ್ಮ ಮೇಲ ವೈರವನ್ನು ಬಿತ್ತಿ ಬೆಳಸುವ ಕೃಷ್ಣ ನಮಗೆ ಶತ್ರು, ಉಳಿದ ದ್ರುಪದ ವಿರಾಟರಾದಿಯಾದ ರಾಜರು ಹುಳುಗಳಂತೆ ನಶಿಸಿ ಹೋಗುವವರು ನಾನು ಮಾತ್ರ ಕೊನೆಗೆ ಕೆಡದಿರುವವನು" ಎಂದು ದುರ್ಯೋಧನನು ಹೇಳಿ ಕಳುಹಿಸಿದಂತೆ ತಿಳಿಸಿದನು

ಇದನ್ನು ಕೇಳಿ ಭೀಮನು "ಸಾಕು, ಆ ಕೌರವನಾಯಿಯ ಮಾತನ್ನು ಏಕೆ ಕೇಳುತ್ತೀರಿ ದೂತನನ್ನು ತಳ್ಳಿ ತಳ್ಳಿ, ತಡವೇಕೆ? ಆ ಕೇಡಿಗ ದುರ್ಯೋಧನನ್ನು ಕೊಂದು ಶಾಕಿನಿಯರಿಗೆ ಆತನ ರಕ್ತದಿಂದ ಓಕುಳಿಯಾಡಿಸುತ್ತೇನೆ" ಎಂದು ಘುಡುಘುಡುಸಿ ಕಿಡಿಕಿಡಿಯಾದ

"ಧರ್ಮದ ದೆಸೆಯಿಂದ ಹಿಂದೆ ನಮಗೆ ಜೂಜಿನಿಂದಾದ ತೊಂದ ರೆಯೇ ಸಾಕು ನಮಗೆ ಅಪ್ಪಣೆಕೊಟ್ಟು ಕಳುಹಿಸಿ ಕೌರವಕುಲವನ್ನೇ ದಿಕ್ಕುದಿಕ್ಕಿನ ದೇವತೆಗಳಿಗೆ ಉಪಹಾರಕೊಡುತ್ತೇವೆ" ಎಂದು ಅಭಿಮನ್ಯು ಸಾತ್ಯಕಿ ಘಟೋತ್ಕಚರು ಗರ್ಜಿಸಿದರು

"ಹಗೆಗಳನ್ನು ಹಲ್ಲುಗಳು ಉದುರುವಂತೆ ಹೊಡೆಯುತ್ತೇವೆ ಕಿಬ್ಬೊಟ್ಟೆಯನ್ನು ಸೀಳಿ, ಶತ್ರುಗಳ ಕರುಳನ್ನು ಎಳೆದು ಚರ್ಮವನ್ನು ಸುಲಿಯುತ್ತೇವೆ ಅಪ್ಪಣೆ ಕೊಡು" ಎಂದು ಅತಿರಥರೇ ಮೊದಲಾದ ರಾಜರು ತಾವು ತಾವೇ ಎದ್ದುನಿಂತು ಘೋಷಿಸಿದರು ಈ ಧ್ವನಿಯಿಂದ ಆಸ್ಥಾನವು ಅಲ್ಲಾಡಿತು ಇದನ್ನು ಕೇಳಿದ ಧರ್ಮರಾಜನು ಆತನಿಂದ

ನಮಗೆ ಒಳ್ಳೆಯದು ಏನಾಗುತ್ತದೆ? ಕೆಟ್ಟದ್ದು ತಾನೆ ಏನಾಗುತ್ತದೆ? ಹಿಂದೆ ನಾವು ಅನುಭವಿಸಿದ ವನವಾಸವು ಆತನಿಂದಲೇ ಬರಲಿ, ಯಾತನೆಯನ್ನು ಅನುಭವಿಸಿಯೇ ಸ್ಥೈರಣೆಯಿಂದಿರುವ ನಮಗೆ ಆತನು ನುಡಿದ ಮಾತ್ರಕ್ಕೆ ಹಾನಿಯೇ? ತವಕಪಡಬೇಡಿ, ಸ್ಥೈರಿಸಿ" ಎಂದು ಅವರನ್ನು ಸಮಾಧಾನ ಪಡಿಸಿದನು

ಆ ದಿವಸ ಸಂಜಯನನ್ನು ಬಿಡಾರಕ್ಕೆ ಕಳುಹಿಸಿ ಮಾರನೆಯ ದಿನ ಆತನನ್ನು ಕೃಷ್ಣಪಾರ್ಥರು ಸಭೆಗೆ ಕರೆಸಿದರು. ಓಲಗಕ್ಕೆ ಬಂದ ಸಂಜಯನನ್ನು ಧರ್ಮರಾಜನು "ಸಂಜಯ! ದೊಡ್ಡಪ್ಪ, ಗಾಂಧಾರಿ, ದುರ್ಯೋಧನ, ಆತನ ಸಹೋದರರು, ರಾಣಿಯರು, ದುಶ್ಶಳೆ, ಸೈಂಧವ, ಕರ್ಣ, ಶಕುನಿ, ಬಾಹ್ಲಿಕ, ಶಲ್ಯ, ಭಗದತ್ತ, ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ ಇವರನ್ನು ಮನ್ನಿಸಿದೆವೆಂದೂ, ಪುರೋಹಿತರು, ಸಾಮಂತರು, ವೈದ್ಯರು, ವಿದುರ, ಅರಮನೆಯ ವಿಶ್ವಾಸಿಗಳು, ಆಸ್ಥಾನಗಣಿಕೆಯರು, ಗಜವಾಜಿಶಾಲಾಧ್ಯಕ್ಷರು, ಬಾಹತ್ತರ ನಿಯೋಗದವರು, ಪ್ರತಿಹಾರರು, ಪೌರರು ಇವರೆಲ್ಲರ ಕುಶಲವನ್ನು ಕೇಳಿದೆವೆಂದೂ ಹೇಳು", ಎಂದು ತಿಳಿಸಿ ಸವಿಮಾತುಗಳಿಂದಲೂ, ಕನಕಾಭರಣ, ಭೋಜನ, ಉಡುಗೊರೆ ಗಳಿಂದಲೂ, ಆತನನ್ನು ಸತ್ಕರಿಸಿ ಬೀಳ್ಕೊಟ್ಟನು

ಸಂಜಯನು "ಪನ್ನಗಶಾಯಿಯಾದ ಕೃಷ್ಣನು ಬೆಂಗಾವಲಾಗಿರಲು, ಪಾಂಡವರಿಗೆ ಇನ್ನು ಮಂಗಳವು ಖಂಡಿತ" ಎಂದು ಹೇಳುತ್ತ ಹಸ್ತಿ ನಾವತಿಗೆ ಹಿಂತಿರುಗಿಬಂದು ಧೃತರಾಷ್ಟ್ರನ ಅರಮನೆಗೆ ಹೋಗಿ, ಸಂಗ್ರಹವಾಗಿ ಒಂದೆರಡು ಮಾತಿನಲ್ಲಿ ರಾಜನಿಗೆ ನಡೆದ ಸಮಾಚಾರವನ್ನು ಸೂಚಿಸಿ ತನ್ನ ಮನೆಗೆ ಹೋದನು.

## ೩ನೆಯ ಸಂಧಿ

ಆ ದಿನ ರಾತ್ರಿ ಧೃತರಾಷ್ಟ್ರನಿಗೆ ನಿದ್ರೆ ಬರಲಿಲ್ಲ ಆತನು ವಿದುರನನ್ನು ಕರೆಸಿ, ನಿಟ್ಟುಸಿರು ಬಿಟ್ಟು "ವಿದುರ! ನಾಳೆ ಸಂಜಯನು ಸಭೆಯಲ್ಲಿ ಸುದ್ದಿಯನ್ನು ಹೇಳುತ್ತಾನೆ, ಮುಂದಾಗುವುದು ಸಂಧಿಯೋ? ಯುದ್ಧವೋ? ತಿಳಿಯಲಾಗದೆ ನನಗೆ ಚಿಂತೆಯಾಗಿದೆ ಸತ್ಯಾಂಶವನ್ನು ತಿಳಿಸು, ಈ ರಾತ್ರಿ ನನಗೆ ನಿದ್ರೆ ಬರುವುದಿಲ್ಲ" ಎಂದು ಕೇಳಿದನು ಅದಕ್ಕೆ ವಿದುರನು "ಬಲಿಷ್ಠನೊಡನೆ ವ್ಯವಹರಿಸುವ ದುರ್ಬಲನು, ಅರ್ಥ ಕಾಮ ಚೌರ್ಯ ಈ ಚಿಂತೆಗಳಿಂದ ಮರುಗುವವನು, ದೈವದ ನೆಲೆಯನ್ನು ತಿಳಿಯ ದವನು, ಇವರಿಗೆ ನಿಶ್ಚಯವಾಗಿಯೂ ನಿದ್ರೆ ಬರುವುದಿಲ್ಲ" ಎಂದು ಹೇಳಿ ಧೃತರಾಷ್ಟ್ರನಿಗೆ ನಯನೀತಿ ಧರ್ಮಗಳ ವಿಚಾರವನ್ನು ತಿಳಿಸಿದನು

"ಧೃತರಾಷ್ಟ್ರನೆ! ಕೇಳು ಹಾವು ಹೆಚ್ಚು ಮರಿಗಳನ್ನು ಪಡೆದು ಲೋಕಕ್ಕೆ ಸಾವನ್ನು ತರುವಂತೆ, ನೀನು ಭೂಭಾರರಾದ ನೂರು

ಮಕ್ಕಳನ್ನು ಪಡೆದು ಅವರನ್ನು ಕೆಡಿಸಿರುತ್ತೀಯೆ. ಯೋಚಿಸಿದರೆ, ಸುಗುಣನಾದ ಅರ್ಜುನನಂತಹ ಮಗನೊಬ್ಬನು ಸಾಲದೇ? ನಾಡನಾಯ್ಗಳಾದ ನಿನ್ನ ಮಕ್ಕಳಿಂದ ಏನು ಪ್ರಯೋಜನ ?

ದ್ವೀಪದ್ವೀಪಗಳಲ್ಲಿ ಹುಟ್ಟಿ ಕರ್ಮಾನುಗುಣವಾದ ಫಲಗಳನ್ನು ಅನುಭವಿಸಿ, ನಾನಾರೂಪಗಳಿಂದ ಆರ್ಜಿಸಿದ ಸುಕೃತದ ವಿಚಾರವೇತಕ್ಕೆ ?

ರಾಜನೇ! ಕೇಳು ಸ್ವರ್ಗಕ್ಕೆ ಸತ್ಯವೇ ಸೋಪಾನ ಜನ್ಮಸಮುದ್ರಕ್ಕೆ ಸತ್ಯವೇ ನಾವೆ.

ಈ ಭೂಮಂಡಲದಲ್ಲಿ ರಾವಣ ದುರ್ಯೋಧನರಿಬ್ಬರೇ ಮೂರ್ಖರು ರಾವಣನು ಅಶೋಕವನಭಂಗದಿಂದಲೂ, ದುರ್ಯೋಧನನು ಉತ್ತರಗೋಗ್ರಹಣದ ಪರಾಜಯದಿಂದಲೂ ಶತ್ರುರಾಜರ ಸತ್ವಾತಿಶಯವನ್ನು ತಿಳಿದೂ ಎಚ್ಚರಗೊಳ್ಳದೆ ಮರುಳರಾಗಿದ್ದಾರೆ ಇದು ನ್ಯಾಯವೇ? ಹೇಳು

ತನ್ನ ಸುಖದುಃಖಗಳಲ್ಲಿ ಭಾಗಿಗಳಾಗುವ ಬಂಧುಗಳನ್ನು ಬಿಟ್ಟು, ಮೋಸದಿಂದ ಸ್ವಾರ್ಥವನ್ನು ಸಾಧಿಸಿ, ಕಷ್ಟಕಾಲದಲ್ಲಿ ಜಾರುವ ದುಷ್ಟರೊಡನೆ ಕೂಡಿ ಅವರನ್ನು ಬಹುಮಾನಿಸುವುದು ತನ್ನನ್ನು ತಾನೇ ಕೊಂದುಕೊಂಡಂತಲ್ಲವೇ ?

ತಂದೆ ಇರಲು ಮಗನಿಗೆ ಸ್ವಾತಂತ್ರ್ಯವಿಲ್ಲ, ಯಜಮಾನನಿರಲು ದಾಸನಿಗೆ ಸ್ವಾತಂತ್ರ್ಯವಿಲ್ಲ, ಗಂಡನಿರಲು ಹೆಂಡತಿಗ ಸ್ವಾತಂತ್ರ್ಯವಿಲ್ಲ

ನಿಂದ್ಯಕಾರ್ಯಗಳನ್ನು ಬಿಟ್ಟು ಲೋಕಕ್ಕೆ ಹಿತವಾದ ಕೆಲಸಗಳನ್ನು ಮಾಡುವವನು ಭೂಲೋಕದಲ್ಲಿ ಉತ್ತಮನು

ಐಶ್ವರ್ಯ ಸ್ಥಿರವೇ ? ಯೌವನ ಸ್ಥಿರವೇ? ಶರೀರಕಾಂತಿ ಸ್ಥಿರವೇ? ದೇಹವು ಸ್ಥಿರವೇ ? ನೀನು ರಾಜನಾಗಿರುವವರೆಗೂ ನೀತಿಯಿಂದ ರಾಜ್ಯವನ್ನು ಕಾಪಾಡು ಬಂಧುಗಳನ್ನು ಆದರಿಸು ಧರ್ಮದಿಂದಿರು ಇದೇ ರಾಜರಿಗೆ ನೀತಿ

ಈಗ ಭೂಮಂಡಲದಲ್ಲಿ ಐಶ್ವರ್ಯ, ಮಕ್ಕಳು, ಒಡಹುಟ್ಟಿದವರು, ಸಪ್ತಾಂಗ, ಸತಿಯರು, ಗುರು, ಪಿತಾಮಹ, ಬಂಧುಗಳು ಮತ್ತು ಮಿತ್ರರುಗಳಲ್ಲಿ ನಿನಗೆ ಕೊರತೆಯಾವುದು? ನೀನು ಕೌಂತೇಯರನ್ನು ಈ ರೀತಿ ಅಸಹಾಯರನ್ನಾಗಿ ಮಾಡುವುದು ನ್ಯಾಯವಲ್ಲ

ಸನ್ಯಾಸಿಗೆ ದುಷ್ಟಸಹವಾಸ, ರಾಜನಿಗೆ ದುರ್ಮಂತ್ರಿ, ಮಗನಿಗ ಲಾಲನೆ, ಕೃಷಿಗ ಉಪೇಕ್ಷೆ, ಬುದ್ಧಿಗೆ ಮದ್ಯಪಾನ, ಸದ್ಗತಿಗೆ ದುರ್ವ್ಯಸನ, ಸತಿಗೆ ಸ್ವಾತಂತ್ರ್ಯ ಇವು ಕೆಡಲು ಕಾರಣ

ಸೂರ್ಯನಾದರೂ ಪಶ್ಚಿಮದಲ್ಲಿ ಉದಿಸಬಹುದು, ಬೆಂಕಿಯಾದರೂ ಶೀತಲವಾಗಬಹುದು ಮೇರುಪರ್ವತವಾದರೂ ಅಲ್ಲಾಡಬಹುದು ಪರ್ವತಶಿಖರದಲ್ಲಾದರೂ ಕಮಲವು ಅರಳಬಹುದು ಸತ್ಪುರುಷರು ಎಂದೂ ಆಡಿದ ಮಾತಿಗೆ ತಪ್ಪುವುದಿಲ್ಲ

ನಾಯಿಗಳ ಮಾತನ್ನು ಕೇಳಿ ನೀನು ಸುಮ್ಮನೆ ಕೆಡಬೇಡ ಯುಧಿಷ್ಠಿರನನ್ನು ಕರೆಸು ಭೀಷ್ಮಾದಿಗಳನ್ನು ಮುಂದಿಟ್ಟುಕೊಂಡು ನ್ಯಾಯವಾಗಿ ಅವನಿಗೆ ಸಲ್ಲಬೇಕಾದ ಅರ್ಧರಾಜ್ಯವನ್ನು ಕೊಟ್ಟು ನೀನು ಮಕ್ಕಳೊಡನೆ ಬದುಕುವುದು ಮಂಗಳಕರವು

ಶಿವನ ಕೊರಳಿನಲ್ಲಿ ಆಭರಣವಾಗಿದ್ದರೂ ಹಾವಿಗೆ ಹೇಗೆ ಗಾಳಿಯೇ ಆಹಾರವೋ, ಅಂತೆಯೇ ನಿನ್ನ ವಂಶದಲ್ಲಿ ಹುಟ್ಟಿದ್ದರೂ ಪಾಂಡವರು ನಿನ್ನೆದುರಿನಲ್ಲೇ ವನವಾಸಮಾಡಿ ಜೀವಿಸುತ್ತಿರುವುದು ನ್ಯಾಯವೇ ? ಹೇಳು

ಭೂಮಂಡಲದಲ್ಲಿ ಚಕ್ರವರ್ತಿಗಳು ಆರು ಜನ ಅದರಿಗೆ ಕೃಷ್ಣನ ಚಕ್ರವೇ ಸಹಾಯ ಈಗ ಶ್ರೀಕೃಷ್ಣನೇ ಬಂದು ಪಾಂಡವರ ಸೇನೆಯಲ್ಲಿರುವಾಗ ಯುಧಿಷ್ಠಿರನಿಗೆ ಸರಿಸಮಾನನು ಯಾರು ?

ದಮಯಂತಿ–ನಳಮಹಾರಾಜ, ಸೀತೆ–ರಾಮ, ದ್ರೌಪದಿ–ಯುಧಿಷ್ಠಿರ, ಈ ಆರು ಜನರು ಉತ್ತಮ ಕೀರ್ತಿವಂತರು ಹೀಗಿರುವಾಗ ನೀವು ಧರ್ಮರಾಜನನ್ನು ಜಯಿಸುವ ವಿಧಾನವಾದರೂ ಯಾವುದು ?

ರಾಜನೇ ! ಕೇಳು ಸ್ಕಂದ, ರಾಮ, ಹನುಮಂತ, ಭೀಮಸೇನ, ಗರುಡ ಈ ಐವರನ್ನು ಸ್ಮರಿಸುವುದರಿಂದಲೇ ಕಷ್ಟಗಳು ನಿವಾರಣೆಯಾಗುವಾಗ, ನೀವು ಭೀಮನನ್ನು ಯುದ್ಧದಲ್ಲಿ ಹೇಗೆತಾನೆ ಜಯಿಸುತ್ತೀರಿ ? ಭೀಮಸೇನನು ಈಶ್ವರಭಕ್ತ ಈ ಮೃತ್ಯುಂಜಯನೊಡನೆ ನಿನಗೆ ಸರಸವೇ ? ನಿನ್ನ ಶಕ್ತಿಯನ್ನು ತಿಳಿಯದೆ ನೀನು ಮರಳಾಗಬಹುದೇ ? ಭೀಮನಿಗೆ ನೀನು ಸಮಾನನೇ ? ಅರ್ಜುನನು ಸುಲಭನೇ ? ಆತನು ಬಲಿ ವಿಭೀಷಣ ಭೀಷ್ಮ ನಾರದರಂತೆ ಕೃಷ್ಣನ ಭಕ್ತನಲ್ಲವೇ ? ಅರ್ಜುನನ ಪರಾಕ್ರಮ ನಿನಗೆ ತಿಳಿಯದೇ ? ತಿಳಿದೂ ತಿಳಿಯದವನಂತೆ ನೀನು ಮರುಳಾಗುವೆಯಾ ? ಕೃಷ್ಣಾರ್ಜುನರು ಎಲ್ಲಿರುವರೋ ಅಲ್ಲಿ ಜಯ ಖಂಡಿತ ಪಾಂಡವರಿಗೆ ನೀನು ಸಮನಲ್ಲ ಎನ್ನುವುದು ತಿಳಿದವರಿಗೆ ಗೊತ್ತೇ ಇದೆ ಹಿಂದೆ ಬಂದ ವಿಪತ್ಪರಂಪರೆಗಳ ಅರಿವು ನಿಮಗೆ ಇದ್ದೇ ಇದೆ ಗೋಗ್ರಹಣ, ದ್ರೌಪದೀವಿವಾಹ, ಘೋಷಯಾತ್ರೆ ಇವುಗಳಲ್ಲಿ ಬಂದ ಭಂಗಗಳನ್ನು ತಿಳಿದೂತಿಳಿದು ಪಾಂಡವರೊಡನೆ ಯುದ್ಧಸನ್ನಾಹ ಮಾಡುವೆಯಾ ?'' ಎಂದಿವೇ ಮೊದಲಾದ ಸಕಲನೀತಿರಹಸ್ಯಗಳನ್ನು ವಿದುರನು ವ್ಯಕ್ತವಾಗಿ ತಿಳಿಸಿ, "ರಾಜನೇ ! ಕೇಳು , ತತ್ತ್ವಜ್ಞಾನವನ್ನು ತಿಳಿಯುವ ಆಸಕ್ತಿ ಇದ್ದರೆ ಸನತ್ಸುಜಾತನನ್ನು ನೆನೆ ಆತನು ಮುಕ್ತಿಪ್ರದಾಯಕವಾದ ಅಮಲಬ್ರಹ್ಮವಿದ್ಯೆಯನ್ನು ನಿನಗೆ ಉಪದೇಶಿಸಿ ನಿನ್ನ ಮನಸ್ಸಿನ ವ್ಯಾಕುಲತೆಯನ್ನು ಹೋಗಲಾಡಿಸಿ ನಿನ್ನನ್ನು ರಕ್ಷಿಸುತ್ತಾನೆ " ಎಂದನು

## ೪ನೆಯ ಸಂಧಿ

ವಿದುರನು ಬೋಧಿಸಿದ ನೀತಿಯಿಂದ ಧೃತರಾಷ್ಟ್ರನ ಮನಸ್ಸು ಶುದ್ಧ ವಾಯಿತು ಬಳಿಕ ಆತನು ಆತ್ಮವಿದ್ಯೆಯನ್ನು ತಿಳಿಯಲು, ವಿದುರನು ತಿಳಿಸಿದಂತೆ ಸನತ್ಸುಜಾತನನ್ನು ನೆನೆದು ಭಜಿಸಲು, ಆ ಮುನಿಯು ಕೃಪೆ ಮಾಡಿ ಬಂದನು ಆಗ ಧೃತರಾಷ್ಟ್ರನು ಎದ್ದು ಆತನಿಗೆ ನಮಸ್ಕರಿಸಿ ಆತ್ಮ ವಿದ್ಯೆಯನ್ನು ಉಪದೇಶ ಮಾಡಬೇಕೆಂದು ಪ್ರಾರ್ಥಿಸಲು ಆತನು ಪರ ಲೋಕಸಾಧನವನ್ನು ಧೃತರಾಷ್ಟ್ರನಿಗೆ ತಿಳಿಸಿದನು

"ಧೃತರಾಷ್ಟ್ರ ! ಕೇಳು ಈ ಶರೀರವು ಸ್ಥಿರವಲ್ಲ ಸಿರಿಯು ಮೃತ್ಯು ದೇವತೆಯ ಮಾಯಾಸ್ವರೂಪ ಆ ದೇವತೆಯು ಮಾನವನ ಕಾಲ ಗತಿಗಾಗಿ ಬಾಯಿಬಿಟ್ಟು ಎದುರು ನೋಡುತ್ತಿದ್ದಾಳೆ ಇದನ್ನು ತಿಳಿದ ಮಹಾತ್ಮರೂ ಇದಕ್ಕೇ ಸಹಾಯಕರು ಆದಕಾರಣ ಧರ್ಮಮಾಡಿ ಮುಕ್ತಿರಾಜ್ಯವನ್ನು ಪಡೆಯಬೇಕು

ಹಸುಗಳ ಮೈಬಣ್ಣ ಬೇರೆಬೇರೆಯಾದರೂ, ಅವುಗಳ ಹಾಲಿನ ಬಣ್ಣ ಮಾತ್ರ ಒಂದೇ ಅಂತೆಯೇ ಕ್ರಮವಾದ ದಾರಿಯನ್ನು ಬಿಟ್ಟು ಚರಾಚರ ಗಳ ಸುಳಿವಿನಲ್ಲಿ ಸುಳಿದು ಮರೆಯಾಗಿ ಕೊನೆಯಲ್ಲಿ ನಿಲ್ಲುವುದು ನಿಜವೊಂದ ಲ್ಲದೆ ಮತ್ತೊಂದಿಲ್ಲ

ಲೋಕವು ಕೆಟ್ಟವರಿಗೆ ಹೆದರುತ್ತದೆ, ಸಜ್ಜನರನ್ನು ಲೆಕ್ಕಿಸುವುದಿಲ್ಲ ಈ ಕಾರಣದಿಂದಲೇ ಗರುಡನನ್ನೂ, ವಿಷ್ಣುವಿನ ಶಯ್ಯೆಯಾದ ಹಾವನ್ನೂ ಜನರು ಅರ್ಚಿಸುತ್ತಾರೆ

ಜ್ಞಾನಿಗಳನ್ನು ಒಪ್ಪಿಸಬಹುದು ಅಜ್ಞಾನಿಗಳನ್ನಾದರೂ ಒಮ್ಮೆ ಸಮ್ಮತಿಸುವಂತೆ ಮಾಡಬಹುದು ಅಲ್ಪಜ್ಞನಿಗ ತಿಳಿಸುವುದು ದೇವರಿಗೂ ಸಾಧ್ಯವಾಗದಿರುವಾಗ ಮನುಷ್ಯರ ಪಾಡೇನು ? ಈ ದೇಹದಲ್ಲಿ ಜೀವ ವಿರುವವರೆಗೂ, ರಾಜ, ಒಡೆಯ, ದಂಡನಾಥ, ಗುರು, ಹಿರಿಯ, ದೈವಾ ಪರ, ಸತ್ಪುರುಷ ಎಂದು ವಿವಿಧ ಹೆಸರುಗಳಿಂದ ಜನರು ಅಹಂಕಾರಪಡು ತ್ತಾರೆ ಜೀವ ಹೋದಮೇಲೆ ಎಲ್ಲರ ಶರೀರವನ್ನೂ ಹೆಣವೆಂದೇ ಕರೆ ಯುತ್ತಾರಲ್ಲವೇ?

ಭೂಮಿಯು ಮಧುಕೈಟಭರ ಮೇದಸ್ಸಿನಿಂದ ಆಗಿದೆ ಇದನ್ನು ಪುಣ್ಯಕೀರ್ತಿಗಳಾಗಿ ಅನುಭವಿಸಬೇಕು ಇಲ್ಲದಿದ್ದರೆ ರಾಕ್ಷಸಮಾಂಸವನ್ನು ಭಕ್ಷಿಸಿದ ಫಲವುಂಟಾಗುತ್ತದೆ

ಮುಂದೆ ಬರುವುವು ಕಷ್ಟದ ದಿನಗಳು ನೀನು ಮೈಮರೆಯದೆ ಎಚ್ಚರದಿಂದ ಮುಂದುವರಿ ನಿನ್ನ ಮಕ್ಕಳ ವೈರದ ದೆಸೆಯಿಂದ ಈ ಬ್ರಹ್ಮಾಂಡವೇ ಬರಿದಾಗುತ್ತದೆ

ಕೃಷ್ಣನು ಮನುಷ್ಯನಲ್ಲ ಆತನು, ಭೂಲೋಕದಲ್ಲಿ ಸಂದಣಿಸಿರುವ ದೈತ್ಯಸಹಸ್ರಕೋಟಿಯನ್ನು ಸಂಹರಿಸಿ ಭೂಭಾರವನ್ನು ಇಳಿಸಿ, ದೇವತೆಗಳ

ದುಃಖವನ್ನು ಪರಿಹರಿಸಿ ಭಕ್ತರನ್ನು ಕಾಪಾಡಲು ಬಂದಿರುವ ಸಾಕ್ಷಾತ್ ವಿಷ್ಣುವೇ ಎಂದು ತಿಳಿ. ಆತನು ಪಾಂಡವರ ಪಕ್ಷಕ್ಕೆ ಸೇರಿ ಅರ್ಜುನನ ಸಾರಥಿಯಾಗಿದ್ದಾನೆ , ಇನ್ನು ನಿಮಗೆ ಹೇಗೆತಾನೇ ಜಯವಾಗುತ್ತದೆ? ಕೃಷ್ಣನನ್ನು ಮರೆಹೊಕ್ಕು ಈ ಕ್ಷಣದಲ್ಲೇ ರಾಜ್ಯವನ್ನೊಪ್ಪಿಸು. ಇಲ್ಲದಿದ್ದರೆ ನೀವು ಕೆಡುವುದು ಖಂಡಿತ.

ಸಮುದ್ರದಲ್ಲಿ ಕ್ಷೀರಾಬ್ಧಿಯೂ, ತೀರ್ಥಗಳಲ್ಲಿ ಗಂಗೆಯೂ, ಮುನೀಶ್ವರರಲ್ಲಿ ವೇದವ್ಯಾಸನೂ, ವ್ರತಿಗಳಲ್ಲಿ ಹನುಮಂತನೂ, ದೇವರಲ್ಲಿ ಕೃಷ್ಣನೂ ಹೇಗೋ, ಹಾಗೆಯೇ ರಾಜರಲ್ಲಿ ಧರ್ಮರಾಜನು ಶ್ರೇಷ್ಠನು " ಎಂದಿವೇ ಮೊದಲಾದ ಬೋಧೆಯಿಂದ, ಧೃತರಾಷ್ಟ್ರನು ಕುಬುದ್ಧಿವ್ಯಾಪಕನೆಂಬ ಅಪಕೀರ್ತಿಯನ್ನು ನೀಗಿ, ವಿಮಲಜ್ಞಾನ ಸೂರ್ಯೋದಯವನ್ನು ಕಾಣಿಸಿ, ಆತನನ್ನು ಸಂತೈಸಿ ಸನತ್ಸುಜಾತಮುನಿಯು ತನ್ನಾಶ್ರಮಕ್ಕೆ ಹಿಂತಿರುಗಿದನು ಧೃತರಾಷ್ಟ್ರನು ಆನಂದಭರಿತನಾಗಿ ಲಕ್ಷ್ಮೀರಮಣನನ್ನು ನೆನೆದನು

## ೫ನೆಯ ಸಂಧಿ

ಬೆಳಗಾದಕೂಡಲೆ ಕೌರವನು, ಸಭಿಕರು ಆಪ್ತರು ಮತ್ತು ಮಂತ್ರಿಗಳು ಇವರನ್ನು ಸಭೆ ಸೇರಿಸಿ, ಪಾಂಡವರ ಓಲಗದ ಸೊಬಗನ್ನು ಕೇಳಿ ತಿಳಿದುಕೊಳ್ಳಲು ಸಂಜಯನನ್ನು ಸಭೆಗೆ ಕರೆಸಿದನು

ಸಂಜಯನು ಬಂದು ಧೃತರಾಷ್ಟ್ರನಿಗೂ ದುರ್ಯೋಧನನಿಗೂ ಕೈ ಮುಗಿದು ' ದೇವ ! ಕುಂತೀನಂದನನು ಹರ್ಷದಿಂದ ಕಾಣಿಕೆಕೊಟ್ಟು ನಮಸ್ಕರಿಸಿ ಉಚಿತವಚನವನ್ನಾಡಿ ನನ್ನನ್ನು ಕಳುಹಿಸಿರುತ್ತಾನೆ, ಚಿತ್ತೈಸಬೇಕು" ಎಂದು ರಾಜಕಾರ್ಯವನ್ನು ಅವನಿಗೆ ವಿಜ್ಞಾಪಿಸಿದನು "ಜೀಯ! ಬಿನ್ನಹ ಈಗ ಪಾಂಡವರ ಸಂಪತ್ತನ್ನೂ, ಅವರ ನಾಯಕರ ಪರಾಕ್ರಮವನ್ನೂ, ಅವರ ಬಲವನ್ನೂ ಸಾವಿರಬಾಯಿಯ ಆದಿಶೇಷನಿಗೂ ಹೊಗಳಲು ಸಾಧ್ಯವಿಲ್ಲ ಎಂದಮೇಲೆ ನನ್ನ ಪಾಡೇನು ? ಅಷ್ಟು ಜನರಿಗೂ ಕೃಷ್ಣನ ಕರುಣದಳತೆ ವಿಚಿತ್ರವಾಯ್ತು ಸಭೆಯಲ್ಲಿ ಎಲ್ಲ ರಾಜರೂ ಗರ್ಜಿಸಿ ತಮತಮಗೆ ತೋರಿದಂತೆ ಮಾತಾಡಿ ನನ್ನನ್ನು ಜರೆದರು, ಗುಂಪೆದ್ದು ಯುದ್ಧಸನ್ನದ್ಧರಾಗಲು ಓಡಾಡಿದರು ಆಗ ಧರ್ಮರಾಜನು ಎಲ್ಲರನ್ನೂ ಸಮಾಧಾನ ಪಡಿಸಿದನು ಬಳಿಕ ಅರ್ಜುನನು ಕೃಷ್ಣನ ಮನೆಗೆ ನನ್ನನ್ನು ಕರೆಸಿದನು ಅಲ್ಲಿ ಕೃಷ್ಣನು ಸತ್ಯಭಾಮೆಯನ್ನು ಒರಗಿಕೊಂಡು ಅರ್ಜುನನ ತೊಡೆಯಮೇಲೆ ತನ್ನ ಕಾಲನ್ನು ನೀಡಿಕೊಂಡಿದ್ದನು ನಾನು ಅಲ್ಲಿಗೆ ಹೋಗಲು ನನ್ನನ್ನು ಯಥೋಚಿತವಾಗಿ ಉಪಚರಿಸಿದರು "ನನಗೆ ಅಪ್ಪಣೆ ಏನು ' ಎಂದು ಕೇಳಲು ಕೃಷ್ಣನು--

" ನನಗೆ ಎರಡು ಪಕ್ಷಗಳಲ್ಲೂ ಮಮತೆ ಸಮಾನ ನಾನು ಯಾರೊಬ್ಬರಲ್ಲೂ ಪಕ್ಷಪಾತಮಾಡುವುದಿಲ್ಲ. ಕೌರವಪಾಂಡವರೆರಡುವಂಶಕ್ಕೂ

ಹಿತವನ್ನೇ ಬಯಸುತ್ತೇನೆ ಆದರೆ, ಸಂಜಯ! ಕೇಳು, ಸೀರೆಯನ್ನು ಎಳೆದಾಗ ದ್ರೌಪದಿಯು 'ಲಕ್ಷ್ಮೀರಮಣ, ಲಕ್ಷ್ಮೀರಮಣ, ಲಕ್ಷ್ಮೀರಮಣ' ಎಂದು ಒರಲಿದಳು ಆಗ ನಾನು ನೊಂದೆ 'ಪತಿಗಳೈವರ ಮನಸ್ಸೂ ಕಲ್ಲಾಗಿದೆ, ಕಾವುದೈ ಗೋವಿಂದ, ಸಲಹೈ ದೇವಕೀಸುತ ದೇಸಿಗರಿಗೆ ದೇವನು ನೀನೇ ಅಲ್ಲವೇ? ದೇವ! ಕೆಟ್ಟೆ, ಕೆಟ್ಟೆ ಕೃಪಾದೃಷ್ಟಿಯಿಂದ ಜೀವನವನ್ನು ಕಾಪಾಡು' ಎಂದು ಒರಲಿದಾಗ ಅವಳಿಗೆ ನಾನು ಹಂಗಿಗನಾಗಿದ್ದೇನೆ ನಾನು ಭಕ್ತರ ಭಂಟ ನೆನೆವವರ ನಂಟ ನನ್ನನ್ನು ಪ್ರೀತಿಸಿದರೆ ನಾನು ಅವರನ್ನು ಮೆಚ್ಚುತ್ತೇನೆ ತರ್ಕಸಾಧಕರನ್ನು ಮೆಚ್ಚುವುದಿಲ್ಲ ಪಾಂಡವರೈವರಲ್ಲಿ ನನಗೆ ಹೆಚ್ಚು ನಂಟತನವುಂಟು ಮುಚ್ಚುಮರೆ ಏಕೆ? ಇವರಿಗೆ ಕಂಟಕರಾದವರು ನಮಗೂ ಕಂಟಕರೇ' ಎಂದು ಹೇಳಿಕಳುಹಿಸಿರುತ್ತಾನೆ

"ವನದಲ್ಲಿ ಗಂಧರ್ವನಿಂದಾದ ಬಂಧನವನ್ನೂ, ಗೋಗ್ರಹಣದಲ್ಲಾದ ಪರಾಭವವನ್ನೂ ದುರ್ಯೋಧನನು ನೆನೆಯಲಿ ದ್ರೌಪದಿಯನ್ನು ಬಯಸಿದಾಗ ಪಡೆದ ಬಿಲ್ಲಿನೇಟನ್ನು ಮರೆತಿರಬಾರದೆಂದು ಹೇಳು ಭೀಮನ ಗದೆಯ ಏಟನ್ನೂ, ಮಳೆಗಾಲದ ಮಹಾಧ್ವನಿಯಂತೆ ಅದ್ಭುತವಾದ ನಮ್ಮ ಬಾಣಗಳ ಬಿರುಸನ್ನೂ, ನಕುಲಸಾತ್ಯಕಿಯರ ಹರಿತವಾದ ಕತ್ತಿಯನ್ನೂ, ಸಹದೇವಮತ್ಸ್ಯರ ಉದಾರತೆಯನ್ನೂ ನಿಮ್ಮ ರಾಜನು ಮೊದಲು ತಿಳಿದುಕೊಳ್ಳಲಿ ಜೂಜಿನ ಸಭೆಯಲ್ಲಿ ಹಿಂದೆ ನಾವು ಪ್ರತಿಜ್ಞೆ ಮಾಡಿದ್ದುಂಟು ಅದನ್ನು ಕರ್ಣ ಶಕುನಿ ಜಯದ್ರಥಾದಿಗಳು ಈಗ ನೆನೆಯಲಿ, ಮುಂದೆ ನೋಡಲಿ ಕ್ಷಿಪ್ರದಲ್ಲೇ ಅದನ್ನು ಆಗುಮಾಡುತ್ತೇನೆ" ಎಂದು ಅರ್ಜುನನು ಹೇಳಿಕಳುಹಿಸಿರುತ್ತಾನೆ

"ನಿನ್ನ ಒಡೆಯನ ತೊಡೆಗಳು ಕ್ಷೇಮವೇ? ದುಶ್ಶಾಸನನ ಮೈ ಬಲಿತಿದೆಯೇ? ಆತನನ್ನು ರಕ್ಷಿಸಿದರಲ್ಲವೇ ಅಷ್ಟುಮುಂದಿಗೂ ರಕ್ತಜಲ ದೊರೆಯುವುದು? ಆ ನೂರು ಸಹೋದರರಿಗೂ ಸಾವು ಖಂಡಿತ ಹೆದರದೆ ನಿನ್ನೊಡೆಯನಿಗೆ ಎಲ್ಲವನ್ನೂ ಹೇಳು" ಎಂದು ಭೀಮನು ಹೇಳಿಕಳುಹಿಸಿರುತ್ತಾನೆಂದು ಸಂಜಯನು ಸಭೆಯಲ್ಲಿ ತಿಳಿಸಿದನು

ಇದನ್ನು ಕೇಳಿ ಕರ್ಣನು ಕೋಪದಿಂದ "ಸಂಜಯ! ಸಾಕು ಹರಟಬೇಡ ಆರಲ್ಲಿ? ಇವನನ್ನು ನೂಕಿ ಈತನನ್ನು ಕಳುಹಿಸಿದವರು ಯಾರು? ಆ ಕುರಾರಪಾಂಡವರ ಪೊಳ್ಳು ಗೃಹಗರ್ಜನೆಯ ಗ್ರಹ ಹೊಡೆದು ತಲೆಕೆಳಗಾದ ಇವನು ಅವಿವೇಕಸಾಗರನಲ್ಲವೇ? ರಾಜನೇ! ಜಗದೇಕವೀರನಾದ ಕರ್ಣ ನಾನಿರಲು ಸಂಧಿ ಏತಕ್ಕೆ? ಶತ್ರುಗಳು ಮೈ ಮರೆತು ತಮ್ಮಮರೆದುರಿನಲ್ಲಿ ಹರಟಿದ ಮಾತನ್ನು ತಂದು ಈ ರಾಜಸಭೆಯಲ್ಲಿ ಹೇಳುವ ಇವನು ಶಿಷ್ಟನೇ? ಜಗತ್ತಿನ ಭಂಡನಲ್ಲವೇ? ಒಂದೇ

ದಾರಿಗೆ ಈಶ್ವರನನ್ನೇ ತಲೆಕೆಳಕು ಮಾಡಲು ಶಕ್ತನಾದ ನನಗೆ ಈ ಕೌಂತೇಯರು ಎದುರೇ ? " ಎಂದು ಹೇಳಿದನು

ಅದಕ್ಕೆ ಭೀಷ್ಮನು " ಎಲವೋ ಕರ್ಣ ! ಸಂಜಯನು ಭಂಡನೇ ? ಲೋಕದಲ್ಲಿ ಭಂಡ ನೀನು ನಿನಗೆ ಪಾಂಡವರು ಏತಕ್ಕೆ ? ಅವರ ಸೇನೆಯಲ್ಲಿರುವ ಪುಂಡನೊಬ್ಬನೇ ಸಾಕು ನೀನು ಪೌರುಷದ ಮಾತುಗಳನ್ನು ಮಾತ್ರ ಆಡುತ್ತೀಯೆ ಅರ್ಜುನನಿಗ ಕೋಪ ಬಂದರೆ ನಿನ್ನ ಪರಾಕ್ರಮವನ್ನು ಮುರಿಯುತ್ತಾನೆ. ದುರ್ಯೋಧನ ! ಈ ಕರ್ಣನು ದುಷ್ಟ ಹಿಂದೆ ನಡೆದ ಯುದ್ಧದಲ್ಲಿ ಇವನು ನಿಜವಾಗಿಯೂ ಪರಾಕ್ರಮಿ ಆಗಿದ್ದನಲ್ಲವೇ ? ಮರುಳೇ ! ನಿನಗ ಇವನಲ್ಲಿ ಇನ್ನೂ ನಂಬಿಕೆಯುಂಟೇ ? ಹೇಳಿ ಫಲವೇನು ? ಅರ್ಜುನನಿಗೆ ಸಮಾನರು ಮೂರುಲೋಕದಲ್ಲಿ ಯಾರೂ ಇಲ್ಲ ನಾವು ಹೊಗಳಿದರೆ ಹೊಗಳುಭಟ್ಟರಾಗುತ್ತೇವೆ " ಎಂದನು

ಬಳಿಕ ದ್ರೋಣನು ' ದುರ್ಯೋಧನ ! ಭೀಷ್ಮನ ಮಾತು ಪರಮತತ್ತ್ವವು ಅದನ್ನು ಮುರಿಯಬೇಡ ಯುದ್ಧದಲ್ಲಿ ಅರ್ಜುನನನ್ನು ಎದುರಿಸಲು ದೇವದಾನವರಲ್ಲಿ ಸಮರ್ಥರಾರೂ ಇಲ್ಲ ದುಷ್ಟರಾಡುವ ಹರಟೆಮಾತುಗಳು ಹಿರಿಯರಿಗ ಅಭಿಮತವಲ್ಲ ನೀನು ಸಂಧಿಮಾಡಿಕೊಳ್ಳುವುದು ನ್ಯಾಯವಾಗಿದೆ ' ಎಂದು ತಿಳಿಸಿದನು

ಇದನ್ನು ಕೇಳಿ ದುರ್ಯೋಧನನು " ನೀವು ನಮ್ಮ ಮಾತನ್ನು ಪೊಳ್ಳುನುಡಿ ಎಂದು ಅಲ್ಲಗಳೆಯುತ್ತೀರಿ ಕೌಂತೇಯರೆಂದರೆ ಮನಕರಗಿ ಹಿಗ್ಗುತ್ತೀರಿ ಡಿಂಬ ನಮ್ಮಲ್ಲಿ ಜೀವ ಅವರಲ್ಲಿ ಭರತಸಂತತಿಯಲ್ಲಿ ಮನುಷ್ಯರು ಕೆಲವರು, ದೇವತೆಗಳು ಕೆಲವರೇ ? ಸಾಕು ಆ ಮಾತಿರಲಿ ನಮ್ಮ ಪರಾಕ್ರಮವನ್ನು ಯುದ್ಧದಲ್ಲಿ ನೋಡಿ " ಎಂದನು

ಆಗ ಧೃತರಾಷ್ಟ್ರನು ಹೆದರಿ " ಮಗನೇ ! ಬೇಡ ಕೃಷ್ಣನು ಪ್ರಖ್ಯಾತನಾದ ಪರಾಕ್ರಮಿ ಕೆಲವರು ಆತನನ್ನು ಹರಿಯೆಂದೇ ಹೇಳುತ್ತಾರೆ ಆತನು ಪಾಂಡವರ ಪಕ್ಷಕ್ಕೆ ಸೇರಿರುತ್ತಾನೆ ಅವರಿಗೆ ಕೇಡನ್ನು ಬರಗೊಡುವುದಿಲ್ಲ ರಾಜ್ಯವನ್ನು ಅವರಿಗೆ ಒಪ್ಪಿಸು " ಎಂದನು

ಅದಕ್ಕೆ ದುರ್ಯೋಧನನ " ತಂದೆಯವರು ಮರುಳರಲ್ಲವೇ ? ಕೃಷ್ಣನು ಹರಿ ಎಂದು ನಾನು ಮೊದಲೇ ತಿಳಿದಿದ್ದೇನೆ ನೀವು ಹೆದರಬೇಕಾಗಿಲ್ಲ ನಿಮಗೆ ಮರಣಭಯವಿಲ್ಲ ಗುರು ಭೀಷ್ಮಾದಿಗಳಿರುವಾಗ ಕುರುಕುಲಕ್ಕೆ ಕೇಡುಂಟೇ ? ನಮ್ಮನ್ನು ಕೊಲ್ಲಲು ಅರ್ಜುನನು ಶಕ್ತನೇ ? ಭೂಭಾರ ಹೆಚ್ಚಿ, ಭೂದೇವಿಯು ವಿಜ್ಞಾಪಿಸಿಕೊಳ್ಳಲು ನಾರಾಯಣನು ಭೂಲೋಕದಲ್ಲಿ ಮಾನವನಾಗಿ ಅವತರಿಸಿ ರಾಕ್ಷಸರನ್ನು ತಾನೇ ಸಂಹರಿಸಿದ್ದಾನೆ ಈಗ ಅರ್ಜುನನಿಂದ ಕೌರವರನ್ನು ಕೊಲ್ಲಿಸುತ್ತಾನೆ ? ಇದ

ಕ್ಕಾಗಿ ನಾವು ಏತಕ್ಕೆ ಅಂಜಬೇಕು? ಕಾಪಾಡುವವನೂ ಆತನೇ, ಕೊಲ್ಲು ವವನೂ ಆತನೇ ನಾನು ಆತನ ಕೈಯಿಂದಲೇ ಸಾಯುತ್ತೇನೆ ನೀವು ಪಾಂಡವರೊಡನೆ ಸುಖವಾಗಿ ರಾಜ್ಯವಾಳಿ ಸಾವಿಗೆ ನಾನು ಹೆದರುವೆನೇ? ಏತಕ್ಕೆ ನೀವು ಚಿಂತಿಸುತ್ತೀರಿ? ನಿಮ್ಮನ್ನು ನಾರಾಯಣನು ಕರುಣದಿಂದ ಕಾಪಾಡುತ್ತಾನೆ" ಎಂದು ಹೇಳಿದನು

## ೬ನೆಯ ಸಂಧಿ

ಧರ್ಮರಾಜನು ಸಂಜಯನನ್ನು ಬೀಳ್ಕೊಟ್ಟಮೇಲೆ ಕೃಷ್ಣನ ಹತ್ತಿರಕ್ಕೆ ಬಂದು "ಕೃಷ್ಣ! ನಮ್ಮ ಮುಂದಿನ ಸಿದ್ಧತೆ ಏನು? ಕೌರವ ರೊಡನೆ ನಮಗೆ ಆಗುವುದೇನು? ಕೌರವರು ಮೂರ್ಖರು ಅವರು ಮುಂದಾಲೋಚನೆ ಇಲ್ಲದ ಕುಮತಿಗಳು ಅವರಂತೆ ನಡೆದರೆ ವಂಶದ ಕೀರ್ತಿಯೇ ನಾಶವಾಗುತ್ತದೆ ನಮಗೆ ಯೋಗ್ಯವಾದುದು ಸಂಧಿಯೋ? ಸಮರವೋ? ಹೇಳು" ಎಂದು ಕೇಳಿದನು

ಆಗ ಕೃಷ್ಣನು "ಧರ್ಮರಾಜ! ನಿನ್ನಭಿಮತವೇನು? ಸಂಧಿಯೋ? ಸಂಗ್ರಾಮವೋ? ಮನಬಿಚ್ಚಿ ನಿಶ್ಚಯವನ್ನು ಹೇಳು ನಿನ್ನ ಅಭಿಪ್ರಾಯ ವನ್ನೇ ನಾನು ಒಪ್ಪುತ್ತೇನೆ ಮತ್ತು ಅದರಂತೆ ಪ್ರಯತ್ನಿಸುತ್ತೇನೆ" ಎಂದನು

ಅದಕ್ಕೆ ಧರ್ಮರಾಜನು "ದೇವ! ದೇಹವಳಿದರೂ ಕೀರ್ತಿ ಮಾತ್ರ ಉಳಿಯುತ್ತದೆ ಸೋದರರು ಪರಸ್ಪರ ವೈಮನಸ್ಯದಿಂದ ಯುದ್ಧ ಮಾಡಿದರೆಂಬ ದುರ್ಯಶಸ್ಸಿನ ಅಪವಾದವನ್ನು ನಾವು ಹೊರಬೇಕಾಗು ತ್ತದೆ ಈ ನೆಲವನ್ನು ಸುಡಲಿ ನನಗೆ ಕೌರವನಿಂದ ಕೆಲವು ಪಟ್ಟಣ ಗಳನ್ನು ಮಾತ್ರ ಕೊಡಿಸಿ ಸಮಾಧಾನಪಡಿಸು ಕುಶಸ್ಥಳ, ವೃಕಸ್ಥಳ, ವಾಸಂತಿ, ವಾರಣಾವತ, ಇವುಗಳ ಜತೆಗೆ ಆತನ ಮನಸ್ಸಿಗೆ ಬಂದ ಯಾವು ದಾದರೊಂದು ಪಟ್ಟಣ, ಈ ಐದನ್ನೂ ಕೌರವನಿಂದ ಕೊಡಿಸು ಮಾತ್ಸರ್ಯ ವನ್ನು ಮರೆತು ನಾವು ಧೃತರಾಷ್ಟ್ರನನ್ನೇ ಸೇವಿಸುತ್ತೇವೆ ನೀನೇ ಹೋಗಿ ಯಾವ ವಿಧದಲ್ಲಾದರೂ ಸಂಧಿಮಾಡಿ, ಕೌರವರೊಡನೆ ನಾವೂ ಇರುವಂತೆ ಮಾಡು ತಿಳಿದವರ ಅಭಿಪ್ರಾಯವೂ ಚಾಡಿಕಾರರ ಮಾತಿನಿಂದ ಕೆಡು ತ್ತದೆ ಕೌರವರ ಮೇಲೆ ನಮಗೆ ಯಾವ ಕೋಪವೂ ಇಲ್ಲ ಸಂಧಿ ಯನ್ನು ಮಾಡು" ಎಂದು ಹೇಳಿದನು

ಇದನ್ನು ಕೇಳಿ ಕೃಷ್ಣನ ಮನಸ್ಸು ಅಳುಕಿತು 'ಧರ್ಮರಾಜನ ಮನಸ್ಸು ಸಂಧಿಗೆ ತಿರುಗಿದರೆ ಭೂಭಾರ ಕಡಿಮೆಯಾಗಲು ದಾರಿ ಯಾವುದು? ಆತನ ಮನಸ್ಸಿನಲ್ಲಿ ಯುದ್ಧಾನುಸಂಧಾನವು ಸಡಿಲವಾಗಿದೆ' ಎಂದು ಯೋಚಿಸಿ ಕೃಷ್ಣನು "ಧರ್ಮಪುತ್ರ! ನೀನು ನಿರ್ಮಲನಾಗಿರು ವುದರಿಂದ ಸರಾಗನಾಗಿರುವೆ ದುರ್ಯೋಧನನಾದರೋ ಹೆಚ್ಚು ಕಲ್ಮ

ಷನು ಅವನಿಗೆ ನೆಲವನ್ನು ಕೊಡುವ ಮನಸ್ಸಿಲ್ಲ ಇದು ವೃಥಾ ಆಸೆಯಲ್ಲದೆ ಇದರಲ್ಲಿ ಫಲವಿಲ್ಲ ಭೀಮ! ರಾಜನ ಮನಸ್ಸು ಸಂಧಿಗ ತಿರುಗಿದೆ ನಿನ್ನ ಅಭಿಪ್ರಾಯವೇನು? ಮರೆಮಾಚದೆ ಹೇಳು" ಎಂದು ಕೇಳಿದನು

ಅದಕ್ಕೆ ಭೀಮನು "ಧರ್ಮರಾಜನು ತಪ್ಪು ಮಾರ್ಗದಲ್ಲಿ ನಡೆಯುವನೇ? ಈ ಘೋರಯುದ್ಧದಿಂದ ಏನು ಫಲ? ಕೃಷ್ಣ! ಕೇಳು ಸೋದರರ ವಧೆಗೆ ನಾನು ಒಪ್ಪುವವನಲ್ಲ ಎದೆಗಿಚ್ಚಿನ ದುಷ್ಟರು ಕೌರವರಿಗೂ ನಮಗೂ ವೈಮನಸ್ಯವನ್ನು ತಂದೊಡ್ಡಿದ್ದಾರೆ ಇದು ಜನ್ಮಾಂತರದ ಕರ್ಮಫಲ ನಾನು ಅವಮಾನವನ್ನೂ ಲೆಕ್ಕಿಸುವುದಿಲ್ಲ ಕೌರವರು ನಮ್ಮನ್ನು ತುಚ್ಛವಾಗಿ ಕಂಡರೆಂಬ ವ್ಯಥೆಯೂ ನನಗಿಲ್ಲ ಸಂಧಿಯನ್ನು ಘಟಿಸು, ಸಾಕು" ಎಂದು ಹೇಳಿದನು ಭೀಮನ ಈ ಮಾತನ್ನು ಕೇಳಿ ಕೃಷ್ಣನು ಮುಗುಳ್ನಗ ನಕ್ಕು, ವಿಷ ಅಮೃತವಾಗಿದೆ ಬಂಕಿ ಶೀತಲವಾಗಿದೆ ಸಿಡಿಲಿನ ಆಟೋಪ ನಯವಾಗಿದೆ ಯುದ್ಧಮಾಡಲು ಭೀಮನು ಅಳುಕಿದ್ದಾನೆ ಇದು ಆಶ್ಚರ್ಯವಲ್ಲವೇ? ಏನು ಮಾಯೆಯೋ? ಕುಂತಿ ಎಂತಹ ಪುತ್ರರನ್ನು ಪ್ರಸವಿಸಿದಳೋ? ಎಂದು ಯೋಚಿಸಿ "ಜಗದ್ವಿಖ್ಯಾತ ಪಾರ್ಥ! ಇದು ಭೀಮನ ಅಭಿಪ್ರಾಯ ಹೆದರಬೇಡ ನಿನ್ನ ಮತವನ್ನು ತಿಳಿಸು" ಎಂದು ಕೇಳಲು, ಅರ್ಜುನನು ಕೈಮುಗಿದು "ದೇವ ನನ್ನ ಇಚ್ಛೆ ಬೇರೆಯೇ? ನೀವು ಹೇಳಿದುದನ್ನು ಶಿರಸಾ ವಹಿಸುತ್ತೇನೆ" ಎಂದು ಹೇಳಿದನು

ಬಳಿಕ ಕೃಷ್ಣನು "ನಕುಲ! ಹದರಬೇಡ ಸಂಧಿಯೋ ಸಮರವೋ? ನಿನ್ನ ಅಭಿಪ್ರಾಯವೇನು? ಹೇಳು" ಎಂದು ಕೇಳಲು, ವಿನಯದಿಂದ ಆತನು "ಎರಡು ಪಕ್ಷದವರಿಗೂ ಸಂಧಿ ಮಾಡುವುದನ್ನು ಬಿಟ್ಟರೆ ನನ್ನ ಅಭಿಮತ ಬೇರೇನಿದೆ?" ಎಂದನು

ಆಗ ಕೃಷ್ಣನು "ನಿನ್ನ ಅಭಿಮತವೇನು? ಸಹದೇವ! ಹೇಳು" ಎಂದು ಪ್ರಶ್ನಿಸಲು "ದೇವ! ನನಗೆ ಸಂಧಿ ಅಭಿಮತವಲ್ಲ ಯುದ್ಧವೇ ಸಮ್ಮತ ನೀನು ಯುದ್ಧವನ್ನೇ ಘಟಿಸು" ಎಂದು ತಿಳಿಸಲು, ಕೃಷ್ಣನು ದ್ರೌಪದಿಯನ್ನು ಕರೆತರಲು ಚಾರರನ್ನು ಕಳುಹಿಸಿದನು

ಚಾರರು ದ್ರೌಪದಿಯಲ್ಲಿಗೆ ಹೋಗಿ "ದೇವಿ! ಶತ್ರುಗಳೊಡನೆ ಸಂಧಾನಸಮಾರಂಭ ನಡೆಯುತ್ತಿದೆ ನಿಮ್ಮ ಅಭಿಪ್ರಾಯವನ್ನು ಕೇಳಿ ತಿಳಿಯುವುದಕ್ಕಾಗಿ ನಿಮ್ಮನ್ನು ಕರೆತರುವಂತೆ ಕೃಷ್ಣನು ಹೇಳಿ ಕಳುಹಿಸಿರುತ್ತಾನೆ ನೀವು ಬಂದು ಆತನಿಗೆ ನಿಮ್ಮಭಿಮತವನ್ನು ತಿಳಿಸಿ" ಎಂದು ಹೇಳಿದರು

ಇದನ್ನು ಕೇಳಿ ದ್ರೌಪದಿಯು "ಏನು! ಏನು! ಕೌರವರೊಡನೆ ಸಂಧಾನವೇ? ಪತಿಗಳಿಗೆ ಸುಮ್ಮಾನವಲ್ಲವೇ? ತಮ್ಮ ಸತಿಯನ್ನು ಪಾಪಿ

ಗಳು ಇರಿದರು ಈ ಸಂಧಾನನಡೆಸುವವನು ಕೃಷ್ಣನೇ ? ತಪ್ಪೇನು ತಪ್ಪೇನು ?" ಎನ್ನುತ್ತ ಖಿನ್ನಳಾಗಿ ಪಲ್ಲಕ್ಕಿಯಲ್ಲಿ ಕುಳಿತು ಸಖಿಯರೊಡನೆ ಬಂದು, ಇಳಿದು ಸಭೆಯನ್ನು ಪ್ರವೇಶಿಸಿದಳು ಬಳಿಕ ಆಕೆಯು ಭೀಮನನ್ನು ನೋಡಿ "ಎಲೆ ಭೀಮ ನೀನೂ ಸಂಧಿಗೆ ಮನತಂದೆ ನಿನ್ನ ಪರಾಕ್ರಮ ವನ್ನು ನೀರಲ್ಲಿ ಕದಡಿದೆ ಕೌರವನ ಕೈಕೆಳಗಿರಲು ಇಚ್ಛೆಯಾಯಿತೇ ನಿನಗೆ ? ಕೃಷ್ಣನಿಗೂ ನೀನು ನೀತಿಕಲಿಸಿದೆ. ಬಹುಮತವನ್ನೂ ಬಳ ಸಿದೆ ಚಂದ್ರವಂಶವನ್ನೂ ನರಕಕ್ಕೆ ತಳ್ಳಿದೆ" ಎಂದಳು ಬಳಿಕ "ಕೌರವ ರಲ್ಲಿ ಐದು ಪಟ್ಟಣಗಳನ್ನು ಬೇಡಲು ಧರ್ಮರಾಜನು ಕಳುಹಿಸು ತ್ತಾನಯೋ ? ಕೃಷ್ಣನೇ ಸಂಧಾನಮಾಡುವವನು ? ಕೌರವರನ್ನು ಸೇರಿ ಬದುಕುವ ಭೀಮನೇ ! ಸೋದರರ ಸೇರುವಿಕೆಗ ನಿಮ್ಮ ಕೀರ್ತಿಶ್ರೀಯು ರೂಢಿಸಿತಲ್ಲವೇ ? ನೀವು ಸನ್ಯಾಸಿಗಳಾಗಿದ್ದೀರಿ ರೋಷವನ್ನು ಬಿಟ್ಟವ ರಲ್ಲವೇ ? ಧರ್ಮದ ಸ್ಥಿತಿಯನ್ನು ತಿಳಿದ ಮನಸ್ಸು ನರಕವನ್ನು ಇಚ್ಛಿಸು ತ್ತದೆಯೋ ? ವಿರೋಧವನ್ನು ಬಿಟ್ಟು ಕುಂತೀಪುತ್ರರು ಕೌರವರೊಡನೆ ಸುಖವಾಗಿ ರಾಜ್ಯವಾಳಲಿ ಶತ್ರುಸೇನೆಗೂ ಕುರುಕುಲಕ್ಕೂ ಭಯಂ ಕರನಾದ ಭೀಮನೇ ! ನನಗಾದ ಮಹತ್ತರಮಾನಹಾನಿಗಳನ್ನು ಮರೆತೆಯಲ್ಲವೇ ? ರಾಮನು ತನ್ನ ಪತ್ನಿಗಾಗಿ ದೊಡ್ಡಯುದ್ಧವನ್ನೇ ಮಾಡಿದುದನ್ನು ನೀನು ಕೇಳಿಲ್ಲವೇ ? ಒಮ್ಮೆ ಪ್ರೇಮದಿಂದ ನನ್ನನ್ನು ನೋಡು ಲೋಕದಲ್ಲಿ ಹೆಂಡತಿಯ ಮಾನರಕ್ಷಣೆಗೆ ಹೆಚ್ಚು ಅಭಿಮಾನ ವಿದೆ ಇದಕ್ಕಾಗಿ ಪಣತೊಟ್ಟಿರುವವರು ಶತ್ರುಗಳನ್ನು ಕೊಲ್ಲುತ್ತಾರೆ ಅದು ಸಾಧ್ಯವಾಗದಿದ್ದರೆ ತಾವೇ ಸಾಯುತ್ತಾರೆ ಮೂರುಲೋಕ ಗಳಲ್ಲೂ ನಿಮ್ಮೈವರಿಗೆ ಸರಿಸಮಾನರಾರೂ ಇಲ್ಲ ಈಗ ನೀವು ಹೆಂಡ ತಿಯ ಮಾನಹಾನಿವ್ಯಾಜದಿಂದ ಮೂದಲಿಸಲ್ಪಟ್ಟಿರೆಂಬ ದುರ್ಯಶಸ್ಸನ್ನು ಪಡೆಯಬಹುದೇ ? ಕುರುವಂಶಸ್ಥರಾದ ನಿಮ್ಮೊಳಗೆ ಸೋಲೇನು ಗೆಲು ವೇನು ? ನೀವು ಸಹೋದರರಲ್ಲವೇ ? ನಾನಾದರೋ ಪಾಂಚಾಲವಂಶ ದವಳು ಆದುದರಿಂದಲೇ ನಾನು ಬೇರೆ ನನಗೆ ನಿಮ್ಮಲ್ಲಿ ಸಲುಗ ಏಕೆ ? ಸಂಧಾನವೇ ನಿಮಗೆ ಐಶ್ವರ್ಯ ಜನರನ್ನು ಸಂಪಾದಿಸುವುದು ಅಸಾಧ್ಯ ನೀವು ರಾಜರಾಗಿರಲು ಹೆಂಡಿರು ಅಪೂರ್ವವೇ ? ಇದೇ ನನಗೆ ಕೊನೆಯಲ್ಲಿ ಫಲಿತಾಂಶ

ಹಿಂದೆ ಮುಂದಲೆಹಿಡಿದು ಎಳದು ಸಭೆಗೆ ನನ್ನನ್ನು ಕರೆತಂದು ಅಲ್ಲಿ ನನ್ನ ಸೀರೆಯನ್ನು ಶತ್ರುಗಳು ಎಳೆದಾಗ ಅವರೆದುರಿನಲ್ಲಿ ನನ್ನ ಪತಿ ಗಳು ಮಾತಾಡಿದರೆ ? ಕೃಷ್ಣಾ ! ಆಗ ನೀನು ಕಾಪಾಡಿದುದನ್ನು ಈಗ ಮರೆತೆಯಲ್ಲವೇ ? ಸಂಧಿಗಾಗಿ ನೀನು ಮುಂದುವರಿಯಬಹುದೇ ? ನನ ಐವರು ಮಕ್ಕಳು, ವೀರಸಹದೇವ, ಘಟೋತ್ಕಚ, ಅಭಿಮನ್ಯು, ನನ್ನ ತಂದೆ, ಆತನ ಮೂರಕ್ಷೌಹಿಣೀಸೇನೆ ಇಷ್ಟೇಮಂದಿ ಕಾದುತ್ತಾರೆ,

ದುಶ್ಶಾಸನನ ಕರುಳನ್ನು ಬಗೆದು ಕುರುಕುಲವನ್ನೇ ಸುಡುತ್ತಾರೆ ನಿಮ್ಮ ಹಂಗೇಕೆ ' ಎಂದು ದ್ರೌಪದಿಯು ಹೇಳಿದಳು

ಭೀಮನ ಕೋಪಾಗ್ನಿ ದ್ರೌಪದಿಯ ನಿಟ್ಟುಸುರಿನ ಗಾಳಿಯಿಂದ ಉರಿಯಲು ಆರಂಭಿಸಿತು ಆತನು ಶತ್ರುಗಳಮೇಲಿನ ರೋಷಾತಿರೇಕ ದಿಂದ ತುಟಿಗಚ್ಚಿ " ತರುಣಿ! ಸೈರಿಸು ಸೈರಿಸು ನೀನು ಈಗ ಸುರಿಸಿದ ಕಣ್ಣೀರಿಗೆ ಶತಸಾವಿರಮಡಿಯಷ್ಟು ಕಣ್ಣೀರನ್ನು ಹಗೆಯ ಹೆಂಡಿರಲ್ಲಿ ಸುರಿಸುತ್ತೇನೆ" ಎಂದು ಬೆರಳಿಂದ ಮೀಸೆಯನ್ನು ಹುರಿಮಾಡಿ, ಎಡಗೈಯನ್ನೆತ್ತಿ ದ್ರೌಪದಿಯನ್ನು ಸಮಾಧಾನಪಡಿಸಿದನು ಬಳಿಕ ಕೋಪದಿಂದ ಕಿಡಿಕಿಡಿಯಾಗಿ " ನರಕಮರ್ದನನೇ ! ಕೇಳು, ಕುಲಗಿರಿಗಳನ್ನೇ ಕೀಳುತ್ತೇನೆ ಕುರುಗಳ ಲಲಾಟಲಿಖಿತವನ್ನೇ ಅಳಿಸುತ್ತೇನೆ ಕೌರವನರಿಗಳು ನನಗಿದಿರೇ ? ಧರ್ಮರಾಜನ ಮತವನ್ನೇ ಮೊದಲು ಅನುಸರಿಸಿದುದು ನಿಜ ಆದರೆ ಐವರುಪತಿಗಳಲ್ಲಿ ಈ ದ್ರೌಪದಿಯ ಕಾರ್ಯ ನನ್ನದು ನನಗೆ ಸಂಧಿಯು ಮತವಲ್ಲ ಯುದ್ಧವೇ ಸರ್ವಸ್ವ ನನ್ನ ಕೋಪಶ್ರಮಕ್ಕೆ ರಿಪುರುಧಿರಾಂಬುಪಾನವೇ ಫಲ, ಶತ್ರುಗಳನ್ನು ಸಂಹರಿಸಿ ಮಡದಿಗೆ ಅವರ ಕರುಳಿನ ದಂಡೆಯನ್ನು ಮುಡಿಸುತ್ತೇನೆ ಆ ಸಹೋದರರ ರಕ್ತವನ್ನು ಶಾಕಿನಿಯರಿಗೆ ಕುಡಿಯಲು ಕೊಡುತ್ತೇನೆ ಮುರರಿಪು ! ನೀನು ಹೋಗಿ ಸಂಧಿಮಾಡು ನಾಲ್ಕೂರುಗಳನ್ನು ಇವರಿಗೆ ಕೊಡಿಸು ನಾನು ಕೌರವನಲ್ಲೇ ಎರಡು ಊರು(ತೊಡೆ)ಗಳನ್ನು ತೆಗೆದುಕೊಳ್ಳುತ್ತೇನೆ" ಎಂದನು

## ೭ನೆಯ ಸಂಧಿ

ಪುನಃ ಭೀಮನು " ದೇವ ! ನೀನು ಸಂಧಿಯನ್ನು ಮಾಡಿಸು ನಾವು ಅದನ್ನು ಒಪ್ಪುವುದಿಲ್ಲ ಈ ಸಹದೇವ, ಈ ಅಭಿಮನ್ಯು, ದ್ರೌಪದಿ, ಘಟೋತ್ಕಚ ಇವರ ಅಭಿಪ್ರಾಯವೇ ನನಗೂ ಸಮ್ಮತ ಧರ್ಮರಾಜ ನಕುಲರೆಂದುದನ್ನು ನಾನು ಒಪ್ಪುವುದಿಲ್ಲ ಎಂದು ಹೇಳಿದನು

ಅದಕ್ಕೆ ಕೃಷ್ಣನು " ನಿಮ್ಮಲ್ಲಿ ಕೆಲವರು ಸಂಧಾನವನ್ನೂ, ಮತ್ತೆ ಕೆಲವರು ಯುದ್ಧವನ್ನೂ ಸೂಚಿಸುತ್ತೀರಿ ನಿಮ್ಮಲ್ಲೇ ನಿಶ್ಚಯವಿಲ್ಲದಿದ್ದರೆ ರಾಜಕಾರ್ಯವು ಹೇಗೆತಾನೆ ಆಗುತ್ತದೆ ? ಧರ್ಮರಾಜ ! ನೀನು ತಿಳಿದು ಹೇಳು ಶತ್ರುಮಂಡಲಕ್ಕೆ ಪ್ರಯಾಣಮಾಡುತ್ತೇನೆ ನಾನು ಹೆದರಿದವನಲ್ಲ" ಎಂದನು ಇದನ್ನು ಕೇಳಿದ ಧರ್ಮರಾಜನು "ದೇವ! ನಾವು ತಿಳಿಸುವ ಐದು ಪಟ್ಟಣಗಳನ್ನು ಕೊಟ್ಟರೆ ಸಮಾಧಾನದಿಂದಿರುವುದು ಕೋಪಿಸಿದರೆ ಯುದ್ಧವನ್ನೇ ಮಾಡುವುದು ಔಚಿತ್ಯಾನೌಚಿತ್ಯಗಳನ್ನು ತಿಳಿದು ನೀನೇ ನಿಷ್ಕರ್ಷೆಮಾಡು ಇನ್ನು ಈ ನಿಧಾನವು

ಸಾಕು ನಮ್ಮ ಅಭ್ಯುದಯ ನಿನ್ನ ಅಧೀನವಾಗಿದೆ ' ಎಂದು ಹೇಳಿ ದನು ಕೊನೆಯಲ್ಲಿ, ಕೃಷ್ಣನು ಕೌರವನೊಡನೆ ಸಂಧಾನಕ್ಕಾಗಿ ಪ್ರಯಾಣಮಾಡಬೇಕೆಂದು ನಿಶ್ಚಯವಾಯಿತು ಕೃಷ್ಣನೂ ಪ್ರಯಾಣಕ್ಕೆ ಅನುವಾದನು ಶುಭಮುಹೂರ್ತದಲ್ಲಿ ದುಂದುಭಿ, ಶಂಖ, ಕಹಳೆ, ಮೃದಂಗ ಧ್ವನಿಗಳು ಮೊರೆಯುತ್ತಿರಲು ಗೋಬ್ರಾಹ್ಮಣರನ್ನು ಪ್ರದಕ್ಷಿಣೆಮಾಡಿ ಬ್ರಾಹ್ಮಣರನ್ನು ಸತ್ಕರಿಸಿ, ನಾಸಿಕಾನಿಲದಲ್ಲಿ ಚಂದ್ರೋದಯವನ್ನು ನೋಡಿ ಆತನು ಹೊರಟನು ಸಾತ್ಯಕಿಯು, ಬಳಾಹಕ, ಸೈನ್ಯ, ಸುಗ್ರೀವ, ಮೇಘಪುಷ್ಪ ಎಂಬ ಈ ನಾಲ್ಕು ಅಶ್ವಗಳನ್ನೂ ಚಿನ್ನದ ರಥಕ್ಕೆ ಹೂಡಿ ಕೃಷ್ಣನ ಅಪ್ಪಣೆಯಂತೆ ಧನುಸ್ಸು, ಶಸ್ತ್ರ, ಸುದರ್ಶನ, ಕನಕಾಭರಣ, ಕವಚ, ಕೃಪಾಣಗಳನ್ನು ರಥದಲ್ಲಿ ಇರಿಸಿದನು ತೇರಿನಲ್ಲಿ ಶ್ವೇತಚ್ಛತ್ರ ಚಾಮರಪತಾಕೆಗಳು ಪ್ರಕಾಶಿಸುತ್ತಿದ್ದುವು ಸಾತ್ಯಕಿಯು ಆ ಹೊಂದೇ ರನ್ನು ಗಗನಕ್ಕೆ ಚಲಿಸಿದನು ಕೃಷ್ಣನು, ತನ್ನನ್ನು ಬೀಳ್ಕೊಡಲು ಬಂದಿದ್ದ ಪಾಂಡವರ ಬಲವನ್ನು ಮರಳಲು ಅಪ್ಪಣೆಕೊಟ್ಟು ಧರ್ಮರಾಜ ಅರ್ಜುನ ನಕುಲ ಸಹದೇವರನ್ನೂ ಹಿಂತಿರುಗಿಸಿದನು ಭೀಮನನ್ನು ಹಿಂತಿರುಗುವಂತೆ ಹೇಳಲು, ಆತನು ಕೃಷ್ಣನ ಸಮೀಪಕ್ಕೆ ಬಂದು "ದೇವಾ ' ಶತ್ರುಗಳೊಡನೆ ಯುದ್ಧವನ್ನೇ ಘಟಿಸು " ಎಂದು ತಿಳಿಸಿ ಆತನಿಂದ ಭರವಸೆಯನ್ನು ಪಡೆದು ಹಿಂತಿಗಿರುದನು

ಕೃಷ್ಣನು ದ್ರೌಪದಿಯನ್ನು ಮರಳುವಂತೆ ತಿಳಿಸಲು ಅವಳು ಆತನ ಅಂಘ್ರಿಕಮಲದಲ್ಲಿ ಹಣಚಾಚಿ ನಮಸ್ಕರಿಸಿ " ದೇವ ! ನೀನು ಸಂಧಿ ಯನ್ನು ಘಟಿಸಬೇಡ ನನ್ನ ಅಳಿವು-ಉಳಿವುಗಳೆರಡನ್ನೂ ನೀನೇ ಬಲ್ಲೆ ನಾನು ಹೆಚ್ಚು ಕಷ್ಟಪಟ್ಟಿರುತ್ತೇನೆ " ಎಂದು ಹೇಳಿ ಚರಣದಲ್ಲಿ ಹೊರ ಳಾಡಿದಳು ಆಗ ಕೃಷ್ಣನು "ದ್ರೌಪದಿ ! ಏಳು ಕಾಡಿನಲ್ಲಿ ನೀನು ಹೆಚ್ಚು ನವೆದಿದ್ದೀಯೆ ನಿನ್ನ ಪತಿಗಳೂ ಮೋಸಗೊಂಡಿದ್ದಾರೆ ಇದು ನನಗ ತಿಳಿದಿದೆ ನಿನಗಾಗಿ ನಾನು ಈ ಎರಡು ಪಕ್ಷದವರಿಗೂ ಯುದ್ಧ ವನ್ನೇ ಮಾಡಿಸುತ್ತೇನೆ ಯುದ್ಧಮಾಡಲು ನಿನ್ನ ಪತಿಗಳು ತಿರಸ್ಕರಿಸಿದ್ದೇ ಆದರೆ, ಶತ್ರುಗಳನ್ನು ನಾನೇ ಸೀಳಿ ಅವರ ಕರುಳನ್ನು ನಿನ್ನ ತುರುಬಿ ನಲ್ಲಿ ಮುಡಿಸದೇ ಹೋಗುತ್ತೇನೆಯೇ ? ದೇವಕಿಯ ಮೇಲಾಣೆ ವಸು ದೇವನ ಪಾದದಾಣೆ ಅಬಲೆ ! ಕೇಳು ನಿನ್ನಾಣೆ ನಾನು ಸಂಧಿಯ ನೆಪಮಾಡಿ ಶತ್ರುಗಳ ಭಾವವನ್ನೇ ಹುರಿಮಾಡುತ್ತೇನೆ ಅವರಿಗೆ ಕೋಪವು ಉದ್ರೇಕವಾಗುವಂತೆ ಮಾಡಿ ಸಂಧಿಯನ್ನು ಮುರಿಯುತ್ತೇನೆ ಇದನ್ನು ನೀನು ನಂಬು" ಎಂದು ಆಕೆಗ ತಿಳಿಸಿದನು ಬಳಿಕ ದ್ರೌಪ ದಿಯು ಹಿಂತಿರುಗಿದಳು

ಕೃಷ್ಣನು ಬರುತ್ತ ದಾರಿಯಲ್ಲಿ ಭರದ್ವಾಜ ಗೌತಮ, ಕಣ್ವ, ಕೌಶಿಕ, ಉರಗಮಾಲಿ, ಮತಂಗ, ಗಾರ್ಗ್ಯ, ಅಂಗಿರಸ, ನಾರದ, ಶುಕ,

ಪರಾಶರ, ಪರಶುರಾಮ, ಶ್ವೇತಕೇತುವೇ ಆದಿಯಾದ ಮುನಿಶ್ರೇಷ್ಠರನ್ನು ಕಂಡು ಅವರನ್ನು ಉಪಚರಿಸಿದನು , ಅವರೆಲ್ಲ ಹಸ್ತಿನಾವತಿಗೆ ಬರುತ್ತೇವೆಂದು ತಿಳಿಸಲು, ಅವರನ್ನೂ ಬರಹೇಳಿದನು ಆ ಎಲ್ಲ ಮುನಿಗಳೊಡನೆ ಕೃಷ್ಣನು ಕುಶಸ್ಥಳನಗರಿಗೆ ಬಂದು ದುರ್ಯೋಧನನಿಗೆ ತಾನು ಬಂದಿರುವ ಸುದ್ದಿಯನ್ನು ತಿಳಿಸಲು ದೂತರನ್ನು ಅಟ್ಟಿದನು ದೂತರು ದುರ್ಯೋಧನನಿಗೆ ಕೃಷ್ಣನು ಬಂದಿರುವುದನ್ನು ಅರಿಕೆಮಾಡಿದರು

ಧೃತರಾಷ್ಟ್ರನು, ಕೃಷ್ಣನು ಬಂದಿರುವ ಸುದ್ದಿಯನ್ನು ಕೇಳಿ ಸಂತೋಷಾತಿಶಯದಿಂದ ವಿದುರನಿಗೂ ತಿಳಿಸಿದನು ಭಂಡಾರದಲ್ಲಿರುವ ಒಳ್ಳೆಯ ವಸ್ತುಗಳನ್ನು ಆಯಿಸಿ ತೆಗೆಸಿದನು ಬಳಿಕ ಆತನು "ವಿದುರ! ದುರ್ಯೋಧನನ್ನು ಬಿಟ್ಟು ಉಳಿದ ಕೃತಾರ್ಥರಾದ ರಾಜರೆಲ್ಲ ಕೃಷ್ಣನನ್ನು ಎದುರುಗೊಳ್ಳಲಿ ಪಟ್ಟಣವನ್ನು ಬಾವುಟ ತೋರಣಗಳಿಂದ ಅಲಂಕರಿಸಲಿ ನಳಿನವದನೆಯರು ಕಲಶಕನ್ನಡಿಗಳೊಡನೆ ಎದುರುಗೊಳ್ಳಲು ನಡೆಯಲಿ" ಎಂದು ಹೇಳಿದನು

ಇದನ್ನು ಕೇಳಿ ದುರ್ಯೋಧನನು "ಅಪ್ಪ ! ಕೃಷ್ಣನು ನಮಗೆ ವೈರಿ ಆಯ್ದು ತೆಗೆದಿರುವ ವಸ್ತುಗಳನ್ನು ಆತನಿಗ ಕೊಡಬೇಡ ಸನ್ಮಾನಿಸಿದರೆಂದು ಆತನು ನಮ್ಮನ್ನು ಉಳಿಸುತ್ತಾನೆಯೋ ? ನಮ್ಮ ನಗರಿಗೆ ಬರಲಿ ಆತನ ತುಂಟತನಕ್ಕೆ ಔಷಧಿ ನನಗೆ ತಿಳಿದಿದ ಆತನನ್ನು ಬಿಗಿದು ಕೆಡಹುತ್ತೇನೆ" ಎಂದನು.

ದುರ್ಯೋಧನನ ಮಾತಿಗೆ ಭೀಷ್ಮನು ಕೋಪಗೊಂಡು "ಎಲೆ ಪಾತಕಿ ! ನೀನಲ್ಲವೇ ಕೃಷ್ಣನನ್ನು ಬಿಗಿಯುವವನು' ಮತ್ತೇನು ? ನಿನ್ನ ಸಾಹಸವನ್ನು ನಾನು ಬಲ್ಲೆ ನೀನು ಹೇಳುವ ಮಾತನ್ನು ಕೇಳಿದರೆ ಸಾಕು, ಪಾಪವು ಬರುತ್ತದೆ " ಎಂದು ಹೇಳಿ ಸಭೆಯಿಂದ ತನ್ನ ಮನೆಗೆ ಹೋದನು

ಧೃತರಾಷ್ಟ್ರನ ಆಜ್ಞೆಯಂತೆ ಪಟ್ಟಣವನ್ನು ಅಲಂಕರಿಸಿದರು ದ್ರೋಣ, ಕೃಪ, ಭೀಷ್ಮ, ವಿದುರ, ಶಲ್ಯ ಮೊದಲಾದವರು ಪೂರ್ಣಕುಂಭವನ್ನು ಹೊತ್ತ ತರುಣಿಯರನ್ನು ಮುಂದಿಟ್ಟುಕೊಂಡು, ಗೌರವದಿಂದ ಸಕಲ ಮರ್ಯಾದೆಯೊಡನೆ ಕೃಷ್ಣನನ್ನು ಎದುರುಗೊಳ್ಳಲು ಹೋದರು ದೂರದಿಂದಲೇ ಗರುಡಧ್ವಜವನ್ನು ಕಂಡು, ಎಲ್ಲರೂ ನಿರ್ಮಲಮನಸ್ಸಿನಿಂದ ಹಣೆಯಲ್ಲಿ ಬದ್ಧಾಂಜಲಿಪುಟರಾದರು ಕೃಷ್ಣನ ದಿವ್ಯಮೂರ್ತಿಯ ಕಾಂತಿಕಡಲಿನಲ್ಲಿ ಜನರ ಕಣ್ಮನಗಳೆರಡೂ ಕ್ಷಣಕಾಲ ಮುಳುಗಿದುವು ಎಲ್ಲರೂ ಕೃಷ್ಣನಿಗೆ ನಮಸ್ಕರಿಸಿದರು ಕೃಷ್ಣನು ಎಲ್ಲರನ್ನೂ ಎಬ್ಬಿಸಿ, ಅವರೆಲ್ಲರ ಕುಶಲಪ್ರಶ್ನೆ ಮಾಡಿದನು ಎಲ್ಲರಿಗೂ ವೀಳಯ ಕೊಟ್ಟು ಹಸ್ತಿನಾವತಿಗೆ ಬಂದನು

ಹಸ್ತಿನಾವತಿಯ ಹೊರ ಉದ್ಯಾನವನದಲ್ಲಿ, ಗಿಳಿ, ದುಂಬಿ, ಹಂಸೆ, ಕೋಗಿಲೆ, ಕೊಳರ್ವಕ್ಕಿ, ಚಕ್ರವಾಕ, ನವಿಲು, ಪಾರಿವಾಳ ಇವುಗಳ ಇಂಪುಧ್ವನಿ ಕೇಳುವವರ ಮನಸ್ಸನ್ನು ಆಕರ್ಷಿಸುತ್ತಿತ್ತು. ಹೊಂಬಾಳೆ, ದ್ರಾಕ್ಷಿ, ತೆಂಗು, ಹಲಸು, ಕರ್ಪೂರ ಇವುಗಳ ಸೊಗಸು ನೋಡುವವರ ಮನಸ್ಸನ್ನು ಸೆಳೆಯುತ್ತಿತ್ತು. ತಂಗಾಳಿ ಬೀಸುತ್ತಿತ್ತು.

ಕೃಷ್ಣನು ಉಪವನವನ್ನು ನೋಡಿ ಹೊಗಳುತ್ತ ಹಸ್ತಿನಾಪುರವನ್ನು ಪ್ರವೇಶಿಸಿ ದುರ್ಯೋಧನನ ಅಗಣಿತೈಶ್ವರ್ಯವನ್ನು ಕಂಡು ತಲೆಬಾಗಿದನು. ಆನೆ ಕುದುರೆ ಕಾಲಾಳುಗಳ ಗುಂಪು ಸಾಲುಸಾಲಾಗಿ ಮೆಲ್ಲನೆ ಅಲಂಕರಿಸಿದ ಬೀದಿಗಳಲ್ಲಿ ಮುಂದೆ ಹೋಗುತ್ತಿರಲು, ಕೃಷ್ಣನೂ ಹಿಂದೆ ನಡೆದು ಧೃತರಾಷ್ಟ್ರನ ಅರಮನೆಗೆ ಬಂದನು. ಧೃತರಾಷ್ಟ್ರನು ಆತನನ್ನು ಎದುರುಗೊಂಡು ಎಂದು ಭಕ್ತಿಯಿಂದ ನಮಸ್ಕರಿಸಿ ಕಾಣಿಕೆ ಕೊಟ್ಟು ಕುಶಲಪ್ರಶ್ನೆ ಮಾಡಿದನು.

## ೮ನೆಯ ಸಂಧಿ

ಬಳಿಕ ಕೃಷ್ಣನು ದ್ರೋಣ, ಭೀಷ್ಮ, ಕೃಪರನ್ನು ಮನ್ನಿಸಿ ಕಳುಹಿಸಿದನು. ವಿದುರನಿಗೆ, ಆತನ ಮನೆಗೆ ಬರುವೆನೆಂದು ತಿಳಿಸಿ ವೀಳಯ ಕೊಟ್ಟನು. ಉಳಿದ ರಾಜರನ್ನೆಲ್ಲ ಸನ್ನೆಮಾಡಿ, ಕಳುಹಿಸಿದನು. ಗಾಂಧಾರಿಯನ್ನು ಕಂಡು ಕುಶಲಪ್ರಶ್ನೆಮಾಡಿ, ಕಾಣಿಕೆಯನ್ನು ಸ್ವೀಕರಿಸಿ ಆಕೆಗೆ ಉಡುಗೊರೆಯನ್ನು ಕೊಟ್ಟನು.

"ಕೃಷ್ಣನು ತನ್ನರಮನೆಗೆ ಬಾರದಿರನ." ಎಂದು ದುರ್ಯೋಧನನು ಸವಿಯೂಟಕ್ಕೆ ಅಣಿಮಾಡಿಸಿದ್ದನು. ಆಸನವನ್ನೂ ಅಲಂಕರಿಸಿದ್ದನು. ಮಡದಿಯರು ಹೊಂಗಳಸವನ್ನು ಹಿಡಿದು ಆತನನ್ನು ಎದುರುಗೊಳ್ಳಲು ಕಾದುನಿಂತಿದ್ದರು.

ಭೀಷ್ಮ ದ್ರೋಣ ಕೃಪ ಕರ್ಣಾದಿಗಳೂ, ತಮ್ಮ ತಮ್ಮ ಮನೆಗೆ ಕೃಷ್ಣನು ಬರುತ್ತಾನೆಂದು ಆತನನ್ನು ಎದುರುಗೊಳ್ಳಲು ಕಾದನಿಂತಿದ್ದರು.

ಧೃತರಾಷ್ಟ್ರನಿಂದ ಬೀಳ್ಕೊಂಡ ಕೃಷ್ಣನು, ಕೌರವನ ಮನೆಯನ್ನು ದಾಟಿ ಭಾಗವತ ಶಿರೋಮಣಿಯಾದ ವಿದುರನ ಮನೆಯ ಕಡೆಗೆ ಬರುತ್ತಿದ್ದನ. ಕೃಷ್ಣನು ಎದುರಿಗೆ ಬರುತ್ತಿರುವುದನ್ನು ನೋಡಿದ ಜನರ ಮನಸ್ಸಿನ ಕತ್ತಲೆ ಮರೆಯಾಯಿತು. ಜನ್ಮಾಂತರದ ಪಾಪರಾಶಿಗಳು ನಶಿಸಿಹೋದುವು. ಮುನಿಗಳೊಡನೆ ಕೃಷ್ಣನು ನಿಜಶರಣನಾದ ವಿದುರನ ಮನೆಗೆ ಬರುತ್ತಿದ್ದನು. ಬೆವರಿದ ನಗೆಮುಖ ಧೂಳಿನಿಂದ ಕೆಂಪಾದ ಸಿರಿಮುಡಿ ಮತ್ತು ಮೀಸೆ, ಬಿಸಿಲಿನ ಝಳಕ್ಕೆ ಬಾಡಿದ ತುಲಸಿಯ ದಂಡೆ ಇವುಗಳಿಂದ ಶೋಭಿಸುತ್ತಿದ್ದ ಕೃಷ್ಣನು ತನ್ನ ಮನೆಗೆ ಬರುತ್ತಿರುವುದನ್ನು ಕಂಡು, ತನ್ನನ್ನೇ ಮರೆತು ವಿದುರನು ಬೆವರಿದನು. ನಾರಾಯಣನ

ಪದದರ್ಶನದ ಹರ್ಷಾರಣ್ಯದಲ್ಲಿ ಆತನ ಮನಸ್ಸು ದಾರಿತಪ್ಪಿತು. "ನಾರಾಯಣನನ್ನೇ ಸರ್ವದಾ ನೆನೆಯುತ್ತಿರುವ ಸನಕಾದಿಗಳಿಗೂ ಮನಗೊಡದದ ಮಹಿಮಾತಿರೇಕನು ನನ್ನ ಮನೆಗೆ ಬರುತ್ತಿದ್ದಾನೆ ಈ ಕಾರುಣ್ಯಾತಿಶಯವು ಹೊಸದಲ್ಲವೇ ?" ಎಂದು ಆತನು ಹಿಗ್ಗಿದನು

ವೇದಗಳಿಗೂ ಸಿಕ್ಕದ, ಮುನಿಗಳಿಗೂ ಪ್ರತ್ಯಕ್ಷನಾಗದ, ಅನಾದಿ ಸಿದ್ಧನು ಬರಲು, ವಿದುರನು ಭಕ್ತಿಯಿಂದ ಆತನ ಚರಣಾರವಿಂದಗಳಲ್ಲಿ ಅಡ್ಡಬಿದ್ದು, ಮನದಣಿಯುವವರೆಗೂ ಕೃಷ್ಣನನ್ನು ನೋಡಿದನು ಬೀದಿಯಲ್ಲೆಲ್ಲಾ ಆತನನ್ನು ಕೊಂಡಾಡುತ್ತ ಓಡಾಡಿದನು ಹರ್ಷಾತಿರೇಕದಿಂದಲೂ ಭಕ್ತ್ಯತಿಶಯದಿಂದಲೂ, ಮೈಮರೆತು ವಸತಿಯನ್ನೇ ಮರಿದೀಡಾಡಿ 'ವಿದುರನಿಗೆ ಭ್ರಮೆಯಾಯ್ತು' ಎಂದು ಗುಲ್ಲೇಳುವಂತೆ ಬೀದಿಯಲ್ಲಿ ಕುಣಿದಾಡಿದನು

ಕೃಷ್ಣನು ಇದನ್ನುನೋಡಿ "ವಿದುರ! ಹಸಿದು ನಾನು ಇಲ್ಲಿಗೆ ಬಂದರೆ ನೀನು ಮನೆಯನ್ನು ಮರಿದು ಈ ರೀತಿ ಕುಣಿದಾಡಿದರೆ ನನಗೆ ತೃಪ್ತಿಯಾಗುತ್ತದೆಯೇ? ದೊರೆಗಳು ಪ್ರಾರ್ಥಿಸಿದರೂ ಒಪ್ಪದೆ ನಾನು ಇಲ್ಲಿಗೆ ಬಂದಿದ್ದೇನೆ ನಾಚಿಸಬೇಡ, ಬಾ" ಎಂದು ಮನೆಯನ್ನು ಪ್ರವೇಶಿಸಿದನು

ವಿದುರನು ಕೃತ್ಯಾಕೃತ್ಯಭಾವವನ್ನು ಮರೆತು ಕೃಷ್ಣನ ಪದಾಬ್ಜದಲ್ಲಿ ಲೀನನಾಗಿ ಬೊಂಬೆಯಂತೆ ಚಲಿಸದೆ ಮೌನದಿಂದಿದ್ದನು

"ಭಕ್ತನಿಗೆ ಒಲಿದು ತಾನೇ ಅವನಲ್ಲಿಗೆ ಬರುವುದು ಕರುಣದ ಘನತೆಯಲ್ಲವೇ?" ಎಂದು ಲೋಕ ಆಡುವಂತೆ ಪಾಲ್ಗಡಲಿನಲ್ಲೇ ಮಲಗಿರುವ ವಿಷ್ಣು ಆ ವಿದುರನ ಮನೆಯಲ್ಲಿ ಒಕ್ಕುಡಿತೆಹಾಲಿನಲ್ಲಿ ಹಸಿವನ್ನು ನೀಗಿದನು

ಕೃಷ್ಣನ ಪಾದಾರವಿಂದಗಳ ಅಭಿಷೇಕದ ಪಯೋಬಿಂದುಗಳು ಕೌರವನ ಅರಮನೆಯನ್ನೆಲ್ಲ ವ್ಯಾಪಿಸುವಂತೆ ಕಡಲಾಗಿ ಹರಿದು ಬರಲು, "ಕ್ಷೀರಾಬ್ಧಿಯು ಮೇರೆಮರಿದು ಕೃಷ್ಣನೊಡನೆಯೇ ಬಂದಿದೆ ಇದು ಆಶ್ಚರ್ಯವಲ್ಲವೇ?" ಎಂದು ಹರ್ಷದಿಂದ ಭೀಷ್ಮಾದಿಗಳು ಹೊಗಳಿದರು ಹೋದ ಪ್ರಾಣ ಮತ್ತೆ ಬಂದಂತೆ, ಕೃಷ್ಣನು ಬಂದಿರುವ ಸುದ್ದಿಯನ್ನು ಕುಂತಿಯು ಕೇಳಿ ಪುಳಕಿತಳಾಗಿ ಹರ್ಷಾತಿರೇಕದಿಂದ ಆತನನ್ನು ಕಾಣಲು ಬಂದಳು

ಕುಂತಿಯು ಬರುವುದನ್ನು ಕಂಡು ಕೃಷ್ಣನು, ನರರಾಡುವ ನಾಟಕವನ್ನು ತಾನೇ ನಟಿಸಿ ತೋರಿಸುವಂತೆ ಮಂಚದಿಂದ ಕೂಡಲೇ ಇಳಿದು, 'ಹಿರಿಯರಿಗೆ ತಾನು ಹಿರಿಯ' ಎಂಬ ಗರ್ವತನವನ್ನು ಬಿಟ್ಟು ಕುಂತಿಗೆ ಕೈಮುಗಿದನು ಇದನ್ನು ನೋಡಿ ಸನಕಾದಿಗಳು ಆಶ್ಚರ್ಯಚಕಿತರಾದರು.

ಕುಂತಿಯು ಅಮಿತಕರುಣಾಸಿಂಧುವಿನ ಪದಾಬ್ಜಗಳಿಗೆ ನಮಸ್ಕರಿಸಿ ಪುಳಕಿತಳಾಗಿ ಸುಖಸಮಾರಂಭದಲ್ಲಿ ಮುಳುಗಿ, "ವೇದಾಳಿಗಳಿಗೂ ಅಗಮ್ಯನಾದ ನೀನು ನಮಗೆ ಹೇಗೆ ಗೋಚರನಾದೆ?" ಎಂದು ಆತನನ್ನು ಸ್ತುತಿಸಿದಳು ಬಳಿಕ, ದೇವಕಿ ವಸುದೇವ ಬಲದೇವ ಸುಭದ್ರೆ ಮೊದಲಾದ ಯಾದವರ ಕ್ಷೇಮಸಮಾಚಾರವನ್ನು ವಿಚಾರಿಸಿದಳು

ಕೃಷ್ಣನು, ವಸುದೇವ ದೇವಕಿಯಾದಿಯಾಗಿ ಎಲ್ಲರ ಕುಶಲ ಸ್ಥಿತಿಯನ್ನೂ ಕುಂತಿಗೆ ತಿಳಿಸಿದನು ಮತ್ತೆ ಆತನು "ಧರ್ಮರಾಜ, ಭೀಮ, ಪಾರ್ಥ, ನಕುಲ, ಸಹದೇವ, ದ್ರೌಪದಿ, ಅಭಿಮನ್ಯು, ಸುಭದ್ರೆ ಮೊದಲಾದವರೆಲ್ಲ ಸೌಖ್ಯದಿಂದಿದ್ದಾರೆ ಮಿತ್ರರಾಜರ ಎಲ್ಲ ಸೇನೆಗಳೂ, ದ್ರುಪದನ ಅಕ್ಷೌಹಿಣೀಸೇನೆಯೂ ಪಾಂಡವರ ಸಹಾಯಕ್ಕಾಗಿ ಬಂದಿದೆ. ರಾಜಕಾರ್ಯದ ಬಳಕೆಯೂ ಉತ್ತಮವಾಗಿದೆ ಕುಂತಿ! ಕೇಳು ಲೋಕದಲ್ಲಿ ಅದಿತಿ, ಕೌಸಲ್ಯೆ, ವಿನತೆ ಇವರು ಮಕ್ಕಳನ್ನು ಪಡೆದಿರುವುದು ಮಾತ್ರ ಹೇಗೆ ಫಲವೋ ಅಂತೆಯೇ ನಿನಗೂ ಮಕ್ಕಳನ್ನು ಹಡೆದಿದ್ದು ಮಾತ್ರ ಫಲ" ನಿನ್ನ ಮಕ್ಕಳು ದೃಢೈಕಸತ್ಯರು ಹಿಂದೆ ಒಪ್ಪಿಕೊಂಡಂತೆ ಹದಿಮೂರು ವರ್ಷಗಳ ವನವಾಸದ ಅವಧಿಯನ್ನು ಕಳೆದಿರುತ್ತಾರೆ ಈಗ ರಾಜ್ಯಾಭಿಲಾಷೆಯಿಂದ ಬಲವನ್ನು ಕೂಡಿಸಿರುತ್ತಾರೆ, ಅವರಿಗೆ ಈ ಕುರಾರದುರ್ಯೋಧನನಿಂದ ಅರ್ಧರಾಜ್ಯವನ್ನು ಕೊಡಿಸುವುದಕ್ಕಾಗಿ ನಾನು ಬಂದಿರುತ್ತೇನೆ" ಎಂದು ಎಲ್ಲವನ್ನೂ ಕುಂತಿಗೆ ತಿಳಿಸಿದನು

ಕುಂತಿಯು ಸಂತೋಷದಿಂದ ಕೃಷ್ಣನ ಅಮೃತಮಯವಚನವನ್ನು ಕೇಳುತ್ತ ಕಣ್ಣೀರಿನಿಂದ ನೆನೆದಳು ಕುಂತಿಗೆ ಎಲ್ಲ ಸುದ್ದಿಯನ್ನೂ ತಿಳಿಸಿದ ಬಳಿಕ, ಕೃಷ್ಣನು ಕೌರವನ ಅರಮನೆಯ ಸಮಯವನ್ನು ತಿಳಿದು ಬರುವುದಕ್ಕಾಗಿ ವಿದುರನನ್ನು ಕರೆದು "ವಿದುರ! ಕೌರವನ ಅರಮನೆಗೆ ಈಗಲೇ ಹೋಗು ಪಾಂಡವರಾಗಸಮುದಯನು ಬಂದಿದ್ದಾನೆಂದು ತಿಳಿಸು ಕೌರವನು ಮಾಡುವ ನಯದ ಬಳವಿಗೆಯನ್ನೂ ತಾಗುಬಾಗಿನ ರೀತಿಯನ್ನೂ ನೋಡೋಣ" ಎಂದು ಆತನಿಗೆ ಹೇಳಿದನು ವಿದುರನು ಹರಿಯ ಅಪ್ಪಣೆಯಂತೆ ಕೌರವನ ಅರಮನೆಗೆ ಬಂದನು

ಬಳಿಕ ಆತನು ಮೂರ್ಖರಿಗೆ ಕಿರೀಟಪ್ರಾಯನಾದ ಕೌರವನನ್ನು ಕಂಡು "ರಾಜನೇ! ಕೃಷ್ಣನು ಸಭೆಗೆ ದಯಮಾಡಲು ಸಮಯವುಂಟೇ?" ಎಂದು ಪ್ರಶ್ನಿಸಲು, ದುರ್ಯೋಧನನು "ಇಂದೇನು? ನಾಳೆ ಕಾಣಿಸಿಕೊಳ್ಳುತ್ತೇನೆ ಶತ್ರುಗಳನ್ನು ರಕ್ಷಿಸುವ ಭಾರಹೊತ್ತಿರುವ ಈ ತಂತ್ರಿಯು ಸಂಧಾನಕಾರ್ಯಕ್ಕೆ ಬಾರದೇ ಇರುತ್ತಾನೆಯೇ? ಸಭಿಕರೇ! ನೋಡಿ ಈ ನಾಡಿನಲ್ಲಿ ಆ ಪಾತಕಪಾಂಡವರು ಯಾವ ಆಟವಾಡಿದರೂ ಅದು ಭೂಮಿಯಲ್ಲೇ ಶ್ರೇಷ್ಠವೆನಿಸುತ್ತದೆ ರೂಢಿಯಲ್ಲಿ ಆಚಾರ ಹಾಳಾಗುತ್ತಿದೆ ಹಾದರದಲ್ಲಿ ಹುಟ್ಟಿದವರನ್ನು ಈ ಬೀಡಾಡಿ ಸೇರಿದ್ದಾನೆ"

ಎಂದು ಕರ್ಣನ ಕೈಯನ್ನು ತಟ್ಟಿದನು ಬಳಿಕ "ವಿದುರ ! ಆತನನ್ನು ನಾಳೆ ಬರಹೇಳು" ಎಂದು ತಿಳಿಸಿ ವಿದುರನನ್ನು ಕಳುಹಿಸಿ ಸಭೆಯನ್ನು ಮುಗಿಸಿದನು

ಮಾರನೆಯ ದಿನ ಬೆಳಗ್ಗೆ ದುರ್ಯೋಧನನು ಒಡ್ಡೋಲಗವನ್ನು ರಚಿಸಿದನು ಓಲಗಕ್ಕೆ ಎಲ್ಲ ಸಾಮಂತರನ್ನೂ ಕರೆಸಿದನು ಕೌರವನ ಬಲಗಡೆ ಪಕ್ಕದಲ್ಲಿದ್ದ ಚಿನ್ನದ ಆಸನದಲ್ಲಿ ಗಾಂಧಾರಿಯೊಡನೆ ಧೃತರಾಷ್ಟ್ರನು ಕುಳಿತಿದ್ದನು ಬಲಪಾರ್ಶ್ವದಲ್ಲೇ ಪರಾಕ್ರಮಿಯಾದ ಕರ್ಣ, ಭೀಷ್ಮ, ದುಶ್ಶಾಸನ, ಕೃಪ, ದ್ರೋಣ ಇವರೇ ಮೊದಲಾದವರು ಆಸನಗಳಲ್ಲಿ ಕುಳಿತಿದ್ದರು ರಾಜನ ಎಡಗಡೆ ಶಕುನಿ, ಸೈಂಧವ, ಕಾಂಭೋಜ, ಭೂರಿಶ್ರವ, ಸುಲೋಚನ, ವೃಷಸೇನ ಮೊದಲಾದ ಪರಾಕ್ರಮಿಗಳು ಆಸನಗಳಲ್ಲಿ ಕುಳಿತಿದ್ದರು ಕೌರವನ ನೂರುಮಂದಿ ಸಹೋದರರು ಎಡಪಾರ್ಶ್ವದಲ್ಲೂ, ಲಕ್ಷಣನೇ ಮೊದಲಾದ ನೂರುಮಂದಿ ರಾಜಕುಮಾರರು ಮುಂದೆಯೂ ಇದ್ದರು ರಾಜನ ಎರಡುಕಡೆಗಳಲ್ಲೂ ತರುಣಿಯರು ಶ್ವೇತಚಾಮರವನ್ನು ಹಿಡಿದು ನಿಂತಿದ್ದರು ಜಗಳವಿಲ್ಲದ ನೂಲಿನೆಳೆಯಿಂದಲೇ ಶತ್ರುರಾಜರ ತಲೆಯನ್ನು ಕತ್ತರಿಸುವ, ಸಾಮೋಪಾಯದಿಂದಲೇ ಶತ್ರುರಾಜರನ್ನು ಬೆದರಿಸುವ ಮಂತ್ರನಿಪುಣರಾದ ಮಂತ್ರಿಗಳು ಎಡಪಾರ್ಶ್ವದಲ್ಲಿ ಪ್ರಕಾಶಿಸುತ್ತಿದ್ದರು ಇದಲ್ಲದೆ ಪಂಡಿತರು, ಗಮಕಿಗಳು, ಚತುರ್ಭಾಷಾ ವಿಶಾರದ ಕವಿಗಳು, ಭಟ್ಟರು, ರಾವುತರು, ಮಾವತರು, ರಾಯಭಾರಿಗಳು, ಸಭೆಯಲ್ಲಿ ನೆರೆದಿದ್ದರು ಅರಸನ ಎಡಗಡೆ ಅಂತಃಪುರಸ್ತ್ರೀಯರೂ, ಪದ್ಮಿನಿ, ಚಿತ್ತಿನಿ, ಶಂಖಿನಿ, ಹಸ್ತಿನಿ ಸ್ತ್ರೀಯರೂ, ಕರ್ಣಾಟಕ ಮೊದಲಾದ ದೇಶದ ವನಿತೆಯರೂ ಇದ್ದರು

ಕೌರವನು ತಿರುಗಿನೋಡಿದ ಕ್ಷಣದಲ್ಲೇ ಎಲ್ಲ ಸಾಮಂತರಾಜರೂ ತಲೆಬಾಗುತ್ತಿದ್ದರು ಲಾಳ, ಮಾಳವ, ತುರುಕ, ಕೊಂಕಣ, ಗೌಳ, ಗುಜ್ಜರ, ವಂಗ, ಹಮ್ಮೀರ, ಕಳಿಂಗ ದೇಶದರಸರು ದೊರೆಯ ಅಪ್ಪಣೆಯನ್ನೇ ಎದುರುನೋಡುತ್ತಿದ್ದರು ಸಿತಚಾಮರವನ್ನು ತರುಣಿಯರು ಇಕ್ಕುತ್ತಿರಲು, ದುರ್ಯೋಧನನು ಕೃಷ್ಣನನ್ನು ಕಾಣಿಸಿಕೊಳ್ಳಲು ಸಭೆಯಲ್ಲಿ ರೀವಿಯಿಂದ ಸಿಂಹಾಸನದ ಮೇಲೆ ಕುಳಿತಿದ್ದನು

ಎಲ್ಲರೂ ಓಲಗದಲ್ಲಿ ನೆರೆದಿರಲು ಕೌರವನು "ಕೃತವಶಿಕ್ಷಾಗುರುವನ್ನು ಕರೆಯಿರಿ, ಬರಲಿ" ಎಂದು ಚಾರರಿಗೆ ಆಜ್ಞಾಪಿಸಿದನು ಚಾರರು, ರಾಜನ ಅಣತಿಯಂತೆ ಕೃಷ್ಣನಲ್ಲಿಗೆ ಹೋಗಿ ಆತನಿಗೆ ನಮಸ್ಕರಿಸಿ "ದೇವ ! ದೇವರ ಸಮಯವು" ಎಂದು ಬಿನ್ನಹಮಾಡಲು, ಕೃಷ್ಣನು ನಸುನಕ್ಕು "ಭಾವನವರು ಅಟ್ಟಿದರೇ ? ಹರಹರ ! ನಾವು ಬರುತ್ತೇವೆ" ಎಂದು ಅವರಿಗೆ ತಿಳಿಸಿ, ವಿದುರ ! ಕೇಳು ರಾವಣನ ಸ್ಥಿತಿ ಈತನಲ್ಲಿ ಈಗ ನೆಲಸಿದೆ ಖಳಮಾಯಾವಿದನಾದ ಈತನು ಸಾವಿಗೆ ಅಂಜುವನಲ್ಲ ನಮ್ಮ ಮಾತು

ಈತನಲ್ಲಿ ನಡೆಯುವುದಿಲ್ಲ" ಎಂದು ಹೇಳಿ, ಮಂಚದಿಂದ ಇಳಿದು ಹೊರಟನು ಮುನಿಗಳು ಆಕಾಶದಲ್ಲಿ ಗುಂಪುಗುಂಪಾಗಿ ನೆರೆದರು ಹಸ್ತಿನಾವತಿಯ ಜನರೆಲ್ಲ ಜತೆಯಲ್ಲೇ ಬರಲು ಕೃಷ್ಣನು ಕೌರವನ ಆಸ್ಥಾನಕ್ಕೆ ಬರುತ್ತಿದ್ದನು

ಕೃಷ್ಣನ ಆಗಮನದಿಂದ ಹಸ್ತಿನಾನಗರಿಯ ಮಲವು ಹೋಗಿ ಪಟ್ಟಣವು ನಿರ್ಮಲವಾಯಿತು ಕೃಷ್ಣನನ್ನು ನೋಡಿದವರ ಭವಬೀಜವೆಲ್ಲ ಬೆಂದುಹೋದವು ತರುಣಿಯರು ಆತನನ್ನು ನೋಡಿ ನೋಡಿ ಸಂತೋಷದಿಂದ ಪುಳಕಿತರಾದರು

ನೆನೆಯುವವರನ್ನು ರಕ್ಷಿಸುವವನೂ, ದೈತ್ಯಕುಲವನದಾವನೂ, ಅಘಹಾರಿಯೂ, ಭಕ್ತವತ್ಸಲನೂ, ಕರುಣಿಯೂ, ಭೂಭಾರವನ್ನಿಳುಹಲು ಮನುಜವೇಷಧಾರಿಯೂ ಆದ ಕೃಷ್ಣನು ಕೌರವವಾರಿಧಿಯನ್ನು ಮುಕ್ಕಳಿಸಲು ಕೌರವನ ಆಸ್ಥಾನಕ್ಕೆ ಬಂದನು

ಕೃಷ್ಣನು ಬರಲು ಭೀಷ್ಮ ದ್ರೋಣ ಗೌತಮ ಅಶ್ವತ್ಥಾಮ ಮೊದಲಾದವರೆಲ್ಲ ಎದುರುಗೊಂಡು ಬಂದು ಆತನಿಗೆ ನಮಸ್ಕರಿಸಿದರು

"ಸನಕಾದಿಗಳಿಗೂ ಮುನಿಗಳಿಗೂ ದೊರೆಯದ ನಿನ್ನ ಪದಕಮಲ ಸೇವೆ ನಮಗೆ ದೊರೆತಿದೆ ನಾವಲ್ಲವೇ ಕೃತಾರ್ಥರು?" ಎಂದು ಭೀಷ್ಮನು ಪ್ರೀತಿಯಿಂದ ಹಸ್ತಲಾಘವ ಕೊಡಲು ಮೇರುಪರ್ವತದ ಶಿಖರದಿಂದ ಮಿಂಚಿನೊಡನೆ ಮೋಡಗಳು ಭೂಮಿಗೆ ಇಳಿಯುವಂತೆ ಕೌಸ್ತುಭಪ್ರಭೆಯಿಂದ ಕೂಡಿದ ಶ್ಯಾಮಾಂಗನು ಕಾಂಚನರಥದಿಂದ ಇಳಿದನು

ಸಭೆಯಲ್ಲಿದ್ದ ಎಲ್ಲರೂ ಬದ್ಧಾಂಜಲಿಗಳಾಗಿ ಕೃಷ್ಣನನ್ನು ನಮಸ್ಕರಿಸಿದರು ಕುಮತಿ ದುರ್ಯೋಧನನು ಮಾತ್ರ ಸಿಂಹಾಸನವನ್ನು ಬಿಟ್ಟು ಕದಲಲಿಲ್ಲ

ಸೆಣಸು ಸೇರದ ದೇವನು ಎದುರಿನಲ್ಲಿ ತಲೆಬಾಗದೆ ಸಿಂಹಾಸನದಲ್ಲೇ ಕುಳಿತಿದ್ದ ದುರ್ಯೋಧನನ್ನು ಕಂಡು ನಸುನಕ್ಕು, ಅಂಗುಷ್ಠದ ತುದಿಯಿಂದ ನೆಲವನ್ನು ಒತ್ತಿದನು ಕೂಡಲೇ ದುರ್ಯೋಧನನ ಕುಳಿತಿದ್ದ ಕಾಂಚನ ಪೀಠದ ಕೊಂಡಿ ಮುರಿಯಿತು ಇದನ್ನು ನೋಡಿ ಗಗನದಲ್ಲಿ ನೆರೆದಿದ್ದ ದೇವತೆಗಳು 'ಆ' ಎಂದರು ಮರುಕ್ಷಣದಲ್ಲೇ ಕೌರವನು ಉರುಳಿ ಬಂದು ಕೃಷ್ಣನ ಪಾದಗಳ ಮೇಲೆ ಬಿದ್ದನು

ಆಗ ಕೃಷ್ಣನು "ದೊರೆಯೇ! ಸಿಂಹಾಸನದ ಮೇಲಿರದೆ ನೀನು ಬರಬಹುದೇ? ನಾನೇ ಬಂದು ಹರಸುತ್ತಿದ್ದೆ ತಪ್ಪೇನು?" ಎನುತ್ತ ದುರ್ಯೋಧನನ ಮಸ್ತಕವನ್ನೆತ್ತಿದನು ಭೀಷ್ಮನು ಹಸ್ತಲಾಘವ ಕೊಡಲು ಕೌರವರ ಸನ್ಮಾನವನ್ನು ಸ್ವೀಕರಿಸಿ ಕೃಷ್ಣನು ಸಿಂಹಾಸನದ ಮೇಲೆ ಕುಳಿತುಕೊಂಡನು ಕೃಷ್ಣನ ಬಲಗಡೆ ಧೃತರಾಷ್ಟ್ರನು ಕುಳಿತಿದ್ದನು ಎಡಗಡೆ ದುರ್ಯೋಧನನು ಕರ್ಣನೇ ಮೊದಲಾದವರೊಡನೆ ಕುಳಿತಿದ್ದನು ಕೃಷ್ಣನ ಅಪ್ಪಣೆಪಡೆದು ಎಲ್ಲ ಋಷಿಗಳೂ ಕುಳಿತುಕೊಂಡರು

ಬಳಿಕ ಭೀಷ್ಮನು ಜಲಪೂರ್ಣ ಹೊಂಗಲಶಗಳನ್ನು ತರಿಸಿ ಕೃಷ್ಣನ ಪಾದಯುಗವನ್ನು ತೊಳೆದು, ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಿದನು "ಮಹಾನುಭಾವರ ಸಂದರ್ಶನದಿಂದ ನನ್ನ ಜನ್ಮವು ಸಾರ್ಥಕವಾಯಿತು" ಎಂದು ಕೈಮುಗಿದು, ಪರಶುರಾಮಾದಿಗಳನ್ನು ಸತ್ಕರಿಸಿ, ಗಂಧಾಕ್ಷತೆ ಗಳಿಂದ ಉಪಚರಿಸಿ ಎಲ್ಲರಿಗೂ ಆತನು ವೀಳಯವನ್ನು ಕೊಟ್ಟನು ಆ ಬಳಿಕ ಕೃಷ್ಣನು "ಕುಶಲವೇ ಕುರುರಾಯ ? ಬಾ ಮುಖದಲ್ಲಿ ದುಗುಡ ವೇಕೆ ?" ಎಂದು ಪ್ರಶ್ನಿಸಿ ಕೌರವನನ್ನು ತನ್ನ ಸಮೀಪಕ್ಕೆ ಕರೆದನು

ಅದಕ್ಕೆ ಕೌರವನು "ದೇವ ! ಉತ್ತರಕೊಡಲು ನಾನು ಸಮರ್ಥ ನಲ್ಲ ಭಾವತನದ ಸಲುಗೆಯಿಂದ ಮಾತಾಡಲು ಅವಕಾಶಕೊಟ್ಟರೆ ಹೇಳುತ್ತೇನೆ ಅವಧರಿಸಿ ನೀವು ಬರುವಿರೆಂದು ಮಹಾವಿಲಾಸದಿಂದ ಷಡ್ರ ಸೋಪೇತವಾದ ಅಡಿಗೆಯನ್ನು ಸಿದ್ಧಪಡಿಸಿದ್ದೆನು ನನ್ನ ಅರಮನೆಗೆ ಬರದೆ ವಿದುರನ ಮನೆಯಲ್ಲಿ ನೀವು ಊಟಮಾಡಿದಿರಿ. ಗೋವಳಿಗತನ ನಿಮ್ಮಲ್ಲಿ ತಪ್ಪಲಿಲ್ಲ ಕೃಪ, ದ್ರೋಣ, ಭೀಷ್ಮ ಇವರ ಮನೆಯನ್ನು ಹೊಗದೆ, ಅವಿವೇಕಿ ತೊತ್ತಿನ ಮಗನಾದ ವಿದುರನ ಮನೆಯಲ್ಲಿ ಊಟಮಾಡಿದಿರಿ ನಿಮ್ಮನ್ನು ಸಾಕಿದವನು ನಂದಗೋಪ , ಈ ಅನುಚಿತವರ್ತನೆ ಯೋಗ್ಯ ವಲ್ಲವೇ ! ನಿಮಗೇಕೆ ರಾಯರ ರೀವಿ ?" ಎಂದು ಹೇಳಿದನು

ಕೌರವನ ಬಿರುನುಡಿಗಳನ್ನು ಕೇಳಿ ವಿದುರನಿಗೆ ಕೋಪ ಬಂದಿತು ಆತನು "ದುರುಳ ! ನೀನು ನಿಂದಿಸಿದ ನುಡಿಗೆ ಪ್ರತ್ಯುತ್ತರವೇಕೆ ? ನಿನ್ನ ತಾಯಿಗೆ ಮೊದಲು ಗಂಡನಾರು ? ಹೇಳು ನಾನು ತೊತ್ತಿನ ಮಗ ಹೌದು ನೀನು ಅಜಪುತ್ರನಲ್ಲವೇ ? ನಮ್ಮಿಬ್ಬರ ಕುಂದುಕೊರತೆ ಗಳು ಕೃಷ್ಣನಿಗೆ ತಿಳಿದೇ ಇದೆ ನೀನು ನಿನ್ನ ಕೊರತೆಯ ಹಾನಿವೃದ್ಧಿ ಗಳನ್ನು ತಿಳಿದುಕೊಳ್ಳದೆ ಉಳಿದವರನ್ನೆಲ್ಲಾ ಏತಕ್ಕೆ ನಿಂದಿಸುತ್ತೀಯೆ ? ಕೋಪೋದ್ರೇಕದಿಂದ ಭೀಮನು ನಿನ್ನ ತೊಡೆಗಳನ್ನು ಮುರಿಯುವ ಸಮಯದಲ್ಲಿ ನಿನ್ನನ್ನು ಕಾಪಾಡಬೇಕೆಂದು ಈ ಧನುಸ್ಸನ್ನು ಇಟ್ಟು ಕೊಂಡಿದ್ದೆ ನಿನ್ನಿಂದ ಆಡಿಸಿಕೊಂಡೂ ನಿನ್ನನ್ನು ಕಾಪಾಡಲೇ ?" ಎಂದು ನಿರ್ಭಯವಾಗಿ ಹೇಳಿ, ಆತನು ಧನುಸ್ಸನ್ನು ಮುರಿದನು

ಇದನ್ನು ನೋಡಿ ಕುರುಸೇನೆ ಕಳವಳಿಸಿತು ಧೃತರಾಷ್ಟ್ರ ಮತ್ತು ಗಾಂಧಾರಿ ಇವರಿಬ್ಬರೂ ಮರುಗಿದರು ರಾಜನಿಗೆ ದುಗುಡ ಹೆಚ್ಚಿತು ಭೀಷ್ಮದ್ರೋಣರು ದುಃಖಿಸಿದರು ಆಗ ಕೃಷ್ಣನು ವಿದುರನನ್ನು ಸಂತೈಸಿದನು ಬಳಿಕ ಆತನು "ಕೌರವ ! ಕೇಳು ನನ್ನ ಶೀಲವೇ ಬೇರೆ ಪ್ರಿಯವಾದವರು, ವಿಪತ್ತಿನಲ್ಲಿ ಆಶ್ರಯಕೊಟ್ಟವರು ಇವರ ಮನೆಯಲ್ಲಿ ಊಟಮಾಡಬಹುದು ಇದು ಜನಸಾಮಾನ್ಯಕ್ಕೂ ನಿಯತ ನೀನು ನನಗೆ ಪ್ರಿಯನೂ ಅಲ್ಲ, ವಿಪದಾಶ್ರಯನು ಮೊದಲೇ ಅಲ್ಲ ಹೀಗಿರುವಾಗ ನಿನ್ನ ಮನೆಯಲ್ಲಿ ಊಟಮಾಡುವುದು ಹೇಗೆ ಸಾಧ್ಯ ?

ಹೇಳು , ಶತ್ರುಗಳಿಗೆ ಊಟಮಾಡಿಸಲೂ ಬಾರದು , ಶತ್ರುಗಳ ಮನೆಯಲ್ಲಿ ಊಟಮಾಡಲೂ ಬಾರದು ಇದೇ ರಾಜನೀತಿ ನೀನು ಪಾಂಡವರಿಗೆ ಶತ್ರು. ಪಾಂಡವರು ನನ್ನ ಜೀವನ ಹೀಗಿರಲು ಹಗೆಯನ್ನು ಹೇಗೆ ನಂಬಲು ಸಾಧ್ಯ? ಹೇಳು" ಎಂದನು

ಅದಕ್ಕೆ ಕೌರವನು "ಸಕಳಂಕಚಂದ್ರನು ವಾರಿಧಿಗೆ ಸೇರುತ್ತಾನೆ ನೀನಾದರೋ ಅಖಿಳಗೋಪೀಜಾರ ಜಾರೆಯ ಮಕ್ಕಳಿಗೆ ನೀನೇ ಜೀವ ಇದರಲ್ಲಿ ತಪ್ಪೇನು ' ಯಾರಾದರೇನು? ತಮ್ಮಂಥಹವರೊಡನೆಯೇ ಸೇರುತ್ತಾರಲ್ಲವೇ? ಪಾಂಡವರ ಮೇಲಿನ ನಿನ್ನ ಪ್ರೀತಿಗೆ ನಾನು ಹೆದರುವುದಿಲ್ಲ ನೀನು ಬಂದ ಕಾರಣವೇನು? ಹೇಳು" ಎಂದನು.

## ೯ನೆಯ ಸಂಧಿ

ಇದನ್ನು ಕೇಳಿ ಕೃಷ್ಣನು ನಕ್ಕು "ದೊರೆಯೇ! ಕೇಳು. ಅವಧಿ ಕಳೆದಿದೆ ಪಾಂಡವರು ನಿನ್ನವರು ವನವಾಸದ ಪ್ರಯಾಸದಿಂದ ಅವರು ಬಹಳ ನವೆದಿದ್ದಾರೆ ಅವರೊಡನೆ ಕೂಡಿಕೊಂಡಿರುವುದು ನಿನಗೆ ಒಳ್ಳೆಯದು ಅರ್ಧರಾಜ್ಯವನ್ನು ಅವರಿಗೆ ಕೊಡು ಈ ನಶ್ವರ ಜೀವನದಲ್ಲಿ ಪುರುಷಾರ್ಥವನ್ನು ಸಂಪಾದಿಸಲು ಕಲಿಯಬೇಕು ಅರಸುತನದ ಮೋಹ ಹೆಚ್ಚಲು ಈಚಿನ ರಾಜರು ಮದಾಂಧರಾಗುತ್ತಾರೆ ಐಶ್ವರ್ಯಮದವೆಂಬ ಕತ್ತಲೆ ಕಣ್ಣಿಗೆ ಕವಿದಿರಲು ಪರಮವಚನಾಂಜನದಿಂದ ಕತ್ತಲೆಯನ್ನು ಕಳೆದು ಪ್ರಜ್ವಲಿಸುವುದೇ ನೀತಿಕಾರರ ಕೆಲಸ ಕೋಶ, ಬಲ, ತಂತ್ರ, ಹೆಚ್ಚಿದ ದೇಶ, ದುರ್ಗ, ಅಮಾತ್ಯ, ಮಿತ್ರಮಹೀಶಜನ ಈ ಸಪ್ತಾಂಗದಲ್ಲಿ ನಿನಗೆ ಮಿತ್ರಮಹೀಶ ಜನದ ಕೊರತೆ ಇದೆ ಪಾಂಡವರು ಸಹಾಯಕ್ಕೆ ಬರಲು ಬಳಿಕ ನಿನ್ನನ್ನು ಎದುರಿಸುವವರೇ ಇಲ್ಲ ಈ ಸಪ್ತಾಂಗದಲ್ಲಿ ಒಂದು ಕಡಿಮೆಯಾದರೂ ಜೀವಿಸುವುದೇ ಸಂದೇಹ? ಇದು ನಿನಗೆ ತಿಳಿಯದೇ? ನಿನಗೆ ರಾಜನೀತಿಯನ್ನು ಹೇಳುವ ಸಮರ್ಥರಾರೂ ಇಲ್ಲ. ಋಷಿಗಳು ಹೇಳಿದರೆ ನೀನು ಅದರಂತೆ ನಡೆಯುವುದಿಲ್ಲ ಕುರುಕುಲಮೌಳಿಯೇ! ನಯದಿಂದ ನಡೆ ರಾಜನೀತಿಗೆ ಸಾಮೋಪಾಯವೇ ಮುಖ್ಯ ರಾಜರ ಉನ್ನತಿಗೆ ಇದೇ ಮೂಲಬೀಜ ಸಾಮ ತಪ್ಪಿದ ಮೇಲೆ ನೀತಿಯೂ ಹೋಗುತ್ತದೆ ದಂಡೋಪಾಯವು ಸಾಮಾನ್ಯವಾದದ್ದು ನೀನು ಮಾಡಿದ ಅಪಕಾರಗಳನ್ನೆಲ್ಲಾ ಪಾಂಡವರು ಮರೆಯುತ್ತಾರೆ ನನಗೆ ತಿಳಿದಂತೆ ನಿನ್ನೊಡನೆ ಕೂಡಿ ಬದುಕುವ ಮಾತನ್ನೇ ಅವರು ಆಡುತ್ತಾರೆ, ಕಾಡಿನಲ್ಲಿದ್ದು ಬಹಳ ದುಃಖಿಸಿರುವ ಅವರಿಗೆ ನೀನು ಉಚಿತಮಾಡಿ ರಾಜ್ಯವನ್ನು ಕೊಡು ಇದೇ ವಿದುರನಿಗೆ ಉತ್ಸವ, ಕೃಪನಿಗೆ ಸಂತೋಷ, ಭೀಷ್ಮನ ಇಚ್ಛೆ, ಧೃತರಾಷ್ಟ್ರನ ಅಭ್ಯುದಯ" ಎಂದು ನಯವಾಗಿ ನುಡಿದನು

ಇದನ್ನು ಕೇಳಿ ಮತ್ತನಾದ ಆ ಖಳದುರ್ಯೋಧನನು ಮುಖ ತಿರುಗಿಸಲು ಆಸ್ಥಾನದಲ್ಲಿದ್ದ ಜನರೆಲ್ಲ ಬೆದರಿ ಅಲುಗಾಡದಿದ್ದರು

ಕ್ಷತ್ರಿಯಕುಲಕುಠಾರನಾದ ಪರಶುರಾಮನು ಸಭಾವನದಲ್ಲಿ ಸಿಂಹಧ್ವನಿಯಂತೆ "ದುರ್ಯೋಧನ! ಕೃಷ್ಣನನ್ನು ಅಳಲಿಸಬೇಡ ಲೋಭವು ಅತಿಶಯದ ನಿರ್ಬಂಧ ಇದು ನಯಜ್ಞರಿಗೆ ತಕ್ಕುದಲ್ಲ" ಎಂದು ಗರ್ಜಿಸಿದನು ಮತ್ತೆ ಭಾರ್ಗವನು "ದಂಬೋದ್ಭವನು ಗರ್ವದಿಂದ ನರನಾರಾಯಣರನ್ನು ಪ್ರತಿಘಟಿಸಿ ಕೆಟ್ಟನು ಇವರಿಬ್ಬರಲ್ಲಿ ಅರ್ಜುನನೇ ನರ ಕೃಷ್ಣನೇ ನಾರಾಯಣ ಆದಕಾರಣ ಪಾಂಡವರ ವೈರವನ್ನು ಬಿಡು" ಎಂದು ಹೇಳಿದನು

ಬಳಿಕ ಕಣ್ವನು "ರಾಜನೇ! ಪರಶುರಾಮನು ತಪ್ಪಿ ನುಡಿಯುವುದಿಲ್ಲ ಈ ದರ್ಪವು ನಿನಗೆ ಒಳಿತಯದಲ್ಲ ನೀನು ಅರ್ಧರಾಜ್ಯವನ್ನು ಪಾಂಡವರಿಗೆ ಒಪ್ಪಿಸು ಹರಿಯು ಗರುಡನ ದರ್ಪವನ್ನೇ ಮುರಿಯಲಿಲ್ಲವೇ? ವೃಥಾ ಅಡ್ಡಿಮಾಡಿ ತೊಂದರೆಗೊಳಗಾಗಬೇಡ" ಎಂದು ಹೇಳಿದನು

ಬಳಿಕ ನಾರದನು "ಕೌರವ! ಕಣ್ವನ ಮಾತು ಸತ್ಯ, ಕೃಷ್ಣನ ಮಹಿಮೆ ಘನವಾದುದು ಇದನ್ನು ತಿಳಿದೂ ಗರ್ವಗ್ರಹಹಿಡಿದು ಮರುಳಾಗಬೇಡ ಹಿಂದೆ ಅಹಂಕಾರಪಟ್ಟ ಗಾಲವನು ಗುರುದಕ್ಷಿಣೆಗಾಗಿ ಭೂಮಿಯನ್ನೆಲ್ಲಾ ಸುತ್ತಿ ಅದನ್ನು ಸಂಪಾದಿಸಿ ತರಲು ಸಾಧ್ಯವಾಗದಿರಲು ಆತನ ಗರ್ವವನ್ನು ವಿಶ್ವಾಮಿತ್ರನು ಮುರಿಯಲಿಲ್ಲವೇ? ನಿನ್ನ ಪೂರ್ವಿಕನಾದ ಯಯಾತಿಯು, ದೇವಲೋಕದಲ್ಲಿ ತನ್ನಂಥ ಧರ್ಮಿಷ್ಠರು ಯಾರಿರುವರೆಂದು ಅಹಂಕಾರಪಡಲು ದೇವತೆಗಳು ಸ್ವರ್ಗದಿಂದಲೇ ಆತನನ್ನು ತಳ್ಳಿದರಲ್ಲವೇ? "ಧರ್ಮಮಾರ್ಗವು ಸುಲಭ ಎಂದು ಹಮ್ಮಿನಿಂದ ಹೆಮ್ಮೆಪಟ್ಟು ಕೆಡಬೇಡ ನೀತಿಯನ್ನು ನಂಬಿದವನು ಕೆಡುವುದಿಲ್ಲ" ಎಂದು ಹೇಳಿದನು

ಪುನಃ ಕೃಷ್ಣನು "ದೊರೆಯೇ! ನಾನಾದರೋ ಪಾಂಡವರ ಕಡೆಯವನು ಕಾಡಿನಲ್ಲಿ ಗೆಡ್ಡೆಗೆಣಸು ತಿಂದು ಇರುವ ಈ ಋಷಿಗಳಿಗೆ ರಾಜರ ಹಂಗೇನಿದೆ? ಇವರಿಗೆ ಯಾರಲ್ಲೂ ಪಕ್ಷಪಾತವಿಲ್ಲ ಇವರ ಮಾತನ್ನು ಕೇಳು" ಎಂದು ತಿಳಿಸಿದನು

ಕೃಷ್ಣನ ಮಾತನ್ನು ಕೇಳಿ ಆ ಖಳದುರ್ಯೋಧನನು ಮೀಸೆಯನ್ನು ಹುರಿಮಾಡಿ ನಸುನಕ್ಕು, ಕರ್ಣಾದಿಗಳ ಮುಖವನ್ನು ತಿರುಗಿ ನೋಡಿ ಹರಿಯ ಮಾತನ್ನು ಲೆಕ್ಕಿಸದೆ "ಮುರಾರಿ! ಮೂಢತನದ ಈ ಮಾತೇಕೆ? ನನಗೆ ಪಾಂಡವರ ಕಥೆಯನ್ನು ಹೇಳಬೇಡ, ಅದು ಕಿವಿಗಳಿಗೆ ಶೂಲ ಅವರಿಗೆ ಮೊದಲು ಮಾವನ ಸಹಾಯ ಮಧ್ಯದಲ್ಲಿ ವಿರಾಟನ ಸಖ್ಯ ಕೊನೆಗೆ ನೀನು 'ಮಮ ಜೀವಾ ಹಿ' ಎನ್ನುತ್ತೀಯೆ ಕಡೆಯಲ್ಲಿ ನಾವೇ ಹೊರಗು

ಮಗೆ ಯಾವ ರಾಜರ ಸ್ನೇಹವಿದೆ? ದೇವ! ನಮ್ಮನ್ನು ನಾಚಿಸಬೇಡ, ಸಂಧಿಯ ಮಾತನ್ನು ಮರೆ ಪಾಂಡವರು ನಮ್ಮಲ್ಲಿ ಸರಸವಾಡುವ ರೀತಿ ಇದಲ್ಲದೆ, ನಿನ್ನೊಡನೆ ರಾಜಕಾರ್ಯವನ್ನು ಆಲೋಚಿಸಿ ಕಳುಹಿಸಿರುವ ಕ್ರಮವೇ? ಇದನ್ನು ನಾನು ಮೆಚ್ಚಲಾರೆ ಯುದ್ಧ ಬೇಕಾದರೆ ಬೇಡಿ ಕೊಳ್ಳಬಹುದು ಭೂಮಿಯ ಮಾತನ್ನು ಆಡುವುದಾದರೆ ಪಾಂಡವರೇತಕ್ಕೆ ? ನಾವೇತಕ್ಕೆ ? ಎಂದು ಹೇಳಿದನು

ಅದಕ್ಕೆ ಕೃಷ್ಣನು "ದುರ್ಯೋಧನ! ಸಂಧಾನಕ್ಕೆ ಒಪ್ಪು ನನ್ನ ಮಾತನ್ನು ಮೀರಬೇಡ ದುಸ್ವರಾಡುವ ಸವಿಮಾತುಗಳಿಗೆ ಮನಕೊಡ ಬೇಡ ಚಾಡಿಕೋರರನ್ನು ಹತ್ತಿರ ಸೇರಿಸಬೇಡ ಕೆಲಸಕ್ಕೆ ಬಾರದ ಬಾಯಿ ಮಾತಿನ ಸ್ನೇಹಿತರು ಹೇಳುವುದನ್ನು ಮಾಡಬೇಡ ಪಾಂಡವರೊಡನೆ ಸೇರಿದರೆ ನಿನ್ನ ಬಾಳುವೆಗೆ ಹಿತಕರ ಅವರಿಗೆ ಇಂದ್ರಪ್ರಸ್ಥದಲ್ಲಿ ರಾಜ್ಯವನ್ನು ಕೊಟ್ಟು ಪಾಂಡವಪ್ರತಿಷ್ಠಾಚಾರ್ಯನೆಂಬ ಬಿರುದನ್ನು ನೀನು ಧರಿಸಿದೆಯಾದರೆ ಭೂಮಿಯಲ್ಲಿ ನಿನಗೆ ಸಮಾನರಾದ ರಾಜರಾರೂ ಇರುವುದಿಲ್ಲ ಈಗ ನಾನಾಡುವ ಈ ನುಡಿಗಳು ನಿನಗೆ ಕರ್ಣಕಠೋರ ವಾದರೂ ಕೊನೆಗೆ ಒಳ್ಳೆಯದೇ ಆಗುತ್ತದೆ ನೀತಿಗೆ ಕೌರವವಂಶ ಆಲಯ, ಸಿರಿಯ ಖ್ಯಾತಿಗೆ ನೆಲೆ, ಸೌಖ್ಯಗಳಿಗೆಲ್ಲ ಬೀಜ ಎನಿಸಿದೆ ನೀನು ಈ ಭೂಮಿಗೆ ಆಸೆಪಟ್ಟು ಕುಲಘಾತಕನೆಂಬ ಅಪಕೀರ್ತಿಗೆ ಗುರಿಯಾಗ ಬೇಡ ಭೂಲೋಕದ ರಾಜರಿಗೆ ಹಸ್ತಿನಾಪುರದ ಅರಮನೆಯ ಬಾಗಿಲಲ್ಲಿ ಸಮಯವು ದೊರೆಯುವುದೇ ಪುಣ್ಯವೆಂದು ಪ್ರಸಿದ್ಧವಾಗಿರುವ ಈ ಸಾರ್ವಭೌಮತೆಯ ಸಂಪತ್ತಿಗೆ ಪಾಂಡವರು ಅನ್ಯರಾದರೆ? ನಿನ್ನ ಸಿರಿಯು ಮೆರೆಯಬಲ್ಲುದೇ? ದುಡುಕುತನವನ್ನು ಬಿಡು ಧರ್ಮರಾಜನು ನಿನಗೆ ಹಿತವಂತ ನಿನ್ನಲ್ಲಿ ಅರ್ಜುನನಿಗೆ ಮಮತೆ ಹೆಚ್ಚು ಭೀಮನ ತಮದ ನುಡಿಯು ಈಗ ಹಿಂದಾಗಿದೆ ನಕುಲನೂ ನಿನಗೆ ಪ್ರತಿ ಹೇಳುವುದಿಲ್ಲ ಎಲ್ಲರೂ ನಿನ್ನ ಮಾತನ್ನೇ ಎದುರುನೋಡುತ್ತಾರೆ ಭ್ರಾಂತನಾಗಬೇಡ ಸೋದರರನ್ನು ಕಾಪಾಡು" ಎಂದು ಹೇಳಿದನು

ಇದನ್ನು ಕೇಳಿ ದುರ್ಯೋಧನನು "ಕೃಷ್ಣ! ಧರ್ಮರಾಜನ ಮೋಹ ನಿನ್ನ ಪಾದಗಳಲ್ಲೇ ಇರಲಿ, ಭೀಮನ ಹೆಮ್ಮೆ ನಿನ್ನಲ್ಲೇ ಇರಲಿ, ಅರ್ಜುನನ ಪ್ರೇಮವೂ ಹಾಗೆಯೇ ಇರಲಿ ನಮ್ಮ ಭೂಮಿಯಲ್ಲಿ ಅರ್ಧವನ್ನು ಬೇಡುವ ಅವರು ನಮಗೆ ಬಂಧುಗಳಲ್ಲ ಸಂಧಿಗೆ ತಮ್ಮನು ಒಪ್ಪುವುದಿಲ್ಲ" ಎಂದು ದುಶ್ಯಾಸನನ ಮುಖವನ್ನು ನೋಡಿದನು.

ಕೂಡಲೇ ದುಶ್ಯಾಸನನು "ಕೃಷ್ಣ! ಸೂರ್ಯನೊಡನೆ ಅಂಧ ಕಾರವು ಸೇರುತ್ತದೆಯೇ? ಈ ಬಂಧುಕೃತ್ಯದ ಮಾತೂ ಅಂತೆಯೇ ರಾಜಕಾರ್ಯದಲ್ಲಿ ನೀವು ನಿರ್ಬಂಧಪಡಿಸಿ ಏಕೆ ಮಾತಾಡುತ್ತೀರಿ?

ನಾವು ಸಂಧಿಗೆ ಒಪ್ಪುವುದಿಲ್ಲ. ಪಾಂಡವರ ಸಂಬಂಧವು ನಮಗೇತಕ್ಕೆ"
ಎಂದು ಗರ್ಜಿಸಿದನು

ಆಗ ಭೀಷ್ಮನು "ಕೌರವ! ಈ ಹರಿಯ ಮಾತನ್ನು ಕೇಳು ದೈವದ ಪ್ರೀತಿ ತಪ್ಪಿದಮೇಲೆ ಸುಭಟರ ಸಾಹಸ ಪ್ರಯೋಜನಕಾರಿಯಲ್ಲ ನಮ್ಮ ಪರಾಕ್ರಮವನ್ನು ನೆಚ್ಚಬೇಡ ಕೃಷ್ಣನಾಡಿದ ಹಿತವಚನವನ್ನು ತ್ಯಜಿಸಬೇಡ ಸೀತೆಯನ್ನು ಸೆರೆಗೆಯ್ದು ಸ್ವಾಮಿದ್ರೋಹಿಯಾದ ರಾವಣನನ್ನು ಹೋಲಬೇಡ" ಎಂದನು

ಅನಂತರ ದ್ರೋಣನು "ದುರ್ಯೋಧನ! ನೆಲವನ್ನು ಬೇಡುವ ಪಾಂಡವರ ಭುಜಪರಾಕ್ರಮಕ್ಕೆ ಕೊರತೆಯಿಲ್ಲ ನಿನಗೆ ನೀತಿಯನ್ನು ತಿಳಿಸಲು ಬಂದಿರುವ ಕೃಷ್ಣನೂ ಸಾಮಾನ್ಯನಲ್ಲ ಕೃಷ್ಣನ ಅಪ್ಪಣೆಯಂತೆ ಪಾಂಡವರಿಗೆ ಅರ್ಧರಾಜ್ಯವನ್ನೊಪ್ಪಿಸು , ಈ ವಿಲಾಸವನ್ನು ಕೆಡಿಸಬೇಡ"
ಎಂದನು

ಅದನ್ನು ಕೇಳಿ ದುರ್ಯೋಧನನು "ನಾನು ಪಾಂಡವರಲ್ಲಿ ಅನೇಕ ಕೇಡುಗಳನ್ನು ಚಿಂತಿಸಿದೆ ಮುಚ್ಚುಮರೆ ಏತಕ್ಕೆ? ರಾಜ್ಯದ ಆಸೆಯಿಂದ ಅವರನ್ನು ಕೆಡಿಸುವ ಮನಸ್ಸನ್ನೇ ಮಾಡಿದೆ ಜೂಜುಗಾರನಂತೆ ಕಪಟದಿಂದ ನೆಲವನ್ನು ಅವರಿಂದ ತೆಗೆದುಕೊಂಡೆ ಈಗ ಪಾಂಡವರಿಗೆ ವನವೇ ಗತಿ ಯಲ್ಲದೆ ಬೇರೆ ಉಂಟೇ ಕೃಷ್ಣ!" ಎಂದನು

ಅದಕ್ಕೆ ಕೃಷ್ಣನು ನಕ್ಕು "ದುರ್ಯೋಧನ! ಕೇಳು, ಪಾಂಡವರು ಅಪಕೀರ್ತಿಗೆ ಅಂಜಿ ಸತ್ಯಕ್ಕಾಗಿ ವನವಾಸವನ್ನು ಅನುಭವಿಸಿದರು ಇದರಿಂದ ಪಾಂಡವರ ಕುಲಕ್ಕೆ ಕುಂದೇ? ಈಗ ಅವರು ವನವಾಸವನ್ನು ಮುಗಿಸಿರುತ್ತಾರೆ ರಾಜ್ಯದಲ್ಲಿ ಸಮಭಾಗ ಪಡೆಯುವ ಛಲವನ್ನು ಭೀಮನು ಬಿಡುತ್ತಾನೆಯೇ? ನೀನು ಕುಶಸ್ಥಳ, ವೃಕಸ್ಥಳ, ವಾಸಂತಿ, ವಾರಣಾವತ ಈ ನಾಲ್ಕು ನಗರಿಗಳೊಡನೆ ನಿನ್ನ ಮನಸ್ಸಿಗೆ ತೋರಿದ ಒಂದು ಪಟ್ಟಣವನ್ನು ಪಾಂಡವರಿಗೆ ಕೊಡು ನಾನು ಅವರನ್ನು ಒಪ್ಪಿಸುತ್ತೇನೆ ಪ್ರತಿಘಟಿಸಬೇಡ" ಎಂದು ಹೇಳಿದನು

ಆಗ ದುರ್ಯೋಧನನು "ಕೃಷ್ಣ! ಬೇಡಿದ ಒಂದೊಂದೂರು ನಮ್ಮ ನಾಡಿನ ತಲೆಮಂಡೆಗಳು ಇವುಗಳ ಬೆಳವಣಿಗೆಯೇ ಹಸ್ತಿನಾನಗರ ನಿನಗೆ ಬೇಡುವುದು ಗೊತ್ತಿದೆ ನೀನು ಮಾನಿಷ್ಠ , ಅದನ್ನು ಆಡುವುದೇತಕ್ಕೆ? ನೀನು ನೆಲವನ್ನು ಎರಡೇ ಪಾದಗಳಿಂದ ಆವರಿಸಿದವನಲ್ಲವೇ? ನಿನಗೆ ನಾನು ಅಂಜುತ್ತೇನೆ ನಿನ್ನನ್ನು ಕರೆದು ಮೂರಡಿನೆಲವನ್ನು ಧಾರೆ ಕೊಟ್ಟು ಬಲಿ ಪಾತಾಳಕ್ಕಿಳಿದ ಇನ್ನು ಈ ನನ್ನ ರಾಜ್ಯದಲ್ಲಿ ಐದೂರು ಗಳನ್ನು ಕೊಟ್ಟ ನನಗೆ ಏನುಗತಿಯಾಗುವುದೋ? ನೀನು ಪರಮ ಪುರುಷ ನಿನಗೆ ನಾನು ಶರಣುಹೊಗುತ್ತೇನೆ ಬಂದ ದಾರಿಯಲ್ಲೇ ಮರಳು" ಎಂದನು

ಅದಕ್ಕೆ ಕೃಷ್ಣನು "ಕೌರವ! ನೀನು ಪಾಂಡವರಲ್ಲಿ ಎಸಗುವ ಕಪಟ ಬೆಳೆಯಲಿ ಈ ನಿನ್ನ ಒಳಗವೇ ಬದುಕಲಿ ಪಾಂಡವರು ಪುನಃ ನವೆಯಲಿ ಐದುಮಂದಿಗೂ ಈ ನಿನ್ನ ಭೂಮಿಯಲ್ಲಿ ಯಾವುದಾದ ರೊಂದು ಸ್ಥಳವನ್ನು ಕೊಡು" ಎಂದು ಕೇಳಿದನು

ಆಗ ದುರ್ಯೋಧನನು ಜಗದ್ರಕ್ಷಕನಾದ ಕೃಷ್ಣನನ್ನು ನಿಂದಿಸಿ 'ಕೃಷ್ಣ! ರಾಜ್ಯಾರ್ಧವನ್ನು ಕೊಡುವುದಿಲ್ಲ ಐದೂರುಗಳನ್ನು ಕೊಡುವ ವಿಚಾರ ಮೊದಲೇ ಇಲ್ಲ ನನ್ನ ಭೂಮಿಯಲ್ಲಿ ಭಾಗವನ್ನು ಕೊಡಲಾರೆ ಇದಕ್ಕಾಗಿ ಹೊಗಳಿಕೆ ಏತಕ್ಕೆ? ನನ್ನ ಭೂಮಿಯಲ್ಲಿ ಅವರಿಗೆ ಮುಳ್ಳುಮೊನೆ ಯಷ್ಟನ್ನು ಕೊಟ್ಟಿದ್ದೇ ಆದರೆ ಆಗ ನೀನು ನಗು, ಹೋಗು ಯುದ್ಧ ಮಾಡಲು ಅವರನ್ನು ಕರೆದುಕೊಂಡು ಬಾ ದನಕಾಯುವುದು ತೀರಿತೇ? ವನವನಗಳಲ್ಲಿ ಅಲೆಯುವುದು ಮುಗಿಯಿತೇ? ಮುನಿಗಳ ನಮಸ್ಕಾರ ವನ್ನೂ, ಪಾಲ್ಗಡಲಿನಲ್ಲಿ ಶೇಷಶಾಯಿಯಾಗಿರುವುದನ್ನು ಬಿಟ್ಟು ಈಗ ನೀನು ನಮ್ಮ ವೈಷಮ್ಯವನ್ನು ತಿದ್ದುವುದಕ್ಕಾಗಿ ಬಂದಿರುತ್ತೀಯೆ" ಎಂದನು

ಆಗ ವಿದುರನು, "ಕೊನೆಯಲ್ಲಿ ಧೃತರಾಷ್ಟ್ರನು ಪತ್ನಿಯೊಡನೆ ಅನಾಥನಾಗಿ ಕೆಡುತ್ತಾನೆನ್ನುವುದು ನನಗೆ ತಿಳಿದಿದೆ ಆ ಪಾಂಡವರ ರಾಜ್ಯದಲ್ಲಿ ಪಡಿಗಾಗಿ ಭೀಮನ ಸಮಯವನ್ನು ಕಾಯದಿರಬೇಕಾದರೆ, ನೀನು ಕೃಷ್ಣನು ತಿಳಿಸಿದಂತೆ ನಡೆಯಲೇಬೇಕಾಗುತ್ತದೆ" ಎಂದನು

ವಿದುರ ಭೀಷ್ಮ ಧೃತರಾಷ್ಟ್ರಾದಿಗಳು ದುರ್ಯೋಧನನನ್ನು ಒತ್ತಾಯ ಮಾಡಲು ಮನಸ್ಸುಮಾಡಿದ ಸಂಕೇತದ ಸುಳಿವನ್ನು ದುಶ್ಶಾಸನನು ತಿಳಿದು ದುರ್ಯೋಧನನಿಗೆ ಆ ಸುದ್ದಿಯನ್ನು ತಿಳಿಸಿ ದುಃಖಿಸಿ "ಅಣ್ಣ! ಹೆತ್ತವರೂ ಮರಳಾಗಬಹುದೇ? ನಾವು ಎಲ್ಲಿಗೆ ಹೋಗುವುದು? ರಾಜ ಕಾರ್ಯದ ಸ್ಥಿತಿ ಬಲಗುಂದಿದೆ ಮುತ್ತಯ್ಯ, ಕಿರಿಯಯ್ಯ, ಅಯ್ಯ ಇವರ ಮನಸ್ಸು ವಕ್ರವಾಗಿದೆ ಸಾಕು ಸುಮ್ಮನಿರು" ಎಂದು ಅಣ್ಣನೊಡನೆ ಸಭೆಯಿಂದ ಹೊರಟನು

ಕೋಪಗೊಂಡು ಹೊರಟ ದುರ್ಯೋಧನದುಶ್ಶಾಸನರು ಪಕ್ಕದ ಅರಮನೆಯಲ್ಲಿ ಸೌಬಲ ಕರ್ಣರೊಡನೆ ಮುಂದೆ ಮಾಡಬೇಕಾದ ಕಾರ್ಯ ವನ್ನು ಆಲೋಚಿಸಿದರು ಬಳಿಕ ದುರ್ಯೋಧನನು, "ಕೃಷ್ಣನು ದುರ್ಮಂತ್ರ ದಿಂದ ತಂದೆಗೆ ಕೋಪಬರುವಂತೆ ಮಾಡಿರುತ್ತಾನೆ ಕಲಿಗಳು ಆತನನ್ನು ಕಟ್ಟಲಿ ಎರಡು ಪಕ್ಷದ ಬಲವನ್ನೂ ಮುಸೆದು ಕೊಲ್ಲಿಸುವ ಕೆಲಸ ಆತನದು ಯೋಚಿಸಿ ನೋಡಿದರೆ ಕೃಷ್ಣನೇ ನಮಗೆ ಶತ್ರುವಲ್ಲದೆ ಪಾಂಡವರೇ? ಆತನನ್ನು ಹುರಿನೇಣುಗಳಿಂದ ಕಟ್ಟಿದರೆ ಅವರು ಕೋಪಿಸಿ ಏನುತಾನೆ ಮಾಡಬಲ್ಲರು?" ಎಂದನು

"ಗಾಳಿಯು ಶಾಂತವಾದರೆ ಬೆಂಕಿಜ್ವಾಲೆಯು ತಾನೇ ಅಡಗುತ್ತದೆ. ಕೃಷ್ಣನ ತೋಳನ್ನು ಬಿಗಿದರೆ ಬಳಿಕ ಪಾಂಡವರು ಹೆದರುತ್ತಾರೆ ಹಗ್ಗ

ಗಳನ್ನು ಸಿದ್ಧಪಡಿಸಿ" ಎಂದು ದುರ್ಯೋಧನನ ಕೂಡ ಇದ್ದವರು ಹೇಳು ತ್ತಿದ್ದುದನ್ನು ಸಾತ್ಯಕಿಯು ಕೇಳಿ ಅದನ್ನು ಕೃತವರ್ಮನಿಗೂ ತಿಳಿಸಿ ದನು ಬಳಿಕ ಆತನು ಆಳು ಕುದುರೆಯನ್ನು ಬಾಗಿಲಿಗೆ ಬರಹೇಳಿ "ವೀರಭಟರು ಸಾಯುಧರಾಗಿ ಹತ್ತಿರ ನಿಲ್ಲಲಿ ಕೈಬೀಸಿದರೆ ಮೇಲೆ ಬಿದ್ದು ಗಂಡಿನ ಮೇಲೆ ಗಂಡನ್ನು ಕಡಿದು ಕೌರವನ ನೊರೆನೆತ್ತರಿನಲ್ಲಿ ಭೂಮಿಯನ್ನು ನಾದಲಿ" ಎಂದು ಭಟರಿಗೆ ತಿಳಿಸಿ, ಕೃಷ್ಣನ ಕಿವಿಯಲ್ಲಿ ಈ ಸುದ್ದಿಯನ್ನು ಹೇಳಿದನು

ಇದನ್ನು ತಿಳಿದ ಭೀಷ್ಮನು "ದೇವ ! ಮಂದಮತಿಗಳು ದಾರಿತಪ್ಪಿ ದ್ದಾರೆ ಮನಗುಂದಬೇಡ" ಎಂದು ಕೃಷ್ಣನಿಗೆ ತಿಳಿಸಿದನು ಅದಕ್ಕೆ ಕೃಷ್ಣನು ನಗುತ್ತ "ಭೀಷ್ಮ ! ಸತ್ಪುರಷರ ಮನಸ್ಸು ಪರಿಣತಪ್ರೌಢಿಗಳಿಗೆ ಕರಗುತ್ತದೆ ಮೂಢರ ಮನಸ್ಸಾದರೋ ನಿಷ್ಠುರತೆಗಲ್ಲದೆ ಬಗ್ಗುವುದಿಲ್ಲ. ಚಂದ್ರಕಾಂತಶಿಲೆಯು ಚಂದ್ರನ ಕಿರಣತಾಗಲು ಕರಗುತ್ತದೆ ಗಿರಿಗಳಾ ದರೋ ವಜ್ರಹತಿಗಲ್ಲದೆ ಅಳುಕುವುದಿಲ್ಲ ದೊರೆಗಳಿಗೆ, ದೂತರನ್ನು ಕಟ್ಟು ವುದು ಯಾವ ನ್ಯಾಯ ? ನನ್ನನ್ನು ಕಟ್ಟಲು ನಿನ್ನ ಮೊಮ್ಮಕ್ಕಳು ಕಾತರಿಸು ತ್ತಿದ್ದಾರೆ ಅವರನ್ನು ನೀನು ಕರೆಸಿ ಮಾತಾಡಿಸಿ ನೋಡು ನನಗೇನೂ ಹದರಿಕೆಯಿಲ್ಲ" ಎಂದು ಹೇಳಲು, ಭೀಷ್ಮನು ಧೃತರಾಷ್ಟ್ರನಿಗೆ ಕೌರವನ ಸ್ಥಿತಿಯನ್ನು ತಿಳಿಸಿದನು

ಧೃತರಾಷ್ಟ್ರನು ಅದನ್ನು ಕೇಳಿ ಕೋಪಿಸಿ "ಶಿವ ಶಿವ, ವಿದುರ ! ಕೌರವನನ್ನು ಕೂಗು ಆತನು ಮಗನೇ? ಭರತವಂಶಕ್ಕೆ ಮೃತ್ಯುವಲ್ಲವೇ? ಗಾಂಧಾರಿಯನ್ನು ಬರಹೇಳು ಮಗನಾಟವನ್ನು ನೋಡಲಿ" ಎಂದನು

ರಾಜನ ಅಪ್ಪಣೆಯಂತೆ ದುರ್ಯೋಧನನ್ನು ಸಭೆಗೆ ಕರೆತಂದರು ಗಾಂಧಾರಿಗೆ ಈ ಸುದ್ದಿಯನ್ನು ತಿಳಿಸಲು ಆಕೆಯೂ ಕೂಡಲೇ ಬಂದು, ಮಗನನ್ನು ನೋಡಿ ಕೋಪಿಸಿ "ಮಗನೇ ! ಕೃಷ್ಣನನ್ನು ಕಟ್ಟುವೆಯಲ್ಲವೇ? ನಿನ್ನನ್ನು ಹೆತ್ತ ನನಗೆ ಸಂತೋಷವನ್ನುಂಟುಮಾಡಿದೆ" ಎಂದು ಹೇಳಿ ಧೃತರಾಷ್ಟ್ರನನ್ನು ಕುರಿತು "ರಾಜನೇ ! ಇದು ನೀನು ನೆಟ್ಟ ನೆಲೆ, ನೀನಿಟ್ಟ ಕಿಚ್ಚು ಈ ಬಾಳುಗೆಟ್ಟವನನ್ನು ಹುಟ್ಟಿದಾಗಲೇ ಬಿಸುಡಹೇಳಬಾರದೇ? ಇವನು ಕೃಷ್ಣನನ್ನು ಕಟ್ಟುವನಲ್ಲವೇ ? ಗಗನದ ಮೈ ಮುಟ್ಟುತ್ತಾನಲ್ಲವೇ ? ಇವನ ದಿಟ್ಟತನವನ್ನು ನಾನು ಏನು ಹೇಳಲಿ" ಎಂದಳು

ಬಳಿಕ ಧೃತರಾಷ್ಟ್ರನು "ಮರುಳುಮಗನೇ ! ಕೃಷ್ಣನನ್ನು ನೀನು ಕೆರಳಿಸಬಹುದೇ ? ಯಾದವರು ನಮಗೆ ಅನ್ಯರೇ ? ವಸುದೇವ ನಮ್ಮಲ್ಲಿ ಭೇದವೇ ? ಈ ಹುಡುಗುತನ ಬೇಡ ದುಷ್ಟರ ಸಹವಾಸದಲ್ಲಿದ್ದರೆ ನಿನಗೆ ನರಕ ತಪ್ಪದು" ಎಂದು ದುರ್ಯೋಧನನಿಗೆ ಹೇಳಿದನು.

ಆಗ ವಿದುರನು ಕೋಪದಿಂದ "ಎಲೆ ಮರುಳು ಧೃತರಾಷ್ಟ್ರ ! ನಿನ್ನ ಮಗನನ್ನು ಬೇಡಿಕೊಳ್ಳಲೇಕೆ ? ಕೋಪದಿಂದ ನಾಯಿ ಬಗುಳಿದರೆ ಚಂದ್ರನ್ನು

ಅಳುಕುತ್ತಾನೆಯೇ ? ನರಿಯ ಕೂಗಿಗೆ ಸಿಂಹವು ಕಳವಳಿಸುತ್ತದೆಯೇ ? ನೊರಜು ಹೊಕ್ಕರೆ ಸಾಗರದ ನೀರು ಕದಡುತ್ತದೆಯೇ ? ನೊಣಗಳು ಮೇಲೆ ಬಿದ್ದರೆ ಕುಲಪರ್ವತಗಳು ಅಲ್ಲಾಡುತ್ತವೆಯೇ ? ಕೊಬ್ಬಿದ ನೀರು ಹಾವಿನ ಮರಿಗೆ ಗರುಡನು ಹೆದರಿ ಹಿಂಜರಿಯುತ್ತಾನೆಯೇ ? ನಿನ್ನ ಮಕ್ಕಳ ದುಷ್ಟತ್ವಕ್ಕೆ ಮುರರಿಪು ಹೆದರುತ್ತಾನೆಯೇ ? ಈತನು ಸಾಮಾನ್ಯ ನಲ್ಲ ಪರಬ್ರಹ್ಮಸ್ವರೂಪನು ಸೃಷ್ಟಿಕರ್ತನಾದ ಬ್ರಹ್ಮನೂ ಈತನ ಹೊಕ್ಕುಳಿನಿಂದ ಹುಟ್ಟಿಬಂದವನು ಈತನ ವಚನವೇ ಪರಮತತ್ತ್ವ ಇವನೇ ಲೀಲೆಯಿಂದ ಜಗತ್ತನ್ನು ಸೃಷ್ಟಿಸುವವನು ಜಗತ್ಸೃಷ್ಟಿಕರ್ತೃವಾದರೂ ತಾನು ಸಂಗಿಯಲ್ಲ, ಜಗತ್ಸಂಹಾರಕನಾದರೂ ನಿಷ್ಕರುಣಿಯಲ್ಲ ಎಲ್ಲರನ್ನು ಸಂರಕ್ಷಿಸಿದರೂ ಈತನು ನಿರ್ಲಿಪ್ತನು ಚರಾಚರಗಳಿಗೆ ಈತನೇ ಚೈತ ನ್ಯಾಂಗನು ಘನಕ್ಕೆ ಘನನೂ, ಅಣೋರಣೀಯನೂ, ಪರಾತ್ಪರನೂ, ಸೂರ್ಯ ಚಂದ್ರ ವಾಯು ಅಗ್ನಿಗಳಿಗೆ ಜೀವನೂ ಈತನೇ ತ್ರಿಮೂರ್ತಿ ಗಳು ಹುಟ್ಟಿದುದು ಈತನ ಲೀಲೆಯಿಂದಲೇ ಮಧುಕೈಟಭರನ್ನು ಕೊಂದ ವನೂ, ಸಮುದ್ರದಲ್ಲಿಳಿದು ವೇದಗಳನ್ನು ತಂದವನೂ, ಜಯ ವಿಜಯ ಪೌಂಡ್ರಕ ಹಂಸ ಡಿಬಿಕರನ್ನು ಸಂಹರಿಸಿದವನೂ, ಶ್ರುತಿಗಳಿಗೆ ಅಗೋಚ ರನೂ, ಬ್ರಹ್ಮಾಂಡವನ್ನೇ ಉದರದಲ್ಲಿ ಧರಿಸಿರುವವನೂ ಈತನೇ ನೀಚ ರಾದ ಈ ಕರ್ಣಾದಿ ದುಷ್ಟಮಂತ್ರಿಗಳಿಗೂ, ಮುನಿಗಳಿಗೂ ಅಗೋಚರನಾದ ಈತನನ್ನು ಕಟ್ಟಲು ಸಾಧ್ಯವೇ ?" ಎಂದು ಭಗವಂತನ ಲೀಲೆಯನ್ನು ಧೃತ ರಾಷ್ಟ್ರನಿಗೆ ಹೇಳುತ್ತಿರುವಾಗಲೇ ಕೃಷ್ಣನು ಮೈಮುರಿಯಲು, ಮಿಂಚಿನ ಗುಂಪುಗಳು ಒಟ್ಟಿಗೆ ಸೇರಿದಂತೆ ನೂರುಸೂರ್ಯರ ಕಾಂತಿ ಆತನ ದೇಹದಿಂದ ಪ್ರವಾಹದಂತೆ ಹೊರಟು, ಸಭೆಯನ್ನು ವ್ಯಾಪಿಸಿತು ಕೂಡಲೇ ಹರಿಯು ಆ ಮಹಾಸಭೆಗೆ ವಿಶ್ವರೂಪವನ್ನು ತೋರಿಸಿದನು ಹರಿಯ ಚರಣದ ಅಂಗುಷ್ಠದಲ್ಲಿ ದೇವತೆಗಳು, ಹಣೆಯಲ್ಲಿ ಬ್ರಹ್ಮ, ಎದೆಯಲ್ಲಿ ರುದ್ರ, ಮುಖದಲ್ಲಿ ಅಗ್ನಿವಾಯುಗಳು, ಬೆರಳಲ್ಲಿ ಇಂದ್ರಾದಿಗಳು, ಕಣ್ಣಿನಲ್ಲಿ ಸೂರ್ಯ, ನಾಭಿಯಲ್ಲಿ ನಭ, ಭುಜಾಗ್ರದಲ್ಲಿ ದಿಕ್ಪಾಲಕರು, ರೋಮರೋಮ ಗಳಲ್ಲಿ ಸುರರು, ಖಚರರು, ಕಿನ್ನರರು, ಕಿಂಪುರುಷರು, ಸಿದ್ಧರು, ವಿದ್ಯಾಧ ರರು ವಸುಗಳು, ಮನುಗಳು, ಆದಿತ್ಯರು, ಭುಜಂಗಮರು, ಗರುಡರು, ಗಂಧರ್ವರು, ಅಶ್ವಿನೀದೇವತೆಗಳು, ಎಲ್ಲ ಅಪ್ಸರೆಯರೂ ಪ್ರಕಾಶಿಸಿದರು ಬಲಭುಜದಲ್ಲಿ ಅರ್ಜುನ, ಎಡಭುಜದಲ್ಲಿ ಬಲರಾಮ, ಚರಣದಲ್ಲಿ ಧರ್ಮ ರಾಜ ಭೀಮ ನಕುಲ ಸಹದೇವ ಮತ್ತು ಯಾದವರು ಕಾಣಿಸಿಕೊಂಡರು ಎಲ್ಲರನ್ನೂ ಒಳಗೊಂಡು ವಿಶ್ವರೂಪವಿಹಾರಿಯಾದ ಮುರವೈರಿಯು ಪ್ರಜ್ವ ಲಿಸುತ್ತಿದ್ದನು

ಎಲ್ಲರ ಕಿವಿ ಕಣ್ಣು ಮೂಗುಗಳ ರಂಧ್ರಗಳಲ್ಲಿ ಹೊಗೆ ಕವಿದು ಬೆಂಕಿ ಜ್ವಾಲೆ ಆಕಾಶವನ್ನು ತಿವಿಯಿತು ದಶದಿಕ್ಕುಗಳಲ್ಲೂ ಕಾಂತಿ ಕವಿಯಿತು

ಕೃಷ್ಣನು ವಿಶ್ವರೂಪವನ್ನು ಧರಿಸಿ ಪ್ರಕಾಶಿಸುತ್ತಿರಲು ಪುಷ್ಪವೃಷ್ಟಿಯಾಯಿತು. ಆಕಾಶದಲ್ಲಿ ದುಂದುಭಿಧ್ವನಿ ಮೊಳಗಿತು ಸಂತೋಷದಿಂದ ಭೂಮಿಯೂ ಬಿರಿಯಿತು ಸಮುದ್ರವು ಎಲ್ಲಕಡೆಗಳಲ್ಲೂ ಉಕ್ಕಿತು ದಿಗ್ಗಜಕೂರ್ಮ ಗಳಿಗ ಕೇವಲ ಹೆಮ್ಮೆ ಮಾತ್ರ ಉಳಿಯಿತು ಕೌರವನನ್ನು ಬಿಟ್ಟು ಉಳಿದ ವರೆಲ್ಲರೂ ವಿಶ್ವರೂಪವನ್ನು ಕಂಡರು

ಮುನಿಗಳು, ಭೀಷ್ಮ, ಕೃಪ, ವಿದುರ, ದ್ರೋಣ, ಸಂಜಯ ಮೊದ ಲಾದವರು ಪುಳಕಿತರಾಗಿ ಹರ್ಷಾಬ್ಧಿಯಲ್ಲಿ ಮುಳುಗಿ, ಭಕ್ತಿಯ ಭಾರದಲ್ಲಿ ಕುಸಿದು, ಹೆದರಿ ಮೇಲಕ್ಕೆದ್ದು ಹರಿಯ ಚರಣಗಳಿಗೆ ನಮಸ್ಕರಿಸಿದರು

ಕೃಷ್ಣನು ಹೊರಗೂ ಒಳಗೂ ಪ್ರಕಾಶಿಸಿ ತಾನಲ್ಲದೆ ಮತ್ತಾರೂ ಕಾಣದಂತೆ ಹೊಳೆದನು ಅನೇಕಕೃಷ್ಣರು ಕಾಣಲು ಆ ಖಳರು "ಒಳಗಿರುವ ಕೃಷ್ಣನನ್ನುಬಿಗಿಯುವುದೋ ? ಹೊರಗಿರುವವನನ್ನು ಹಿಡಿಯು ವುದೋ ? ಕೃಷ್ಣರು ಬಹಳಮಂದಿ ಇದ್ದಾರೆ ಯಾರನ್ನು ಕಟ್ಟುವುದು ?" ಎಂದು ಭ್ರಾಂತಿಗೊಂಡರು

"ಮುಳ್ಳಿನ ಮೊನೆಯಷ್ಟು ಅವಕಾಶವಿಲ್ಲದಂತೆ ವ್ಯಾಪಿಸಿರುವ ಸಚ್ಚಿ ನ್ಮಾತ್ರರೂಪನಾದ ಈ ಮಹಾಮಹಿಮನನ್ನು ಹೇಗೆತಾನೆ ಕಟ್ಟುವುದು ?" ಎಂದು ಕರ್ಣಾದಿಗಳೂ ಚಕಿತರಾದರು ಕೃಷ್ಣನು ಕುರುಡುದೊರೆಗೆ ಕಣ್ಣನ್ನು ಕರುಣಿಸಿದನು ಆತನೂ ಶ್ರೀಕೃಷ್ಣನ ಈ ಮಂಗಳ ಶ್ರೀಮೂರ್ತಿ ಯನ್ನು ಮನದಣಿಯುವಷ್ಟು ನೋಡಿ "ದೇವ! ಕಣ್ಣುಗಳು ಹೋಗಲಿ, ಈ ನಿಮ್ಮ ಅಂಗಸೌಷ್ಠವವನ್ನು ನೋಡಿದ ಬಳಿಕ ಮತ್ತಾವುದನ್ನೂ ನೋಡ ದಂತೆ ಕೃಪೆಮಾಡಿ" ಎಂದು ಪ್ರಾರ್ಥಿಸಿದನು

ಗಾಂಧಾರಿಯು, "ನೀನು ಅಮೇಯ ಕರುಣಾಸಾಗರನು ಅನು ಪಮಚರಿತ್ರನಾದ ನಿನ್ನ ಚರಣಾರವಿಂದಗಳ ದರ್ಶನದಿಂದ ಪಾಪರಾಶಿ ಗಳು ತೊಲಗಿದುವು ಸಮದೃಷ್ಟಿಯಿಂದ ನೀನು ನೋಡು ಶರಣರ ಮಮತೆ ಬೇಕು ಜೀಯ, ಲಕ್ಷ್ಮೀರಮಣ! ಕೃಪೆಮಾಡು" ಎಂದು ನಮಸ್ಕರಿಸಿದಳು

ಕೃಷ್ಣನ ಈ ವಿಶ್ವರೂಪವನ್ನು ಕಂಡ ಭಾನುಮತಿಯೂ "ದೇವ ! ಭಕ್ತರ ಮಾನಾಪಮಾನಗಳು ನಿನ್ನದು ಶರಣರ ಹಾನಿವೃದ್ಧಿಗಳೆಲ್ಲ ನಿನ್ನದು ನಿನ್ನನ್ನು ಬಿಟ್ಟರೆ ಬೇರಾರುಗತಿ? ನಿನ್ನ ಶರಣರ ತೇಜೋಭಿ ಮಾನವನ್ನು ನೀನು ಒಲಿದು ಸಲಹು" ಎಂದು ಭಯದಿಂದ ಕೃಷ್ಣನ ಚರಣ ಗಳಿಗೆ ನಮಸ್ಕರಿಸಿದಳು

ಇದನ್ನು ಕಂಡ ದುರ್ಯೋಧನನು "ತಂದೆಯೇ! ಹೆದರಬೇಡ ಕೃಷ್ಣನ ಈ ವಂಚನೆಗೆ ಬೆಚ್ಚಬೇಡ ಈ ಸಂಧಾನದ ಮಾತು ಈತನಿಗೆ ಅಭಿಮತವೇ ? ಕೇಳು ಜೀವಸಾಮಾನ್ಯದಲ್ಲೂ ಈತನು ಅಂತರ್ಯಾಮಿ ಈ ಜಗತ್ತೇ ಈತನಾಜ್ಞೆಗೆ ತಲೆಬಾಗುತ್ತದೆ ನನ್ನ ಹೃದಯದಲ್ಲಿದ್ದು ವಂಚನೆಯಿಂದ ಸಂಧಿಯನ್ನು ಮುರಿಯುವವನೂ ಈತನೇ ಶತ್ರುಗಳು ಮತ್ತು

ನಿಮ್ಮ ಹೃದಯದಲ್ಲಿದ್ದು ಸಂಧಿಯ ಮಾತನ್ನು ಆಡಿಸುವವನೂ ಈತನೇ ಭಿನ್ನ ನಂತೆ ಕಂಡು ಭಿನ್ನಾಭಿನ್ನನಂತೆ ಈತ ಮೆರೆಯುತ್ತಾನೆ ತಿಳಿದು ನೋಡಿದರೆ ಈ ಮುರವೈರಿ ಅಭಿನ್ನನೇ ಇದಕ್ಕಾಗಿ ನಾವು ಏತಕ್ಕೆ ಹೆದರುವುದು ? ಸೂತ್ರವನ್ನಾಡಿಸಿದರ ಬೊಂಬೆಗಳು ಬಡಿದಾಡುತ್ತವೆ ಸೂತ್ರಧರನಿರು ವಾಗ ಪುಣ್ಯಪಾಪಗಳು ಆ ಬೊಂಬೆಗಳಿಗುಂಟೇ? ಕೊಲ್ಲುವುದು, ಮತ್ತೊಬ್ಬ ರಿಂದ ಕೊಲ್ಲಿಸುವುದು ಈ ಸ್ವಾತಂತ್ರ್ಯವು ಕಮಲಾಕ್ಷನಿಗಲ್ಲದೆ, ಉಳಿದ ಜೀವಸಮುದಾಯಕ್ಕೆ ಇಲ್ಲ ನಾವೂ ಸಂಧಿಯನ್ನೇ ಇಚ್ಛಿಸುತ್ತೇವೆ ಈನಮ್ಮ ಅಭಿಪ್ರಾಯದಲ್ಲಿ ಹುಳುಕಿಲ್ಲ ಆದರೆ ಸಂಧಿ ಕೃಷ್ಣನಿಗೆ ಅಭಿಮತವಲ್ಲ ಆತನ ಮನಸ್ಸನ್ನು ನಾನು ಬಲ್ಲೆ ನೀವು ಆತನ ಮೇಲಿನ ಅಭಿಪ್ರಾಯವನ್ನು ಮಾತ್ರ ತಿಳಿದಿದ್ದೀರಿ ಈ ರಾವಣಾಂತಕನ ಮನಸ್ಸು ನಿಮಗೆ ತಿಳಿದಿಲ್ಲ ನಾನು ಈತನ ಕೈಯಿಂದಲೇ ಸಾಯುತ್ತೇನೆ ಹೆದರ ಬೇಡಿ ಭೂಭಾರವನ್ನು ಕಳೆಯುವುದಕ್ಕಾಗಿಯೇ ಈತನ ಅವತರಿಸಿದ್ದಾನೆ ನಮ್ಮನಮ್ಮಲ್ಲಿ ವೈರವನ್ನು ಬಿತ್ತಿ ಮಹಾಬಲವನ್ನು ಬರಿದುಮಾಡುತ್ತಾನೆ ಈತನ ಛಲಕ್ಕೆ ಬಗ್ಗದೆ ರಾವಣಾದಿಗಳು ನಾಶವಾದರು ಇದಲ್ಲವೇ ಕೀರ್ತಿ ಈ ಶರೀರವು ಮಾತ್ರ ನಾಶವಾಗುತ್ತದೆ ಅತಿಶಯವಾದ ಕೀರ್ತಿ ಉಳಿಯುತ್ತದೆ ಹೆದರಿಕೆ ಏತಕ್ಕೆ ? ನಾನು ಈತನಿಗೆ ತಲೆಬಾಗುವುದಿಲ್ಲ ಈ ಭೂಮಿಗೆ ಆಸೆಪಡುವುದೂ ಇಲ್ಲ ನಾನು ಹೆದರುವುದೂ ಇಲ್ಲ ರಣ ಮಹೋತ್ಸವವೇ ನನ್ನ ಮತ ಕೈದಣಿಯುವಷ್ಟು ಹೊಡೆದಾಡುತ್ತೇನೆ ಕೃಷ್ಣನನ್ನು ಕೆಣಕದೆ ಜಾಗ್ರತೆ ಮುಕ್ತಿಯು ದೊರೆಯುವುದಿಲ್ಲ'' ಎಂದು ಹೇಳಿದನು

ಇದನ್ನು ಕೇಳಿದ ಕೃಷ್ಣನು ಒಳಗೊಳಗೇ ನಕ್ಕು ಮೊದಲಿನಂತೆ ಮನುಷ್ಯನ ಆಕಾರವನ್ನು ಪಡೆದು ''ಕೌರವಪಾಂಡವರಿಬ್ಬರೂ ನನಗೆ ಸಮಾ ನರು ನನಗೇಕೆ ಈ ಚಿಂತೆ ?'' ಎಂದು ಧೃತರಾಷ್ಟ್ರಭೀಷ್ಮರಿಗೆ ಹೇಳಿ ದನು ಬಳಿಕ ಕೃಷ್ಣನು ಅರಮನೆಯಿಂದ ಹೊರಟು ವಿದುರನ ಮನೆಗೆ ಬಂದು ಕುಂತಿಯನ್ನು ಕರೆದು ''ಕುಂತಿ ! ನಿನ್ನ ಮಕ್ಕಳ್ಮೈವರಮೇಲ ಕೌರವನ ಕೋಪ ಬಲವಾಗಿದೆ ಈ ದಿನ ಸಂಧಾನ ಮುರಿಯಿತು ನಿನ್ನ ಮಗನಾದ ಕರ್ಣನನ್ನು ಬೇಡಿಕೋ'' ಎಂದು ಆಕೆಗೆ ಸೂಚಿಸಿ ಆತನು ಹಿಂತಿರುಗಿದನು ಆಗ ವಿದುರ, ಭಾರದ್ವಾಜ, ಗೌತಮ, ಭೀಷ್ಮ, ಧೃತ ರಾಷ್ಟ್ರ, ಗಾಂಧಾರಿ, ಕರ್ಣ, ವಿಕರ್ಣ, ಶಲ್ಯ, ಸುಬಾಹು, ಅಶ್ವತ್ಥಾಮ ಮೊದಲಾದವರ ಉತ್ಸಾಹ ಅಡಗಿತು ಅವರೆಲ್ಲ ಕೃಷ್ಣನನ್ನೇ ಹಿಂಬಾಲಿಸಿ ಬಂದರು ಕೃಷ್ಣನು ಅವರಿಗೆ ''ದುರ್ಯೋಧನನು ಆಸೆಯನ್ನು ಬಿಟ್ಟು ಕುರುಕುಲಕ್ಕೆ ಹಿತವನ್ನು ಚಿಂತಿಸುವಂತೆ ನೀವು ನಯದಿಂದ ಏಕಾಂತದಲ್ಲಿ ಆತನಿಗೆ ಹೇಳಿ ಪಾಂಡವರೊಡನೆ ಸಂಧಿಯೋ ಸರಸ ಯುದ್ಧವು ಈ ವಂಶಕ್ಕೆ ತೀರ್ಮಾನ ಇದು ಖಂಡಿತ'' ಎಂದು ತಿಳಿಸಿ, ಎಲ್ಲರನ್ನೂ

ಬೀಳ್ಕೊಟ್ಟು ಸ್ವಲ್ಪ ನಿಂತುಕೊಂಡು, ಕರ್ಣನನ್ನು ರಥದ ಸಮೀಪಕ್ಕೆ ಕರೆದು "ಕರ್ಣ! ನನ್ನನ್ನು ಕಳುಹಿಸಿಕೊಡಲು ಸ್ವಲ್ಪದೂರ ನನ್ನೊಡನೆ ಬಾ" ಎಂದು ಆತನಿಗೆ ತಿಳಿಸಿ, ತಾಪಸರನ್ನೆಲ್ಲಾ ಕಳುಹಿಸಿದನು

## ೧೦ನೆಯ ಸಂಧಿ

ಒಲಿದವರನ್ನೇ ಕಾಪಾಡುವ ಇಷ್ಟ ಕೃಷ್ಣನಿಗೆ ಬಹಳ ಕೋಪಿಸಿದರೆ ತಲೆಬರಹವನ್ನೇ ಈತನು ತೊಡೆಯುತ್ತಾನಲ್ಲದೆ ಸ್ಥಿರಿಸುವುದಿಲ್ಲ ಕೃಷ್ಣನು ಭಜಕರಿಗೆ ಬೆಂಬಲನೆಂಬ ಬಿರುದನ್ನು ಪಡೆದಿರುತ್ತಾನೆ ಭೇದೋಪಾಯ ದಿಂದ ಇನ್ನು ಈ ಕುರುಕುಲವನ್ನು ಕೊಂದಂತೆಯೇ ಸರಿ

ಮೈದುನತನದ ಸರಸದಿಂದ ಕೃಷ್ಣನು ಕರ್ಣನನ್ನು ಸಮೀಪಕ್ಕೆಳೆದು ಪೀಠದಲ್ಲಿ ಕುಳ್ಳಿರಿಸಿದನು ಆಗ ಕರ್ಣನು ದೈನ್ಯದಿಂದ "ದೇವ! ನಿಮ್ಮೊಡನೆ ಕುಳಿತುಕೊಳ್ಳಲು ನಾನು ನಿಮಗೆ ಸಮಾನನೇ? ನಾನು ಹೆದರುತ್ತೇನೆ" ಎಂದು ಹೇಳಿದನು

ಇದನ್ನು ಕೇಳಿ ಕೃಷ್ಣನು ತೊಡೆಮುಟ್ಟುವಂತೆ ಆತನ ಪಕ್ಕಕ್ಕೆ ತಾನೇ ಸರಿದು 'ಕರ್ಣ! ನಿನ್ನಲ್ಲಿ, ಯಾದವರಲ್ಲಿ ಮತ್ತು ಕೌರವರಲ್ಲಿ ಭೇದವಿಲ್ಲ ನಿನ್ನಾಣೆಯಾಗಿಯೂ ಹೇಳುತ್ತೇನೆ ಕೇಳು ವಿಚಾರಮಾಡಿದರೆ ಎರಡು ವಂಶಗಳ ಮೂಲವೂ ಒಂದೇ, ಎರಡಲ್ಲ ನೀನೂ ರಾಜನೇ ನಿನಗೆ ಇದರ ಅರಿವಿಲ್ಲ" ಎಂದು ಕರ್ಣನ ಕಿವಿಯಲ್ಲಿ ಭಯವನ್ನು ಬಿತ್ತಿದನು

ಅದಕ್ಕೆ ಕರ್ಣನು "ದಾನವಾಂತಕನೇ! ಹೇಳು, ವಂಶವಿಹೀನನಾದ ನಾನು ನಿಮ್ಮಡಿಗಳಿಗೆ ಸಮಾನನೇ? ಸಾಕು," ಎಂದು ತಲೆಬಾಗಿ ಕೈಮುಗಿದನು

ಆಗ ಕೃಷ್ಣನು "ಮಾನನಿಧಿಯೇ! ನನ್ನಾಣೆ, ಬಾ ನೀನು ನಮ್ಮೆಲ್ಲರಿಗೂ ಸಮಾನನೇ ಭಾನುಕುಲತಿಲಕ! ನೀನು ಬಲರಾಮನಿಗೆ ಸಮನಾದವನು" ಎಂದು ಹೇಳಿ ಕರ್ಣನನ್ನು ಸಮೀಪಕ್ಕೆ ಎಳೆದು ಆತನ ಅಂಗೈ ಮೇಲೆ ತನ್ನ ಅಂಗೈ ಇಟ್ಟು ವೀಳಯವನ್ನು ಕೊಟ್ಟು "ಸೂರ್ಯಪುತ್ರನೇ! ನಿನ್ನ ಕುಲವನ್ನು ನೀನು ತಿಳಿಯಲಿಲ್ಲವಲ್ಲಾ? ದುಯೋರ್ಧನನ ಹತ್ತಿರ ಸೇವಕವೃತ್ತಿಯಲ್ಲಿರುವುದು ನಿನಗೆ ಯೋಗ್ಯವಲ್ಲ ಕುಂತಿಯು ದೂರ್ವಾಸರಿಂದ ತಾನು ವರವಾಗಿ ಪಡೆದ ಐದು ಮಂತ್ರಗಳಲ್ಲಿ ಮೊದಲನೆಯ ವರದಿಂದ ಹುಟ್ಟಿದವನು ನೀನು ನೀನಾದ ಮೇಲೆ ಯುಧಿಷ್ಠಿರ, ಮೂರನೆಯವನು ಭೀಮ, ಅರ್ಜುನನು ನಾಲ್ಕನೆಯವ, ಐದನೆಯ ಮಂತ್ರದಿಂದ ಮಾದ್ರಿಯಲ್ಲಿ ನಕುಲಸಹದೇವರಿಬ್ಬರೂ ಹುಟ್ಟಿದರು ಆದಕಾರಣ ನೀನೇ ಪಾಂಡವರೈವರಿಗೂ ಹಿರಿಯ ನೀನಿರುವಾಗ ಈ ರಾಜ್ಯಕ್ಕಾಗಿ ಯುದ್ಧವು ಎರಡು ಪಕ್ಷಗಳಿಗೂ ಅಪೇಕ್ಷಿತವಲ್ಲ ಕರ್ಣ! ನಿನ್ನ ಅಭ್ಯುದಯವನ್ನೇ ನಾನು ಬಯಸುತ್ತೇನೆ. ಪಾಂಡವರೈವರನ್ನೂ

ನಿನ್ನ ಚರಣಗಳಮೇಲೆ ಉರುಳಿಸುತ್ತೇನೆ ನಡೆ ನನ್ನೊಡನೆ ನಿನಗೆ ಹಸ್ತಿನಾವತಿಯ ಪಟ್ಟವನ್ನು ಕೊಡಿಸುತ್ತೇನೆ ಎರಡು ಪಕ್ಷದವರೂ ನಿನ್ನನ್ನೇ ಸೇವಿಸುತ್ತಾರೆ ಈ ಎರಡು ಸಂತತಿಯವರೂ ನಿನಗೆ ಕಿಂಕರರು ಎನ್ನಿಸುಕೊಳ್ಳುವುದನ್ನು ಬಿಟ್ಟು, ನೀನು ದುರ್ಯೋಧನನ ದಾಯ್ದುಂಬುಲಕ್ಕೆ ಕೈ ಒಡ್ಡುವುದೇ? ಎಡಗಡೆ ಕೌರವರು, ಬಲಗಡೆ ಪಾಂಡವರು, ಎದುರಿನಲ್ಲಿ ಮಾದ್ರ ಮಾಗಧ ಯಾದವಾದಿಗಳು ಇರಲು ನೀನು ಓಲಗ ಮಧ್ಯದಲ್ಲಿ ಕುಳಿತು ವಿಲಾಸದಿಂದಿರುವುದನ್ನು ಬಿಟ್ಟು, ಕೌರವನು ಮಾತಾಡಿಸಲು 'ಜೀಯ' 'ಹಸಾದ' ಎನ್ನುವುದು ಕಷ್ಟವಲ್ಲವೇ ನಿನಗೆ? ಶೌರ್ಯದಲ್ಲೋ ನಿನಗೆ ಎದುರೇ ಇಲ್ಲ, ಕುಲದಲ್ಲೋ ಸೂರ್ಯನ ಮಗ, ಒಡಹುಟ್ಟಿದವರೋ ವೀರ ಪಾಂಡವರು, ನಿನ್ನ ವೈಭವಕ್ಕೆ ಯಾರು ತಾನೇ ಸಮಾನರು? ಕರ್ಣ! ನಡೆ, ನಡೆ ನೀನು ರಾಜನಾಗಿರಲು ಬಳಿಕ ಕೌರವ ಪಾಂಡವರಿರ್ವರಿಗೂ ವೈರವಿಲ್ಲ'' ಎಂದು ಹೇಳಿದನು

ಇದನ್ನು ಕೇಳಿದ ಕರ್ಣನ ಕುತ್ತಿಗೆಯ ನರಗಳು ಹಿಗ್ಗಿದವು ಆತನಿಗೆ ಕಣ್ಣೀರು ಬಂದಿತು ಆಗ ಕರ್ಣನು ''ಅಕಟಾ! ದುರ್ಯೋಧನನಿಗೆ ಕೇಡಾಯಿತು'' ಎಂದು ಮನಸ್ಸಿನಲ್ಲೇ ವ್ಯಥೆಪಟ್ಟನು ''ಹರಿಯ ವೈರವು ಹೊಗೆಯಾಡದೆ ಉರಿಸದೆ ಸುಮ್ಮನೆ ಹೋಗುತ್ತದೆಯೇ? ಕೃಷ್ಣನು ನನ್ನ ವಂಶವನ್ನು ತಿಳಿಸಿ ನನ್ನನ್ನು ಕೊಂದನು ಹೆಚ್ಚುಮಾತಿನಿಂದ ಏನು ಪ್ರಯೋಜನ? ಯುದ್ಧ ಮಾಡಿ ಕೊಲ್ಲಲು ಪಾಂಡವರು ಸೋದರರು, ಕೊಲ್ಲದೆ ಉಳಿಸಿದರೆ ಕೌರವನಿಗೆ ಭೂಮಿಯಲ್ಲಿ ಸ್ಥಳವಿಲ್ಲ ಮಧುಸೂದನನು ಭೇದೋಪಾಯದಿಂದ ನನ್ನನ್ನು ಇರಿದನಲ್ಲಾ? ಅಕಟಾ!'' ಎಂದು ಕರ್ಣನು ಚಿಂತಾಸಾಗರದಲ್ಲಿ ಮುಳುಗಿ ಮೌನದಿಂದಿದ್ದನು

ಆಗ ಕೃಷ್ಣನು ಕರ್ಣನನ್ನು ನೋಡಿ ''ಏನು ಕರ್ಣ? ಚಿತ್ತಗ್ಲಾನಿ ಯಾವುದು? ಹೇಳು ಕುಂತೀಮಕ್ಕಳೊಡನೆ ಇರುವುದು ನಿನಗೆ ಸೇರುವುದಿಲ್ಲವೇ? ಕೊರತೆಯಿಲ್ಲ, ನನ್ನಾಣೆ ಹೇಳು ವ್ಯಥೆ ಏತಕ್ಕೆ? ಮರುಳುತನ ಬೇಡ ನಾನು ನಿನಗೆ ಅಪಯಶಸ್ಸನ್ನು ಬಯಸುವವನಲ್ಲ'' ಎಂದು ಹೇಳಿದನು

ಅದಕ್ಕೆ ಕರ್ಣನು ''ಮರುಳುಮಾಧವ! ಈ ರಾಜ್ಯಸಂಪತ್ತಿಗೆ ನಾನು ಮನಸೋಲುವವನಲ್ಲ ಪಾಂಡವರು ಮತ್ತು ಕೌರವರನ್ನು ಸೇರಿಸುವ ಮನಸ್ಸೂ ನನಗಿಲ್ಲ ನನ್ನನ್ನು ಕಾಪಾಡಿದ ಒಡೆಯನಿಗೆ ಶತ್ರುಗಳ ಶಿರಸ್ಸನ್ನು ಒಪ್ಪಿಸುತ್ತೇನೆಂಬ ಭರದಲ್ಲಿ ನಾನಿದ್ದೆ ಈಗ ನೀನು ಕೌರವೇಂದ್ರನನ್ನು ಕೊಂದೆ ಪಾಂಡವರು ನನಗೆ ಒಡಹುಟ್ಟಿದವರೆಂದು ತಿಳಿಸಿ 'ನನ್ನ ಬಾಣಕ್ಕೆ ಅವರ ಮಾಂಸವು ಬಲಿ' ಎನ್ನುವ ಹರವನ್ನು ಹೋಗಲಾಡಿಸಿದೆ ಇನ್ನು ಹೇಳಿ ಫಲವೇನು? ನಾನು ಕೌರವೇಶ್ವರನನ್ನೇ ಅನುಸರಿಸುತ್ತೇನೆ ನಿನ್ನೊಡನೆ ಬರುವುದಿಲ್ಲ ನೀನು ನಿನ್ನವರನ್ನು ಕಾಪಾಡಿ ಭೂಮಿಯಲ್ಲಿ

ನಿಲ್ಲಿಸು, ಹೆಚ್ಚು ಮಾತೇನು? ನಾನು ಬಾಳುವುದು ಯಾರಿಗೂ ಇಷ್ಟವಿಲ್ಲ ಕೌರವೇಶ್ವರನನ್ನು ಬಿಟ್ಟು ಈ ಲೋಕದಲ್ಲಿ ಮತ್ತಾರೂ ನನಗೆ ಆಪ್ತರಿಲ್ಲ ಆತನು ನನ್ನನ್ನು ಮನ್ನಿಸಿ ಕಾಪಾಡಿರುತ್ತಾನೆ ನನ್ನನ್ನು ಮರ್ಯಾದೆ ಯಿಂದ ಕಾಣುತ್ತಾನೆಯೇ ವಿನಾ ನನ್ನಲ್ಲಿ ಕೀಳುಭಾವನೆ ಆತನಿಗಿಲ್ಲ ಅವನು ನನ್ನನ್ನು ನೋಡಿ ಸತ್ಕರಿಸಿ, ಬಿರುದನ್ನು ಹೊಗಳಿಸಿ ದಣಿಯು ವುದೇ ಇಲ್ಲ ಆ ಮಾನನಿಧಿಯನ್ನು ಹೇಗೆ ತಾನೆ ಮರೆಯಬಲ್ಲೆ ? ಕೃಷ್ಣ! ನನ್ನನ್ನು ಪೀಡಿಸಬೇಡ ನೀನು ಕೋಪಿಸಬಾರದು, ನಾನು ಪಾಂಡವರ ಕಡೆಗೆ ಬಂದಿದ್ದೇ ಆದರೆ ರೂಢಿ ಮೆಚ್ಚುವುದಿಲ್ಲ ಕೃಷ್ಣ ! ಕೇಳು, ಯುದ್ಧವು ಒಂದು ಯಜ್ಞ ಇದಕ್ಕೆ ದೀಕ್ಷಿತ ನಾನು ಇದರಲ್ಲಿ ರಕ್ತವೇ ಆಜ್ಯ , ಕರುಳುಗಳೇ ಚರು, ಎಲಬುಗಳೇ ಸಮಿತ್ತುಗಳು, ಮಾಂಸವೇ ಆಹುತಿ, ಕಪಾಲಗಳೇ ಪಾತ್ರೆಗಳು, ಕೂದಲೇ ದರ್ಭೆ ಮುಂದಿನ ಭಾರತವು ಮಾರಿಗೆ ಔತಣವಾಗಿದೆ ಕೌರವನ ಋಣ ತೀರಿಸಲು ಯುದ್ಧದಲ್ಲಿ ಕೋಟಿ ಸುಭಟರನ್ನು ನಾಶಮಾಡುತ್ತೇನೆ ಒಡೆಯನ ಕಾರ್ಯಕ್ಕಾಗಿ ಈ ನನ್ನ ಶರೀರವನ್ನೇ ನೀಗುತ್ತೇನೆ ಆದರೆ ಸೂರ್ಯನಾಣೆಯಾಗಿಯೂ ನಾನು ಆ ಐವರು ವೀರರನ್ನು ಮಾತ್ರ ನೋಯಿಸುವುದಿಲ್ಲ'' ಎಂದನು

ಕೃಷ್ಣನು ಕರ್ಣನ ದೃಢವನ್ನು ಕಂಡು ಮನಸ್ಸಿನಲ್ಲಿ ಉತ್ಸಾಹ ಗೊಂಡನು ಬಳಿಕ ''ಕರ್ಣ ! ಈ ಐವರು ಸಹೋದರರ ಯೋಗಕ್ಷೇಮ ನಿನ್ನದೇ ಈ ಎಲ್ಲ ವಿಷಯಗಳನ್ನು ನಿನಗೆ ತಿಳಿಸದಿರುವುದು ನನಗೆ ಉಚಿತವಲ್ಲವೆಂದು ತಿಳಿದು ಎಲ್ಲವನ್ನೂ ತಿಳಿಸಿರುತ್ತೇನೆ ನೀನು ಸುಖಿಯಾಗು ಹೋಗು ನಮ್ಮ ಕಡೆಗೆ ನೀನು ಬಂದರೆ ಒಳ್ಳೆಯದು, ಬರ ದಿದ್ದರೆ ಕರ್ಣ! ಕೇಳು, ಸವಿಮಾತುಗಳಿಂದ ಮಂದಬುದ್ಧಿಯಾದ ದುರ್ಯೋ ಧನನಿಗೆ ಬುದ್ಧಿವಾದ ಹೇಳು, ತಮ್ಮಂದಿರಿಗೆ ರಾಜ್ಯಕೊಡಿಸಿ ಅವರನ್ನು ಸೇರಿಸು ಇದು ನ್ಯಾಯವಾಗಿದೆ ಕೌರವೇಶ್ವರನು ನಿನ್ನ ಮಾತನ್ನು ಅಲ್ಲಗಳೆಯುವುದಿಲ್ಲ'' ಎಂದು ಕೃಷ್ಣನು ಹೇಳಿದನು

ಅದಕ್ಕೆ ಕರ್ಣನು ''ಮುರವೈರಿ! ಎರಡು ಪಕ್ಷದವರಿಗೂ ಮಾತ್ಸರ್ಯ ಹೆಚ್ಚಿದೆ ಯುದ್ಧಸನ್ನಾಹ ನಡೆದಿದೆ ಈಗ ನಾನು ಹೇಳಿದರೆ ಕೌರವನಿಗೆ ಅದು ತಿಳಿಯುವುದಿಲ್ಲವೇ? ಅದರಿಂದ ಶೌರ್ಯಕ್ಕೆ ಕುಂದುಂಟಾಗುತ್ತದೆ ಸಂಧಿಯ ಮಾತು ನನಗೆ ತಿಳಿಯದು ದೇವ! ಈಗತಾನೆ ಸಂಧಾನ ಮುರಿದಿದೆ ನೀನಾದರೋ ಪಾಂಡವರ ಕಡೆಯವನು ಅಜ್ಞರಿಗೆ ಹುತ್ತಿನ ಬಳಿ ಬಿದ್ದಿರುವ ಹುಲ್ಲಿನ ಹಗ್ಗವೂ ಹಾವಿನಂತೆ ಭಾಸವಾಗುತ್ತದೆ ಚಾಡಿಯ ಮಾತೂ ಮನಗೊಳ್ಳುತ್ತದೆ ಆದಕಾರಣ ನನ್ನನ್ನು ಕಳುಹಿಸು'' ಎಂದು ಕೃಷ್ಣನ ಪಾದಗಳಿಗೆ ನಮಸ್ಕರಿಸಿ ತನ್ನ ಮನೆಗೆ ಬಂದನು

ಕೃಷ್ಣನ ಮಾತುಗಳು ಕರ್ಣನ ಮನಸ್ಸಿನಲ್ಲಿ ಬೇರೂರಿದುವು ಆತನು ''ಅಕಟಾ! ಕೃಷ್ಣನು ಹಾಳುಮಾಡಿದನು ಕೌರವನು ಬಾಳಲು ತಿಳಿ

ಯುದೆ ಕೆಟ್ಟ ಈ ಕೃಷ್ಣನು ಆತನನ್ನು ಕೊಲ್ಲದೇ ಬಿಡುವುದಿಲ್ಲ ಕೌರವೇಶ್ವರನಿಗೆ ಆಪ್ತರೇ ಇಲ್ಲ'' ಎಂದು ಮನಸ್ಸಿನಲ್ಲೇ ಯೋಚಿಸುತ್ತಾ ಆ ರಾತ್ರಿಯನ್ನು ಕಳೆದನು

ಬಳಿಕ ಕರ್ಣನು, ಒಂದು ಭಾನುವಾರದ ದಿವಸ ಗಂಗೆಯ ತೀರದಲ್ಲಿ ಸೂರ್ಯನಿಗೆ ಅರ್ಘ್ಯಕೊಟ್ಟು ಸೌರಮಂತ್ರವನ್ನು ಜಪಿಸುತ್ತಿರುವಾಗ ಆ ಔದಾರ್ಯದ ಕಲ್ಪವೃಕ್ಷವನ್ನು ಕಾಣಲು ಕುಂತಿಯು ಅಲ್ಲಿಗೆ ಬಂದಳು ತಾಯಿಯು ಬರಲು ಅವಳನ್ನು ಎದುರುಗೊಂಡು ಬಂದು ಕರ್ಣನು ಆಕೆಯ ಪಾದಗಳಿಗೆ ನಮಸ್ಕರಿಸಿದನು ಆಗ ಕುಂತಿಯು ಆತನನ್ನು ಮೇಲಕ್ಕೆತ್ತಿ ಸಮೀಪಕ್ಕೆ ಎಳೆದು ಅಪ್ಪಿಕೊಂಡಳು ಆಕೆಯ ಕಣ್ಣಿಂದ ನೀರು ಪ್ರವಾಹದಂತೆ ಹರಿಯಿತು , ಗಂಟಲಿನಲ್ಲಿ ಧ್ವನಿಯೇ ಹೊರಡದಂತಾಯಿತು. ಆಕೆಯು ಶೋಕಸಾಗರದಲ್ಲಿ ಮುಳುಗಿದಳು

ಅದೇ ಸಮಯದಲ್ಲಿ ಗಂಗೆಯು ಹೆಣ್ಣುವೇಷದಿಂದ ಅಲ್ಲಿಗೆ ಬಂದು "ಕುಂತೀ! ನಿನ್ನ ಮಗನನ್ನು ಸ್ವೀಕರಿಸು ನಾನು ಇಷ್ಟು ದಿನಗಳವರೆಗೂ ಈತನ ತೊಂದರೆಯನ್ನೆಲ್ಲ ನಿವಾರಿಸಿ ಕಾಪಾಡಿರುತ್ತೇನೆ ನನ್ನ ಭಾಷೆ ಇಂದಿಗೆ ಮುಗಿಯಿತು'' ಎಂದು ಹೇಳಿ ಕರ್ಣನನ್ನು ಕುಂತಿಗೆ ಒಪ್ಪಿಸಿದಳು

ಆಗಲೇ ಸೂರ್ಯನೂ ಬಂದು ಕರ್ಣನ ಕಿವಿಯಲ್ಲಿ ಏಕಾಂತವಾಗಿ ಎಲ್ಲ ವಿಚಾರಗಳನ್ನು ಹೇಳಿ "ಮಗನೇ! ಕುಂತಿಯು ನಿನಗೆ ತಾಯಿ ಕೃಷ್ಣನ ಹೇಳಿಕೆಯಂತೆ ನಿನ್ನನ್ನು ಬಾಣಬೇಡಲು ಆಕೆ ಬಂದಿರುತ್ತಾಳೆ ಹಿಂದೆ ಇಂದ್ರನಿಗೆ ಕವಚಕೊಟ್ಟಂತೆ ಈಗಲೂ ನೀನು ಮರುಳಾಗಬೇಡ'' ಎಂದು ತಿಳಿಸಿದನು ಇದನ್ನು ಕೇಳಿ ಕರ್ಣನು "ನಿಮ್ಮ ಅಪ್ಪಣೆಯಂತೆ ನಡೆಯುತ್ತೇನೆ'' ಎಂದು ಹೇಳಿ ಸೂರ್ಯನನ್ನು ಕಳುಹಿಸಿದನು ಬಳಿಕ ತಾಯಿಯನ್ನು ಭಯಭಕ್ತಿಗಳಿಂದ ಮನ್ನಿಸಿ "ತಾಯೆ! ನೀವು ಬಂದ ಕಾರ್ಯವೇನು? ತಿಳಿಸಿ'' ಎಂದು ಪ್ರಶ್ನಿಸಿದನು

ಇದನ್ನು ಕೇಳಿ ಕುಂತಿಯು, ಕರ್ಣನನ್ನು ಎಳೆದು ಅಪ್ಪಿಕೊಂಡು ಶೋಕದಿಂದ "ಮಗನೇ! ನಿನ್ನ ತಮ್ಮಂದಿರನ್ನು ಕಾಪಾಡು ಕೆಡುಕುತನವನ್ನು ಬಿಡು ನೀನು ಮತ್ತೊಬ್ಬರ ಸೇವೆಮಾಡಬಹುದೇ? ನಿನಗೆ ಕೌರವ ಪಾಂಡವರಿಬ್ಬರೂ ಸಹೋದರರಲ್ಲವೇ? ನಾನು ಹೇಳುವಂತೆ ನಡೆ ಚಾಡಿಕೋರರ ವೈರದ ಮಾತುಗಳನ್ನು ಕೇಳಬೇಡ ಪಟ್ಟಕಟ್ಟಿಸಿಕೊ'' ಎಂದಳು

ಆಗ ಕರ್ಣನು "ನೀನು ನನಗೆ ತಾಯಿ ಎನ್ನುವುದನ್ನು ನಾನು ಬಲ್ಲೆ ಕೃಷ್ಣನು ಹೇಳಿದಮೇಲೆ ಇದು ತಿಳಿಯಿತು ಎರಡುಗುಂಪಿನಲ್ಲೂ ಪಟ್ಟಕ್ಕೆ ನಾನೇ ಹಿರಿಯ, ಅದೂ ನಿಜ ಆದರೆ ಕೌರವನು ನನ್ನನ್ನೇ ನಂಬಿ ಕಾಪಾಡಿರುತ್ತಾನೆ. ಈಗ ನಾನು ಸಾಯಲು ಹೆದರುತ್ತೇನೆಯೇ? ಅಂಥ ಬಾಳಿಕೆ ಏತಕ್ಕೆ ? ಅದನ್ನು ಸುಡು ಕೃತಘ್ನನಿಗೆ ಸದ್ಗತಿ ಇಲ್ಲ ಐವರು

ಮಕ್ಕಳಿಗೂ ನಾನೇ ಹಿರಿಯವನು ಈ ಮಾತು ತಾಯಿಗೆ ಯೋಗ್ಯವಾದದ್ದೇ ಸರಿ ಇದರಲ್ಲಿ ಸಂಶಯವಿಲ್ಲ, ಆ ಮಾತಿರಲಿ. ಈ ರಾಜ್ಯಲಕ್ಷ್ಮಿಯು ನನ್ನನ್ನು ಕಾಪಾಡಿದ ದುರ್ಯೋಧನನ ಅರಸಿಯಾಗಿರುತ್ತಾಳೆ ನಾನು ವಾಸಿಸುತ್ತಿರುವುದೂ ಅಲ್ಲೇ ಹೀಗಿರುವಾಗ ನಾನು ಭೂಮಿಯನ್ನು ಬಯಸುವುದು ಯೋಗ್ಯವೇ? ಇದನ್ನು ಯಾರುತಾನೆ ಮೆಚ್ಚುತ್ತಾರೆ? ಜಯಲಕ್ಷ್ಮಿ ನನ್ನನ್ನು ನೋಡಿ ಅಸಹ್ಯಪಡುವುದಿಲ್ಲವೇ? ಹೇಳು ತಾಯಿ! ಈ ದಿನ ನೀವು ಹೇಳಿದ ಮೇಲೆ ನಾನು ಸೂರ್ಯನ ಮಗ ಎನ್ನುವುದು ತಿಳಿಯಿತು ಹಿಂದೆ ದುರ್ಯೋಧನನು ಏನನ್ನು ನೋಡಿ ನನ್ನನ್ನು ಕಾಪಾಡಿದ? ಇದುವರೆಗೂ ಅವನಿಂದ ಬದುಕಿ ಬಾಳಿ ಈಗ ನಾನು ಬಂದು ಪಾಂಡವರೊಡನೆ ಸೇರಿದರೆ ಲೋಕ ನಗುವುದಿಲ್ಲವೇ? ಆ ಮಾತಿರಲಿ ನೀವು ಬಂದ ಕಾರ್ಯವೇನು? ಹೇಳಿ ಸಾಕು" ಎಂದನು

ಆಗ ಕುಂತಿಯು "ಹಾಗಾದರೆ ಕಂದ! ಕೇಳು ಐವರು ಸಹೋದರರನ್ನೂ ಕಾಪಾಡು ಕೌರವನ ಸೇವೆಮಾಡುವ ಈ ದುರಾಗ್ರಹವು ನಿನಗೆ ಒಪ್ಪುವುದೇ ? ಒಂದುಸಾರಿ ಬಿಟ್ಟ ಬಾಣವನ್ನು ಮತ್ತೆ ತೊಡಬೇಡ ವೈರವನ್ನು ಬಿಡು" ಎಂದು ಹೇಳಲು ಕರ್ಣನು ಅದಕ್ಕೆ ಒಪ್ಪಿ ಅಲ್ಲಿಂದ ಹೊರಟು ಅರಮನೆಗೆ ಬಂದನು

## ೧೧ನೆಯ ಸಂಧಿ

ಹೀಗೆ ಸಂಧಾನ ಮುರಿಯಲು ಕೃಷ್ಣನು ಉಪಪ್ಲಾವ್ಯನಗರಿಗೆ ಹಿಂತಿರುಗಿದನು ತಾನು ಬಂದಿರುವ ಸುದ್ದಿಯನ್ನು ಧರ್ಮರಾಜಾದಿಗಳಿಗೆ ತಿಳಿಸಲು ಸಾತ್ಯಕಿಯನ್ನು ಕೃಷ್ಣನೇ ಕಳುಹಿಸಿದನು ಕೃಷ್ಣನು ಬಂದಿರುವ ಸುದ್ದಿಯನ್ನು ಕೇಳಿ ಎಲ್ಲ ರಾಜರೂ ತಮ್ಮ ಸಮಸ್ತ ಸೈನ್ಯದೊಡನೆ ಆತನನ್ನು ಎದುರುಗೊಳ್ಳಲು ಬಂದರು

ಭೀಮನು ದೂರದಿಂದಲೇ ಕೃಷ್ಣನ ದುಮ್ಮಾನದ ಮುಖವನ್ನು ನೋಡಿ "ಕೌರವರು ಸಂಧಿಗೆ ಒಪ್ಪಿಲ್ಲ ಈತನ ಮುಖವನ್ನು ನೋಡಿದರೆ ಯುದ್ಧವೇ ಖಂಡಿತ ಇದೇ ಅಲ್ಲವೇ ಮಾರಿಗೆ ಉತ್ಸವ!" ಎಂದು ಹೇಳುತ್ತಾ ಬಂದನು

ದ್ರುಪದನೇ ಆದಿಯಾಗಿ ಎಲ್ಲ ನಾಯಕರೂ ಕೃಷ್ಣನನ್ನು ಕಂಡು ಆತನಿಗೆ ನಮಸ್ಕರಿಸಿದರು ಧರ್ಮರಾಜನು "ದೇವ! ಭೀಷ್ಮ, ವಿದುರ, ದ್ರೋಣ, ಕೃಪ, ಅಶ್ವತ್ಥಾಮ, ಧೃತರಾಷ್ಟ್ರ ಮೊದಲಾದವರೆಲ್ಲ ಕ್ಷೇಮವೇ? ಎಂದು ಕೃಷ್ಣನನ್ನು ಪ್ರಶ್ನಿಸಿದನು

ಅದಕ್ಕೆ ಕೃಷ್ಣನು "ರಾಜ! ಬಂಧುಗಳೆಲ್ಲ ಕ್ಷೇಮವಾಗಿರುತ್ತಾರೆ ಅವರೆಲ್ಲ ನಿಮ್ಮ ಕ್ಷೇಮಕುಶಲಗಳನ್ನು ವಿಚಾರಿಸಿ ಹರಕೆಗಳನ್ನೂ ಹೇಳಿ ಕಳುಹಿಸಿರುತ್ತಾರೆ ಮಹಾಸಂಗ್ರಾಮದಲ್ಲಿ ಬಾಣಗಳ ಕಾಣಿಕೆಯಿಂದ ನಿಮ್ಮಲ್ಲಿ ಪ್ರೇಮವನ್ನು ಬಳಸುವುದೇ ದುರ್ಯೋಧನನ ಮತ ನೀವು ಅರ್ಧ

ಭೂಮಿಯನ್ನು ಕೇಳಿರುತ್ತೀರಿ ಆದರೆ ಆತನು ಸಂಧಿಗೆ ಒಪ್ಪದೆ ನಿಮ್ಮೆತ್ತ ವರಿಗೂ ಯುದ್ಧಭೂಮಿಯನ್ನು ಕೊಟ್ಟಿರುತ್ತಾನೆ ನೀವು ನಿಪುಣರೇ ಆಗಿದ್ದರೆ ಕೌರವರೊಡನೆ ಕುರುಕ್ಷೇತ್ರದಲ್ಲಿ ಯುದ್ಧಹೂಡಿ ನಿಮ್ಮ ನಿಮ್ಮಲ್ಲಿ ಕೋಪಗೊಂಡರೆ ವ್ಯಸನಪಡುವವರೂ, ಮನಸ್ಸು ಕಲಕಿದರೆ ಶಾಂತರಾಗುವವರೂ, ನೀವು ನೀವೆ ಈಗ ನಿಮ್ಮ ದೆಸೆಯಿಂದ ನನಗೆ ಸಭೆಯಲ್ಲಿ ಮಾನಹಾನಿಯಾಯಿತು '' ಎಂದು ಹೇಳಲು, ಧರ್ಮ ರಾಜನು ವ್ಯಥೆಪಟ್ಟನು ಬಳಿಕ ನಕ್ಕು ''ದೇವ! ಕೋಪಿಸಿ ಕತ್ತಿಯನ್ನು ಹಿರಿದು ಆಕಾಶಕ್ಕೆ ಬೀಸಿ ಏನುತಾನೆ ಮಾಡಬಹುದು? ಕರುಣಾಸಾಗ ರನೇ! ಆ ಖಳರು ಕೊಟ್ಟ ತೊಂದರೆಯನ್ನು ನಮ್ಮಲ್ಲಿ ತಿಳಿದು ಎಲ್ಲವನ್ನೂ ಮರೆಯಬೇಕು'' ಎಂದು ಕೃಷ್ಣನ ಪಾದಗಳನ್ನು ಹಿಡಿದನು

ಆಗ ಕೃಷ್ಣನು ''ಧರ್ಮರಾಜ! ಸುಮ್ಮನೆ ನನ್ನನ್ನು ಕಾಡಬೇಡ, ಏಳು, ಅವನ್ನೆಲ್ಲಾ ಆಗಲೇ ಮರೆತೆ ಕೌರವರು ಮುಂದಾಲೋಚನೆ ಯಿಲ್ಲದೆ ತೊಂದರೆಪಡಿಸಿದರು ನಾನೇಕೆ ದೂರುವುದು? ಅದು ಹೋಗಲಿ ಎಲ್ಲ ಸಿದ್ಧತೆಗಳೂ ಆಗಿದ್ದರ ನಾಳೆಯೇ ಸಂಗ್ರಾಮ ನಡೆಯಲಿ ಕೌರವರಿಗೆ ಸ್ಮೈರಣೆಯೇ ತಿಳಿಯದು ನೀನು ಕುರುಕ್ಷೇತ್ರಕ್ಕೆ ಹೊರಡು'' ಎಂದು ಹೇಳಿದನು

ಕೃಷ್ಣನ ಮಾತನ್ನು ಕೇಳಿ ಭೀಮನು ''ಭೃತ್ಯರ ಹಾನಿಯನ್ನು ಹೊತ್ತು ಅವರ ಮಾನರಕ್ಷಣೆ ಮಾಡುವುದೇ ಒಡೆಯನಿಗೆ ಗುಣ ಕೃಷ್ಣ! ನಮಗೆ ನೀನೇ ಒಡೆಯ ಮಾನಭಂಗವನ್ನು ಹೊತ್ತು ನಮ್ಮ ಅಭಿ ಮಾನವನ್ನು ನೀನು ಉಳಿಸಿರುತ್ತೀಯೆ ಸಂಧಾನ ಫಲಿಸದಂತೆ ಮಾಡಿ ನಮ್ಮನ್ನು ಕಾಪಾಡಿರುತ್ತೀಯೆ ಈಗ ಮಾರಿಯ ಕೊರತೆ ಅಡಗದೇ ಇರು ವುದೇ? ಯಮನ ಪಟ್ಟಣ ತುಂಬುವುದಿಲ್ಲವೇ? ಶಾಕಿನಿಯರ ಮೈ ಒದ್ದೆ ಯಾಗುವುದಿಲ್ಲವೇ? ಡಾಕಿನಿಯರ ಮೈ ಕೊಬ್ಬುವುದಿಲ್ಲವೇ? ಕೌರವನ ತನಿ ಗರುಳ ದಂಡೆಯನ್ನು ಬಾಗಿಲಲ್ಲಿ ತೋರಣಕಟ್ಟಿ ಹಸ್ತಿನಾಪಟ್ಟಣವನ್ನು ಪ್ರವೇಶಿಸದೆ ಇರುವೆನೇ? ನೋಡು'' ಎಂದನು

ಇದನ್ನು ಕೇಳಿ ಕೃಷ್ಣನು ''ಭೀಮ! ನಡೆ ನಿನ್ನ ಪರಾಕ್ರಮ ವನ್ನು ತೋರಿಸು ಈಗ ಈ ಕೋಲಾಹಲ ಏತಕ್ಕೆ? ಇನ್ನಾರು ತಿಂಗಳೇ? ನಾಳೆಯೇ ಪ್ರಯಾಣವೆಂದು ಸಾರಿಸು ಏಳು'' ಎಂದನು

ಬಳಿಕ ಎಲ್ಲರೂ ಉಪಪ್ಲಾವ್ಯನಗರಿಗೆ ಬಂದರು ಕೃಷ್ಣನ ಹೇಳಿಕೆ ಯಂತೆ ಎಲ್ಲ ರಾಜರೂ ತಮ್ಮ ತಮ್ಮ ಚತುರಂಗಬಲದೊಡನೆ ಯುದ್ಧಕ್ಕೆ ಸಿದ್ಧರಾಗಿ ಬರುತ್ತಿರುವುದನ್ನು ನೋಡಿದರೆ ಸಾಗರದ ಪ್ರವಾಹದಂತೆ ಕಾಣುತ್ತಿತ್ತು ಈ ಸೇನಾಸಾಗರದಲ್ಲಿ ರಾಜರ ಕಿರೀಟಗಳೇ ನವರತ್ನಗಳು ರಾಜರು ಹಿಡಿದಿರುವ ಕತ್ತಿ, ಕೊಡಲಿ ಮೊದಲಾದ ಆಯುಧಗಳೇ ಅಲೆಗಳು ರಥದ ಬಾವುಟಗಳೇ ನೊರೆ ಆನೆಕುದುರೆಗಳೇ ಜಲಚರಗಳು

ಭೀಷ್ಮನ ಕೈಸನ್ನೆಯೇ ಗಾಳಿ ಈ ಗಾಳಿಯ ಹೊಡೆತದಿಂದ ಸೇನಾ ಪ್ರವಾಹ ರಭಸವಾಗಿ ಬರುತ್ತಿತ್ತು

ಭೀಮಾರ್ಜುನರು ಸೇನೆಯನ್ನು ತೋರಿಸುತ್ತ ಬರಲು, ಕೃಷ್ಣನು ಧರ್ಮರಾಜನೊಡನೆ ಆನೆಯಮೇಲೆ ಕುಳಿತು ಎಲ್ಲವನ್ನೂ ನೋಡಿದನು

ದ್ರುಪದನು ತನ್ನ ಒಂದಕ್ಷೌಹಿಣೀಸೇನೆಯನ್ನೂ, ಯುಧಾಮನ್ಯು, ಉತ್ತಮೌಜ, ಶಿಖಂಡಿ, ಸುಚೇಕಿತಾನ, ಮೊದಲಾದ ಪಾಂಚಾಲದೇಶಕ್ಕೆ ಸೇರಿದ ರಾಜರ ಮತ್ತು ತುರುಕ, ಸಾಹಣ, ಸಮುದ್ರ, ಮರು, ಯವನ, ಖುರಸಹಣ, ಕಾಶಿರಾಜರಿಗೆ ಸೇರಿದ ಒಂದಕ್ಷೌಹಿಣೀ ಸೇನೆಯನ್ನೂ ತೋರಿಸಿದನು

ವಿರಾಟರಾಜ, ಕಂಬುರಾಜ, ಶತದ್ಯುಮ್ನ, ಶತಚಂದ್ರ, ಶತಾನೀಕ, ಶತಾಯುಧ ಮೊದಲಾದ ಮತ್ಸ್ಯದೇಶದ ರಾಜರು ಒಟ್ಟು ಒಂದಕ್ಷೌಹಿಣೀ ಸೇನೆಯನ್ನು ತೋರಿಸಿದರು

ಕೈಕಯರಾಜರು ಒಂದಕ್ಷೌಹಿಣೀಸೇನೆಯನ್ನೂ, ಪಾಂಡ್ಯ, ಸೃಂಜಯ, ಸೋಮಕ ಮೊದಲಾದ ದೊರೆಗಳು ಒಂದಕ್ಷೌಹಿಣೀ ಸೇನೆಯನ್ನೂ ತೋರಿಸಿದರು

ಚೇದಿದೇಶದ ಧೃಷ್ಟಕೇತುವು ಒಂದಕ್ಷೌಹಿಣೀಬಲವನ್ನೂ, ಕುಂತೀಭೋಜನು ಒಂದಕ್ಷೌಹಿಣೀಸೇನೆಯನ್ನೂ ತೋರಿಸಿದರು

ಹೀಗೆ ಒಟ್ಟು ಏಳಕ್ಷೌಹಿಣೀಸೇನೆ ಪಾಂಡವರ ಸಹಾಯಕ್ಕಾಗಿ ನೆರೆದಿತ್ತು

ಪಾಂಡವರ ಕಡೆಗೆ, ನೀಲ, ಬೃಹತ್ಕ್ಷೇತ್ರ, ಸೂರ್ಯಧ್ವಜ, ಸುವರ್ಚಸ, ಚಿತ್ರವರ್ಮ, ಹಿರಣ್ಯವರ್ಮ, ಮೊದಲಾದವರೂ ಸಹಾಯ ಗಿ ಬಂದರು

ಹಿಂದೆ ಅರ್ಜುನನಿಗೆ ರಾತ್ರಿಯುದ್ಧಮಾಡಿ ಸೋತ ಅಂಗಾರವರ್ಮನು ನ್ನ ಪರಿವಾರದೊಡನೆ ಯುಧಿಷ್ಠಿರನನ್ನು ಬಂದು ಕಂಡನು

ದುರ್ಯೋಧನನನ್ನು ಕಟ್ಟಿ ಒಯ್ದ ಧೀರಸಾಹಸಿಯಾದ ಚಿತ್ರ ಸೇನನು ಮಿತ್ರಭಾವದಿಂದ ಧರ್ಮರಾಜನನ್ನು ಬಂದು ಕಂಡನು

ಭಾರಿದೇಹನೂ, ಭಟಭಯಂಕರನೂ ಆದ ಘಟೋತ್ಕಚನು ತನ್ನ ಪರಿವಾರದೊಡನೆ ಧರ್ಮರಾಜನನ್ನು ಬಂದು ಕಂಡನು

ಎಲ್ಲ ರಾಜರೂ ತಮ್ಮ ತಮ್ಮ ಸೇನೆಯೊಡನೆ ಉಪಪ್ಲಾವ್ಯನಗರದಲ್ಲಿ ನೆರೆದರು ಬಳಿಕ ಧರ್ಮರಾಜನು ಆಪ್ತಸಚಿವರನ್ನು ಬರಮಾಡಿಸಿ ಅವರೆದುರಿನಲ್ಲಿ "ದೇವ! ಯುದ್ಧಕ್ಕೆ ಸೇನಾನಾಯಕನು ಬೇಕು. ಒಟ್ಟಾಗಿ ನೆರೆದಿರುವ ಈ ಸೇನೆಗೆ ನಾಯಕನಿಲ್ಲದಿದ್ದರೆ ಸತ್ವವಿಲ್ಲದೆ ಇರುವೆಯಂತೆ ಸೇನೆಯು ಚೆದುರಿಹೋಗುವ ಸಂಭವವುಂಟು ಆದಕಾರಣ ಈ ಸೇನೆಗೆ ಯಾರನ್ನು ದಳಪತಿಯಾಗಿ ಮಾಡಬಹುದು ? ಎಂದು ರಾಜಕಾರ್ಯವನ್ನು

ಕೃಷ್ಣನಿಗೆ ಅರಿಕೆಮಾಡಿದನು ಇದನ್ನು ಕೇಳಿ ಕೆಲವರು ದ್ರುಪದನನ್ನೂ, ಮತ್ತೆ ಕೆಲವರು ವಿರಾಟನನ್ನೂ, ಇನ್ನು ಕೆಲವರು ಶಿಖಂಡಿಯನ್ನೂ, ಉಳಿದ ಕೆಲವರು ಘಟೋತ್ಕಚನನ್ನೂ ದಳಪತಿಯನ್ನಾಗಿ ಮಾಡಲು ಸೂಚಿಸಿದರು ಹೀಗೆ ಅವರಲ್ಲೇ ಅನೇಕ ಮತವಾಗಲು, ಅರ್ಜುನನು "ದ್ರುಪದನ ಮಗ ಧೃಷ್ಟದ್ಯುಮ್ನನನ್ನು ಸೇನಾನಾಯಕನನ್ನಾಗಿ ಮಾಡುವುದು ನನಗ ಸಮ್ಮತ" ಎಂದು ತಿಳಿಸಿದನು ಆಗ ಧರ್ಮರಾಜನು "ಕೃಷ್ಣ! ಈ ಭಿನ್ನಾಭಿಪ್ರಾಯಗಳಿಂದ ರಾಜಕಾರ್ಯದ ಸ್ಥಿತಿ ಕೆಟ್ಟಿದೆ ಸೇನಾನಾಯಕನಾಗಲು ಯಾರು ಸಮರ್ಥರು? ನೀನೇ ತಿಳಿಸು" ಎಂದು ಹೇಳಲು, ಕೃಷ್ಣನು "ಧರ್ಮರಾಜ! ಹೇಳುವುದೇನಿದೆ? ಸೇನಾನಾಯಕಪಟ್ಟಕ್ಕೆ ಅರ್ಜುನನು ಯಾರನ್ನು ಸೂಚಿಸುತ್ತಾನೆಯೋ ಅದೇ ನನಗೂ ಒಪ್ಪಿಗೆ" ಎಂದನು

ಕೂಡಲೇ ಧೃಷ್ಟದ್ಯುಮ್ನನನ್ನು ಕರೆಸಿದರು ಸೇನಾಪಟ್ಟಕಟ್ಟುವ ಈ ಮಹೋತ್ಸವಕ್ಕಾಗಿ ಪಟ್ಟಣವನ್ನು ತಳಿತೋರಣಗಳಿಂದ ಅಲಂಕರಿಸಿದರು ಎಲ್ಲೆಡೆಯಲ್ಲೂ ವೇದಘೋಷಧ್ವನಿ ಕೇಳಿಬರುತ್ತಿದ್ದಿತು ಮಂಗಳವಾದ್ಯಗಳೂ ಮೊಳಗುತ್ತಿದ್ದವು ಭಟರು ಬಿರುದುಗಳನ್ನು ಸಾರಿ ಹೇಳುತ್ತಿದ್ದರು ಬಾಲಕಿಯರು ಆರತಿ ಎತ್ತಲು ತಟ್ಟೆಗಳನ್ನು ಹಿಡಿದು ನಿಂತಿದ್ದರು ಸುಮುಹೂರ್ತದಲ್ಲಿ ಧೃಷ್ಟದ್ಯುಮ್ನನಿಗೆ ಪಾಂಡವ ಸೇನಾಪಟ್ಟವನ್ನು ಕಟ್ಟಿದರು

ಬಳಿಕ "ಸೇನೆಯು ಧೃಷ್ಟದ್ಯುಮ್ನನ ಅಪ್ಪಣೆಯಂತೆ ನಡೆಯಬೇಕು" ಎಂದು ಎಲ್ಲರಾಜರ ಪಾಳೆಯದಲ್ಲೂ ಡಂಗುರಹೊಡಿಸಿದರು ಶುಭ ಮುಹೂರ್ತದಲ್ಲಿ ಎಲ್ಲರೂ ಯುದ್ಧಕ್ಕಾಗಿ ಪ್ರಯಾಣಹೊರಟರು ಪಾಂಡವರೂ ಕೃಷ್ಣನಿಗೆ ನಮಸ್ಕರಿಸಿ ತಮ್ಮ ತಮ್ಮ ರಥಗಳನ್ನೇರಿದರು ಕೃಷ್ಣನು ರಥದಲ್ಲಿ ಕುಳಿತು ಮುಂದೆ ಹೊರಟನು ಆತನ ರಥದ ಹಿಂದೆ ಧರ್ಮರಾಜನ ರಥವೂ, ಪಕ್ಕಗಳಲ್ಲಿ ಭೀಮಾರ್ಜುನರ ರಥಗಳೂ ಹೊರಟವು

ಯುದ್ಧಭೂಮಿಗೆ ತೆರಳುತ್ತಿರುವ ಈ ಪಾಂಡವಸೇನೆಯನ್ನು ನೋಡಿ ದೇವತೆಗಳು "ಆದಿಶೇಷನಿಗೂ ಈ ಸೇನೆಯ ಭಾರವನ್ನು ಧರಿಸಲು ಸಾಧ್ಯವಾಗಲಾರದು" ಎಂದು ಹೇಳುತ್ತಿದ್ದರು ಕಹಳೆ ಮೊದಲಾದ ವಾದ್ಯಘೋಷದೊಡನೆ ಸೇನೆ ಮುಂದೆ ಮುಂದೆ ನಡೆಯುತ್ತಿತ್ತು ಸೇನೆಯ ಕಾಲ್ತುಳಿತಕ್ಕೆ ಭೂಮಿಯು ಕುಸಿದು ಆಮೆಗೆ ಮೇಲುಸಿರು ಬರುವಂತೆಯೂ, ದಿಗ್ಗಜಗಳು ಮೊಳಕಾಲೂರುವಂತೆಯೂ, ಶೇಷನು ಕುಸಿಯುವಂತೆಯೂ ತೋರುತ್ತಿತ್ತು

ಆನೆಗಳ ಬೃಂಹಿತ, ಕುದುರೆಗಳ ಹೇಷಾಧ್ವನಿ, ತೇರುಗಳ ಚೀತ್ಕಾರ, ಬಿಲ್ಲುಗಳ ಟಂಕಾರ ಇವುಗಳ ಆರ್ಭಟ ಮೂರುಲೋಕಗಳನ್ನೂ ನಡುಗಿಸುವಂತಿತ್ತು ಸೇನೆಯು ಅಟ್ಟಹಾಸದಿಂದ ಕುರುಕ್ಷೇತ್ರಕ್ಕೆ ಬಂದಿತು ಯುದ್ಧಭೂಮಿಯಲ್ಲಿ ಕೃಷ್ಣನೇ ಮೊದಲಾದವರಿಗೆ ಇಳಿ

ಯಲು ಆಲಯಗಳನ್ನು ರಚಿಸಿದರು ಧರ್ಮರಾಜನ ಅರಮನೆಗೆ ಬಲಗಡೆ ಕೃಷ್ಣನಿಗೂ ಅದರ ಸಮೀಪದಲ್ಲಿ ಅರ್ಜುನನಿಗೂ, ಕೃಷ್ಣನ ಅರಮನೆಯ ಹಿಂದೆ ನಕುಲನಿಗೂ, ಎಡಗಡೆ ಭೀಮನಿಗೂ, ಮುಂದೆ ಸಹದೇವನಿಗೂ ಅರಮನೆಗಳನ್ನು ಕಟ್ಟಿಸಿದರು ಈ ಅರಮನೆಗಳ ಸುತ್ತಲೂ ಪಾಂಚಾಲ, ಮತ್ಸ್ಯ ಮೊದಲಾದ ದೊರೆಗಳಿಗೆ ಗೂಡಾರಗಳನ್ನೂ ಈ ಎಲ್ಲ ಗೂಡಾರಗಳ ರಕ್ಷಣೆಗಾಗಿ ಹೊರಗಡೆ ಸುತ್ತಲೂ ಕಲ್ಲುಕೋಟೆಯನ್ನೂ ಕಟ್ಟಿಸಿದರು ಯುದ್ಧಸಾಮಗ್ರಿಗಳನ್ನೆಲ್ಲಾ ಅಳವಡಿಸಿಕೊಂಡರು ಪಾಳಯದಲ್ಲಿ ಅಂಗಡಿಬೀದಿಗಳೂ ಸಿದ್ಧವಾದವು "ದೇವತೆಗಳಿಗೇ ಸೃಷ್ಟಿಸಲು ಆಗದಿರುವ ಈ ಪಾಳಯದ ಸೃಷ್ಟಿ ಉಳಿದವರಿಗೆ ಸಾಧ್ಯವೇ ?" ಎನ್ನುವಂತೆ ಪಾಂಡವರ ಸಮಗ್ರಬೀಡು ಕುರುಕ್ಷೇತ್ರದಲ್ಲಿ ರಂಜಿಸುತ್ತಿತ್ತು ಸೇನೆಯಲ್ಲಿ ಭೀಮನದು ಅಗ್ರಬಲ ಆತನು ಹಿಂಭಾಗದಲ್ಲೂ, ಬೀಡಿನ ಸುತ್ತಲೂ ಸಾತ್ಯಕಿ ನಕುಲ ಅರ್ಜುನರು, ಪಾಳಯದ ರಕ್ಷಣೆಗಾಗಿ ಕಾಯುತ್ತಿದ್ದರು ರಾತ್ರಿಯಲ್ಲಿ ಘಟೋತ್ಕಚನೊಬ್ಬನೇ ಬಲವನ್ನು ಕಾಯುತ್ತಿದ್ದನು ಪಾಂಡವರ ಉಳಿವಿಗೆ ಗದುಗಿನ ವೀರನಾರಾಯಣನೇ ಕಾವಲಾಗಿದ್ದನು

## ಕಾವ್ಯ ರಚನೆ

ಕುಮಾರವ್ಯಾಸನು ರಚಿಸಿರುವ ಈ ಕಥೆಗೆ ವ್ಯಾಸಭಾರತವೇ ಮೂಲ ಈತನು ವ್ಯಾಸಭಾರತದ ಕಥೆಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿರುತ್ತಾನೆ ಈ ಮಾರ್ಪಾಡುಗಳಲ್ಲಿ ಹೆಚ್ಚುಭಾಗವನ್ನು ಕನ್ನಡ ಆದಿಕವಿಯಾದ ಪಂಪನಿಂದ ಸಂಗ್ರಹಿಸಿರುತ್ತಾನೆ ಸಂಸ್ಕೃತ ಭಾರತ, ಪಂಪಭಾರತ ಇವೆರಡನ್ನೂ ಹಾಸುಹೊಕ್ಕುಗಳನ್ನಾಗಿ ಅಳವಡಿಸಿಕೊಂಡು, ತಾನು ಕಥಾಪಟವನ್ನು ರಚಿಸಿರುತ್ತಾನೆ ಈ ಕಥಾಪಟದಲ್ಲಿ ತನ್ನ ಕಾಲ್ಪನಿಕಚಿತ್ರವನ್ನು ಚಿತ್ರಿಸಿ ಭಾರತಕಥಾಚಿತ್ರವನ್ನು ಕನ್ನಡ ನಾಡಿನ ಎಲ್ಲ ಜನರ ಮುಂದಿರಿಸಿರುತ್ತಾನೆ

ಮಹಾಭಾರತ ಪಂಪಭಾರತಗಳನ್ನು ಅನುಸರಿಸಿರುವುದಕ್ಕೆ ಲಕ್ಷ್ಯಗಳನ್ನು ಮುಂದೆ (ಪು 1 ದಿಂದ) ಪ್ರತ್ಯೇಕವಾಗಿ ಕೊಟ್ಟಿದೆ

ಕುಮಾರವ್ಯಾಸನು ಕಥಾದೃಷ್ಟಿಯಿಂದ ಮೂಲಭಾರತದಲ್ಲಿ * ಹೇಳಿರುವ ಇತರ ಉಪಾಖ್ಯಾನಗಳನ್ನು ಒಂದೊಂದು ಪದ್ಯದಿಂದ ಮಾತ್ರ ಸೂಚಿಸಿ, ಭಾರತಕಥೆಯನ್ನೇ ಮುಂದುವರಿಸುತ್ತಾನೆ ವ್ಯಾಸಭಾರತದಂತೆ ಉಪಾಖ್ಯಾನಗಳ ಕಥೆಯನ್ನು ತನ್ನ ಕಾವ್ಯದಲ್ಲೂ ವಿವರಿಸಲು ಪ್ರಯತ್ನಿಸಿಲ್ಲ ಅಂತೆಯೇ ವರ್ಣನೀಯಾಂಶಗಳನ್ನು ಸಂಗ್ರಹಿಸಿ ಅವುಗಳ ಅಭಿಪ್ರಾಯಬರುವಂತೆ ತನ್ನದೇ ಆದ ಒಂದು ಮಾರ್ಗದಿಂದ ವರ್ಣಿಸುತ್ತಾನೆ ಕೆಲವುಕಡೆಗಳಲ್ಲಿ ಮೂಲವನ್ನೇ ಕನ್ನಡಕ್ಕೆ ಭಾಷಾಂತರ

* ಉದ್ಯೋಗಪರ್ವದ ಕಥಾದೃಷ್ಟಿಯಿಂದ

ಮಾಡಿರುತ್ತಾನೆ  ಈ ವಿಧವಾದ ಕೃತಿಯ ರಚನೆಯನ್ನು ನೋಡಿದರೆ ಕವಿಗೆ ಅಸಾಧಾರಣ ಪ್ರತಿಭೆ ಇದ್ದಿತೆನ್ನುವುದು ಸ್ಪಷ್ಟಪಡುತ್ತದೆ

ಕವಿಗೆ ಸಂಸ್ಕೃತ, ಕನ್ನಡ ಈ ಎರಡು ಭಾಷೆಗಳಲ್ಲೂ ಪೂರ್ಣ ಪಾಂಡಿತ್ಯವಿದ್ದಿತೆಂದು ಕಾವ್ಯವಿಮರ್ಶೆಯಿಂದ ತಿಳಿದು ಬರುತ್ತದೆ  ಆದುದರಿಂದಲೇ ಕವಿಯು ಸಂಸ್ಕೃತ ಶ್ಲೋಕಗಳನ್ನೇ ಕನ್ನಡಕ್ಕೆ ಭಾಷಾಂತರ ಮಾಡಿರುತ್ತಾನೆ  ಸಂಸ್ಕೃತಭಾರತದ ಶ್ಲೋಕಗಳನ್ನು ಮಾತ್ರವಲ್ಲದೆ ಹಲವು ಪ್ರಸಿದ್ಧ ನೀತಿಶ್ಲೋಕಗಳನ್ನೂ ಹಿತೋಪದೇಶ, ಶುಕ್ರನೀತಿ ಮೊದಲಾದ ನೀತಿಗ್ರಂಥಗಳಿಂದ ಸಂಗ್ರಹಿಸಿ ಕನ್ನಡಕ್ಕೆ ಭಾಷಾಂತರಮಾಡಿರುತ್ತಾನೆ  ಇದೇ ಈತನ ಅಸಾಧಾರಣಪಾಂಡಿತ್ಯದ ಕುರುಹು

ಸಂಸ್ಕೃತಶ್ಲೋಕಗಳನ್ನು ಅವುಗಳಲ್ಲಿರುವ ಭಾವಗಳು ಕೆಡದಂತೆ ಕನ್ನಡಭಾಷೆಗೆ ಪರಿವರ್ತಿಸುವುದು ಸಾಮಾನ್ಯಪಂಡಿತನಿಗ ಸಾಧ್ಯವಲ್ಲ  ಕವಿಯು ಹೊಸದಾಗಿ ತನಗೆ ಸ್ಫೂರ್ತಿಬಂದಂತೆ ಕಾವ್ಯಗಳನ್ನು ರಚಿಸುವುದು ಸುಲಭ  ಮತ್ತೊಬ್ಬರ ಭಾವವನ್ನು ಕುಂದಿಲ್ಲದಂತೆ ಭಾಷಾಂತರಮಾಡಿ ಕಾವ್ಯವನ್ನು ರಚಿಸುವುದು ಕಷ್ಟ ಮತ್ತು ವಿರಳ  ಈ ಕಾರ್ಯಕ್ಕೆ ಕುಮಾರವ್ಯಾಸನು ಪ್ರಯತ್ನಿಸಿ ಅದರಲ್ಲಿ ಜಯಶೀಲನಾಗಿರುತ್ತಾನೆ  ಎಂದರೆ ಉತ್ಪ್ರೇಕ್ಷೆ ಯಲ್ಲ  ಆದುದರಿಂದಲೇ ಈತನ ಕಾವ್ಯವು ಪಂಡಿತ ಪಾಮರರಾದಿಯಾಗಿ ಎಲ್ಲ ಕನ್ನಡಿಗರಿಗೂ ಆದರಣೀಯವಾಗಿದೆ

ಪಂಪಭಾರತವು ವಿದ್ವಾಂಸರ ಮೆಚ್ಚಿಗೆಯನ್ನು ಪಡೆದಿದೆಯೇ ವಿನಾ ಸಾಮಾನ್ಯಕನ್ನಡಿಗನಿಗೆ ಅದು ಅರ್ಥವಾಗುವುದಿಲ್ಲವೆಂದು ಕವಿಯು ಯೋಚಿಸಿ, ಸಾಮಾನ್ಯಜನರ ಬಳಕೆಯ ನುಡಿಗಳನ್ನೇ ತನ್ನ ಕಾವ್ಯದಲ್ಲಿ ಉಪಯೋಗಿಸಿರಬೇಕು

**ಕುಮಾರವ್ಯಾಸನು ತನ್ನ ಕಾವ್ಯದಲ್ಲಿ ಉಪಯೋಗಿಸಿರುವ ಜನಸಾಮಾನ್ಯದ ನುಡಿ, ನುಡಿಗಟ್ಟು, ಪಡೆನುಡಿಗಳಿಗೆ ಉದ್ಯೋಗಪರ್ವದಲ್ಲಿ ಕಂಡುಬರುವ ಕೆಲವು ನಿದರ್ಶನಗಳು**

೧  ಸಾಮಾನ್ಯವಾಗಿ ಜನರು ಮಾತಾಡುವಾಗ 'ಇದು ಸತ್ಯ' ಎಂದು ತಿಳಿಸುವ ಸಂದರ್ಭಗಳಲ್ಲಿ 'ಆಣೆ ಇಡುವುದು' ಈಗಲೂ ಬಳಕೆಯಲ್ಲಿದೆ  ಇದನ್ನು ಕವಿಯು ಕಾವ್ಯದಲ್ಲಿ ಅನೇಕ ಕಡೆ ಪ್ರಯೋಗಿಸಿರುತ್ತಾನೆ  ಇದಕ್ಕಾಗಿ ಅರ್ಧಪದ್ಯವನ್ನೇ ವಿನಿಯೋಗಿಸಲು ಮಾಡಿರುವುದನ್ನು ಮುಂದಿನ ಪದ್ಯವು ವ್ಯಕ್ತಪಡಿಸುತ್ತದೆ

"ದೇವಕಿಯ ಮೇಲಾಣೆ ವರವಸು
ದೇವನಂಘ್ರಿಗಳಾಣೆ ಮನ್ಮಥ
ದೇವನಾಣೆ ನಿದಾನವನು ಕೇಳಬಲೆ ನಿನ್ನಾಣೆ" ಸಂ ೭. ಪ ೧೩

೨. 'ತಾನು ಶೂರ' ಎನ್ನುವ ಅಭಿಪ್ರಾಯವನ್ನು ಸೂಚಿಸುವುದಕ್ಕಾಗಿ ಮೀಸೆತಿರುಗಿಸುವುದು, ಮೀಸೆಯ ಮೇಲೆ ಕೈ ಇಡುವುದು ಇವೇ ಮೊದಲಾದ ಸಾಮಾನ್ಯಜನರ ನಡವಳಿಕೆಗಳನ್ನು "ಬೆರಳಮೀಸೆಯೊಳಿಡುತ" *"ಮೀಸೆಯನು ಬೆರಳಲಿ ಮುರಿದು" ಎಂದು ಗ್ರಂಥದಲ್ಲಿ ಸೇರಿಸಿರುತ್ತಾನೆ

೩. ಊರಿಂದ ಬಂದವರನ್ನು ಕ್ಷೇಮಸಮಾಚಾರ ವಿಚಾರಿಸಿ ಅವರಿಗೆ ವೀಳೆಯಕೊಟ್ಟು ಮನ್ನಿಸುವುದು

ಉದಾ --"ವೀಳಯವ ತಾ ಕೊಂಡು ಕುರುಭೂಪಾಲಪಾರ್ಥರಿಗಿತ್ತು"
ಸಂ ೧ ಪ ೨೬

"ಮಂದಿರದ ಸುಕ್ಷೇಮಕುಶಲವನಂದು ಕೇಳಿದ. ವೀಳಯವನಾ
ಮಂದಿಗಿತ್ತನು" ಸಂ ೬ ಪ ೨೨

"ಗುರುಪಿತಾಮಹಗೌತಮರ ಸಚ್ಚರಣಕಮಲಂಗಳಿಗೆ ಕುಶಲವೆ
ಗುರುಸುತನು ಸುಕ್ಷೇಮಿಯೇ ಕುರುರಾಯನಿರವೆಂತು ।
ಕುರುಪತಿಯಸೋದರರು ಮಕ್ಕಳು ಸರಸಿಜಾನನೆ ಭಾನುಮತಿ ಮಿ
ಕ್ಕರಸಿಯರು ಕರ್ಣಾಡಿಗಳೆಯಿರವೆಂತು ಹೇಳೆಂದ
ಸಂ ೨ ಪ ೩೪

೪ ಬ್ರಾಹ್ಮರು, ಪುಕ್ಕಟೆ, ಭಂಡ, ಮೊಮ್ಮಂದಿರು, ಅಣ್ಣತಮ್ಮಂದಿರು, ಪುಂಡ, ಸಂಗಾತ, ಉಂಡಾಡಿಭಟ್ಟ, ಬೀಡಾಡಿ, ಸುರಗಿರರು ಅವನಿಗಿವನಿ ಇವೇ ಮೊದಲಾದ ಕನ್ನಡಿಗರು ಬಳಸುವ ಮಾತುಗಳನ್ನು ಕವಿಯು ಕಾವ್ಯದಲ್ಲಿ ಪ್ರಯೋಗಿಸಿರುತ್ತಾನೆ

೫ (i) "ಮರುಳು ಮಾಯೆ ಕುಂತೀಲಲನೆ ಹೆತ್ತಳು ಸುತರ"
ಸಂ ೬ ಪ ೧೧

(ii) "ಮುಳಿದು ಬಗುಳುವ ನಾಯ್ಗೆ ಚಂದ್ರಮನಳುಕುವನೆ?
ನರಿಯೊಳಿಲಿದರೆ ಕಳವಳಿಸುವುದೆ ಕಲಿಸಿಂಹ?"
ಸಂ ೯ ಪ ೪೮

(iii) "ನೊರಜುಹೊಕ್ಕೊಡೆ ಕದಡುವುದೆ ಸಾಗರದಜಲ?
ನೊಣವೆರಗಿದರೆ ಕುಲಗಿರಿಗಳಲ್ಲಾಡುವುವೆ?
ತೆರಳಲರಿವನೆ ಕೊಬ್ಬಿದೊಳ್ಳೆಯಮರಿಗೆ ಗರುಡನು?"
ಸಂ ೯ ಪ ೪೯

---

*ಕುಮಾರವ್ಯಾಸನ ಕೃಷ್ಣನಿಗೆ ಮೀಸೆ ಇರುವುದು ಗಮನಾರ್ಹವಾದ ವಿಷಯವಾಗಿದೆ, ಮದ್ರಾಸಿನ ದೇವಾಲಯದಲ್ಲಿರುವ ಪಾರ್ಥಸಾರಥಿಗೆ ಮೀಸೆ ಈಗಲೂ ಇದೆ

ಇದೇರೀತಿಯ ಅನೇಕ ನುಡಿಗಟ್ಟುಗಳನ್ನು ಕಾವ್ಯದಲ್ಲಿ ಬಳಸಿರುತ್ತಾನೆ

ಕುಮಾರವ್ಯಾಸನಿಗೆ ಜ್ಯೌತಿಷದಲ್ಲಿ ಶಕುನ ವಿಚಾರವು ತಿಳಿದಿದ್ದಿತೆಂದು ಹೇಳಬಹುದು ಈತನು ತನ್ನ ಕಾವ್ಯದಲ್ಲಿ ಮೂಲಭಾರತದಲ್ಲಿಲ್ಲದ ಕಡೆಗಳಲ್ಲೆಲ್ಲಾ ಇದನ್ನು ಸಮಯವರಿತು ಸೇರಿಸಿರುವುದು ಮುಂದಿನ ಲಕ್ಷ್ಯಗಳಿಂದ ವ್ಯಕ್ತವಾಗುತ್ತದೆ

(i) "ಬೀಳುಕೊಂಡರ್ಜುನನು ಲಕ್ಷ್ಮೀಲೋಲನಲ್ಲಿಗೆ ಬರುತ ಕಂಡನು
ಲೀಲೆಯಲಿ ನರ್ತಿಸುವ ನವಿಲನು ಬಲದೊಳಡಹಾಯ್ದು ।
ಮೇಲೆ ಹಂಗನ ಬಲನ ಹರಿಣೀಜಾಲದೆಡನನು ತಿದ್ದುವಳಿಯ ವಿ
ಶಾಲಶಕುನವನಾಲಿಸುತ ಹರುಷದಲಿ ನಡೆತಂದ ॥

ಸಂ ೧ ಪ ೧೮

(ii) "ಮುರರಿಪು ಫಲುಗುಣಗೆ ಮೈಗೊಡುವನೋ ಕೌರವನಿ
ಗೊಳಗಹನೊ ತಿಳಿಯಲರಿದೆನುತಿರಲು ಬಲಗಣ್ಣಲುಗಿತು"

ಸಂ ೨ ಪ ೧

(iii) "ಕರತಳದಿಂದ ನಾಸಿಕದೆರಲ ಚಂದ್ರೋದಯವನೀಕ್ಷಿಸಿ
ಹೊಱವಂಟ" ಸಂ ೭ ಪ ೫

ಕುಮಾರವ್ಯಾಸನು ವ್ಯಾಸಭಾರತದ ಶ್ಲೋಕಗಳನ್ನು ಕನ್ನಡಕ್ಕೆ ಭಾಷಾಂತರಮಾಡಿರುವುದಕ್ಕೂ, ಭಾವಾನುವಾದ ಮಾಡಿರುವುದಕ್ಕೂ ಉದ್ಯೋಗಪರ್ವದಲ್ಲಿ ದೊರೆಯುವ ಉದಾಹರಣೆಗಳು

೧ "ಧಾರ್ತರಾಷ್ಟ್ರೋ ಹ್ಯಯುದ್ಧೇನ ನ ರಾಜ್ಯಂ ದಾತುಮಿಚ್ಛತಿ"

ವ್ಯಾ ಭಾ ಅ 3 ಶ್ಲೋ 22

"ಕಾಳಗದೊಳಲಗಿನ ಮೊನೆಯೊಳಲ್ಲದೆ ಮಹಿಯ ಕೊಡುವನೆ
ಕೌರವೇಶ್ವರನು" ಕು ವ್ಯಾ ಭಾ ಸಂ ೧ ಪ ೧೦

೨ "ವಿವಾಹಾರ್ಥಮಾನೀತಾ ವಯಂ"

ವ್ಯಾ ಭಾ ಅ 5 ಶ್ಲೋ 5

"ಮದುವೆಗೋಸುಗ ಬಂದೆವಾವ್"

ಕು.ವ್ಯಾ ಭಾ.ಸಂ ೧ ಪ ೧೨

೩ "ಮತ್ಸಂಹನನತುಲ್ಯಾನಾಂ ಗೋಪಾನಾಮರ್ಬುದಂ ಮಹತ್ ।
ನಾರಾಯಣ ಇತಿ ಖ್ಯಾತಾಃ ಸರ್ವೇ ಸಂಗ್ರಾಮಯೋಧಿನಃ ॥
ತೇ ವಾ ಯುಧಿ ದುರಾಧರ್ಷಾ ಭವಂತ್ವೇಕಸ್ಯ ಸೈನಿಕಾಃ ।
ಅಯುಧ್ಯಮಾನಸ್ಸಂಗ್ರಾಮೇ ನ್ಯಸ್ತಶಸ್ತ್ರೋಽಹಮೇಕತಃ ॥"
ವ್ಯಾ ಭಾ ಅ 7 ಶ್ಲೋ 20–21

"ಆದಡಾವಿಹೆವೊಂದುಕಡೆಯಲಿ ಕಾದುವವರಾವಲ್ಲ ಬಲಸಹ
ಯಾದವರು ಕೃತವರ್ಮ ನಾರಾಯಣಮಹಾಸೇನೆ ।
ಕಾದುವವರಿವರೊಂದು ಕಡೆಯೆರಡಾದುದಿದರೊಳು ಮೆಚ್ಚಿದುದ ನೀ
ನಾದರಿಸಿ ವರಿಸೆಂದು ಪಾರ್ಥಂಗಸುರರಿಪು ನುಡಿದ ॥"
ಕು ವ್ಯಾ ಭಾ ಸಂ ೧ ಪ ೩೩

೪ "ಏಕಯಾ ದ್ವೌ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು ।
ಪಂಚ ಜಿತ್ವಾ ವಿದಿತ್ವಾ ಷಟ್ ಸಪ್ತ ಹಿತ್ವಾ ಸುಖೀ ಭವ ॥"
ವ್ಯಾ ಭಾ ಅ 32 ಶ್ಲೋ 52

"ಒಂದರಿಂದೆರಡಹುದನಱ ಮೂಱಿಂದವನು ತಿಳಿ ನಾಲ್ಕಱೊಳು ಮನ
ಸಂದಿಸದಿರೈದಱೊಳು ವರ್ಜಿಪುದಾಱನೇಳಱೊಳು ॥"
ಕು ವ್ಯಾ ಭಾ ಸಂ ೩ ಪ ೩

೫ "ಸತ್ಯಂ ಸ್ವರ್ಗಸ್ಯ ಸೋಪಾನಂ ಪಾರಾವಾರಸ್ಯ ನೌರಿವ"
ವ್ಯಾ ಭಾ ಅ 32 ಶ್ಲೋ 55

"ಭೂಪ ಕೇಳೈ ಸತ್ಯವೊಂದೇ ಸೋಪನವು ಸಗ್ಗಕ್ಕೆ ಜನ್ಮದ
ಕೂಪರಕ್ಕಿದು ನಾವೆಯಾಗಿಹುದೆಂದನಾ ವಿದುರ ॥"
ಕು ವ್ಯಾ ಭಾ ಸಂ ೩ ಪ ೮

೬ "ದ್ವಾವಿಮೌ ಪುರುಷವ್ಯಾಘ್ರ ಸೂರ್ಯಮಂಡಲಭೇದಿನೌ ।
ಪರಿವ್ರಾಡ್ಯೋಗಯುಕ್ತಶ್ಚ ರಣೇ ಚಾಭಿಮುಖೋ ಹತಃ ॥"
ವ್ಯಾ ಭಾ ಅ 32 ಶ್ಲೋ 69

"ಧರೆಯೊಳಗೆ ರವಿಮಂಡಲವನೊಡೆದುರವಣಿಸಿ ಹಾಯ್ವವ
ರು ದಿಟವಿಬ್ಬರು ಕಣಾ ಸನ್ಯಾಸಿಯಾಗಿಯೆ ಯೋಗಮಾರ್ಗದೊಳು ।
ಹರಣವನು ಬಿಟ್ಟವರು ಘನಸಂಗರದೊಳಭಿಮುಖರಾಗಿ ಮರಣಾಂ
ತರವನೈದಿದವರುಗಳವನೀಪಾಲ ಕೇಳೆಂದ ॥"
ಕು ವ್ಯಾ ಭಾ ಸಂ ೩ ಪ.೧೮

೭ “ದ್ವಾವಿಮೌ ಪುರುಷೌ ರಾಜನ್ ಸ್ವರ್ಗಸ್ಯೋಪರಿ ತಿಷ್ಠತಃ ।
ಪ್ರಭುಶ್ಚ ಕ್ಷಮಯಾ ಯುಕ್ತೋ ದರಿದ್ರಶ್ಚ ಪ್ರದಾನವಾನ್ ॥”
ವ್ಯಾ ಭಾ ಅ 32 ಶ್ಲೋ 66

“ಪುರರ ಮೇಲಡೋಲಾಡುವವರಿಬ್ಬರೆ ಕಣಾ ಪ್ರಭುವಾಗಿಯು ಕ್ಷಮೆ
ವೆರಸಿದವನು ದರಿದ್ರನಾಗಿಯು ದಾನಿಯೆನಿಸುವನು ॥”
ಕು ವ್ಯಾ ಭಾ ಸಂ ೩ ಪ ೨೦

೮ “ದ್ವಾವಿಮೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾವಿವ ।
ರಾಜಾನಂ ಚಾಪ್ಯಯೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಂ ॥”
ವ್ಯಾ ಭಾ ಅ 32 ಶ್ಲೋ 61

“ಧರಣಿನುಂಗುವಳಿಬ್ಬರನು ಸಂಗರವ ಜಯಿಸದ ನೃಪನ ದೇಶಾಂ
ತರವ ಚರಿಸದ ಪಂಡಿತನನಿದು ಶಾಸ್ತ್ರಸಿದ್ಧವಲೆ।
ಅರಸುಗುಲದಲಿ ಪುಟ್ಟಿ ಸಾಪತ್ನರಿಗಳುಕಿ ದೇಹಾಭಿಲಾಷೆಯೊ
ಳುರಗನಂತೊಳಗಿಹುದು ಲೇಸಲ್ಲೆಂದನಾ ವಿದುರ ॥
ಕು ವ್ಯಾ ಭಾ ಸಂ ೩ ಪ ೨೧

೯ “ತ್ರಿವಿಧಾಃ ಪುರುಷಾ ರಾಜನ್ನುತ್ತಮಾಧಮಮಧ್ಯಮಾಃ ।
ನಿಯೋಜಯೇದ್ಯಥಾವತ್ತಾನ್ ತ್ರಿವಿಧೇಷ್ವೇವ ಕರ್ಮಸು ॥
ತ್ರಯ ಏವಾ ಧನಾ ರಾಜನ್ ಭಾರ್ಯಾ ದಾಸಸ್ತಥಾ ಸುತಃ ।
ಯತ್ತೇ ಸಮಧಿಗಚ್ಛಂತಿ ಯಸ್ಯೈತೇ ತಸ್ಯ ತದ್ಧನಂ ॥”
ವ್ಯಾ ಭಾ ಅ 32 ಶ್ಲೋ 71–72

“ಪಿತನಿರಲು ದಾತಾರನಿರೆ ನಿಜಪತಿಯಿರಲು ಸುತದಾಸಸತಿಯೀ
ತ್ರಿತಯದೊಳ್ ಸ್ವಾತಂತ್ರ್ಯ ತಾನಿಲ್ಲಾವ ಕಾಲದೊಳು ।
ಕ್ಷಿತಿಯೊಳುತ್ತಮ ಮಧ್ಯಮಾಧಮಗತಿಯ ಪುರುಷತ್ರಯವ
ನವರಾಯತವನವರಿಂಗಿತವನಱಿವೈ ರಾಯ ನೀನೆಂದ ॥ ”
ಕು ವ್ಯಾ ಭಾ ಸಂ ೩ ಪ ೨೬

೧೦ “ ಚತ್ವಾರಿ ತೇ ತಾತ ಗೃಹೇ ವಸಂತು
ಶ್ರಿಯಾಭಿಜುಷ್ಟಸ್ಯ ಗೃಹಸ್ಥಧರ್ಮೇ
ವೃದ್ಧೋ ಜ್ಞಾತಿರವಸನ್ನಃ ಕುಲೀನಃ
ಸಖಾ ದರಿದ್ರೋ ಭಗಿನೀ ಚಾನಪತ್ಯಾ ॥ ”
ವ್ಯಾ ಭಾ ಅ 32 ಶ್ಲೋ 78

"ಹಿರಿಯ ಮಾನೋನ್ನತಿಕೆಯನು ಬಂಧುರದ ಧನವನು ಗಾರುಹಸ್ತ್ಯದ
ಪರಮಧರ್ಮವನಾವ ಬಯಸುವನವನ ಭವನದೊಳು ।
ನಿರುತವೃದ್ಧಜ್ಞಾತಿವಂಶೋತ್ತರವಿಷಣ್ಣನು ಪ್ರಿಯದರಿದ್ರನು
ವರಭಗಿನಿಯನಪತ್ಯೆಯಿಂತೀ ನಾಲ್ವರಿರಲೆಂದ ॥"

ಕು ವ್ಯಾ ಭಾ ಸಂ ಪ ೩೩೩

೧೧ "ಚತ್ವಾರ್ಯಾಹ ಮಹಾರಾಜ ಸಾಧ್ಯಸ್ಕಾನಿ ಬೃಹಸ್ಪತಿಃ ।
ಪೃಚ್ಛತೇ ತ್ರಿದಶೇಂದ್ರಾಯ ತಾನೀಮಾನಿ ನಿಬೋಧ ಮೇ ॥
ದೇವತಾನಾಂ ಚ ಸಂಕಲ್ಪಂ ಅನುಭಾವಂ ಚ ಧೀಮತಾಂ ।
ವಿನಯಂ ಕೃತವಿದ್ಯಾನಾಂ ವಿನಾಶಂ ಪಾಪಕರ್ಮಣಾಂ ॥"

ವ್ಯಾ ಭಾ ಅ. 32 ಶ್ಲೋ 79–80

"ಧರಣಿಪತಿ ಚತ್ತ್ವರನು ಪೂರ್ವದಲೊರೆದನಿಂದ್ರಂಗಮರಗುರು
ದೇವರೊಳು ಸಂಕಲ್ಪವನು ಕೃತವಿದ್ಯರೊಳು ವಿನಯವನು ।
ಹಿರಿಯರೊಳು ಸಂಭಾವನೆಯ ಸಂಹರಣಪದವನು ಪಾಪಕಾರ್ಯದೊ
ಳಿರದೆ ಮಾಡುವುದೆಂಬ ನಾಲ್ಕನು ರಾಯ ಕೇಳೆಂದ ॥"

ಕು ವ್ಯಾ ಭಾ ಸಂ ೩ ಪ೩೪

೧೨ "ಪಂಚಾಗ್ನಯೋ ಮನುಷ್ಯೇಣ ಪರಿಚರ್ಯಾಃ ಪ್ರಯತ್ನತಃ ।
ಪಿತಾ ಮಾತಾಗ್ನಿರಾತ್ಮಾ ಚ ಗುರುಶ್ಚ ಭರತರ್ಷಭ ॥
ಪಂಚೈವ ಪೂಜಯನ್ ಲೋಕೇ ಯಶಃ ಪ್ರಾಪ್ನೋತಿ ಕೇವಲಂ ।
ದೇವಾನ್ ಪಿತೄನ್ ಮನುಷ್ಯಾಂಶ್ಚ ಭಿಕ್ಷೂನತಿಥಿಪಂಚಮಾನ್ ॥"

ವ್ಯಾ ಭಾ ಅ 32 ಶ್ಲೋ 81–82

"ಪಿತನು ಗುರು ಶಿಖಿಯಾತ್ಮ ತಾಯೆಂಬತುಳಪಂಚಾಗ್ನಿಯನು ಕ್ರಮದಿಂ
ಪ್ರತಿದಿನವು ಪರಿಚರಿಯಮಾಳ್ಪುಧು ಲೇಸ ಬಯಸುವೊಡೆ ।
ಪಿತೃಗಳನು ದೇವರನು ಭೂತಗಳತಿಥಿಗಳ ಯತಿಗಳನು ಪೂಜಿಸಿ
ಪಿತತಧರ್ಮವ ಕೀರ್ತಿಯನು ಪಡೆದವನೆ ಸುತನೆಂದ ॥"

ಕು ವ್ಯಾ ಭಾ ಸಂ ೩ಪ ೩೬

೧೩ "ಷಡ್ದೋಷಾಃ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ ।
ನಿದ್ರಾ ತಂದ್ರೀ ಭಯಂ ಕ್ರೋಧ ಆಲಸ್ಯಂ ದೀರ್ಘಸೂತ್ರತಾ ॥"

ವ್ಯಾ ಭಾ ಅ.32 ಶ್ಲೋ.85

“ ಸಿರಿಗೆ ಕಂಟಕವಾಱುದೋಷವನೊರೆವೆನಾಲಸ್ಯವನು ಭಯವನಾ
ಮಱವೆಯನು ನಿದ್ರೆಯನು ಕೋಪವ ದೀರ್ಘಸೂತ್ರತೆಯ ।
ಪರಿಹರಿಸಬಲ್ಲವನಿಪಾಲಂಗೆರವೆನಿಸದೈಶ್ವರ್ಯವವನೂ
ರ್ವರೆಯೊಳಗೆ ರಾಜೋತ್ತಮನು ಧೃತರಾಷ್ಟ್ರ ಕೇಳೆಂದ ॥”

ಕು ವ್ಯಾ ಭಾ ಸಂ ೩ ಪ ೪೩

೧೪ “ಷಡಿಮಾನ್ ಪುರುಷೋ ಜಹ್ಯಾತ್ ಭಿನ್ನಾಂ ನಾವಮಿವಾರ್ಣವೇ ।
ಅಪ್ರವಕ್ತಾರಮಾಚಾರ್ಯಂ ಅನಧೀಯಾನಮೃತ್ವಿಜಂ ॥
ಅರಕ್ಷಿತಾರಂ ರಾಜಾನಂ ಭಾರ್ಯಾಂ ಚಾಪ್ರಿಯವಾದಿನೀಂ ।
ಗ್ರಾಮಕಾಮಂ ಚ ಗೋಪಾಲಂ ವನಕಾಮಂ ಚ ನಾಪಿತಂ ॥”

ವ್ಯಾ ಭಾ ಅ 32 ಶ್ಲೋ 86–87

“ ಬಿಸುಟು ಕಳೆವುದು ನೀತಿಶಾಸ್ತ್ರವನುಸಿರದಾಚಾರಿಯನ ವೇದ
ಪ್ರಸರವಿಲ್ಲದ ಋತ್ವಿಜನ ರಕ್ಷಿಸದ ಭೂಭುಜನ ।
ಒಸೆಯದಬಲೆಯನೂರೊಳಾಡುವ ಪಶುವ ಕಾಯ್ವನನಡವಿಗುಱಿಯಹ
ನುಸಿಯ ನಾಪಿತನಿಂತಱುವರನು ರಾಯ ಕೇಳೆಂದ ॥ ”

ಕು ವ್ಯಾ ಭಾ ಸಂ ೩ ಪ ೪೬

೧೫ “ ಸತ್ಯಾಂಕಮುಪಧಾನಂ ತು ಕೃತ್ವಾ ಶೇತೇ ಜನಾರ್ದನಃ ।
ಅರ್ಜುನಾಂಕಗತೌ ಪಾದೌ ಕೇಶವಸ್ಯೋಪಲಕ್ಷಯೇ ॥ ”

ವ್ಯಾ ಭಾ ಅ 47 ಶ್ಲೋ 6

“ ದೇವನಿದ್ದನು ಸತ್ಯಭಾಮಾದೇವಿಯರ ನಸುಮಲಗಿಯರ್ಜುನ
ದೇವನಂಕದ ಮೇಲೆ ಸಿರಿಪದಕಮಲವನು ನೀಡಿ ॥ ”

ಕು ವ್ಯಾ ಭಾ ಸಂ ೫ ಪ ೫

೧೬ “ ಸತ್ಕೃತಶ್ಚಾನ್ನಪಾನಾಭ್ಯಾಂ ಅಹಂ ವೈ ಲಬ್ಧಸತ್ಕ್ರಿಯಃ ।
ಅಂಜಲಿಂ ಮೂರ್ಧ್ನಿ ಸಂಧಾಯ ಸಂದೇಶಂ ಚಾಭ್ಯಚೋದಯಂ ॥”

ವ್ಯಾ ಭಾ 47 ಶ್ಲೋ 14

“ ನಾವು ಬರಲೆಮಗುಚಿತದಲಿ ಸಂಭಾವನೆಯ ಮಾಡಿದರು ನಮಗಿ
ನ್ನಾವುದನು ನೇಮಿಸಿದಿರೆನಲಿಂತೆಂದನಸುರಾರಿ ॥ ”

ಕು ವ್ಯಾ ಭಾ ಸಂ ೫ ಪ ೫

೧೭ "ಗೋವಿಂದೇತಿ ಯದಾಕ್ರಂದತ್ ಕೃಷ್ಣಾ ಮಾಂ ದೂರವಾಸಿನಂ ।
ಋಣಂ ಪ್ರವೃದ್ಧಮಿವ ಮೇ ಹೃದಯಾನ್ನಾಪಸರ್ಪತಿ ॥"

ವ್ಯಾ ಭಾ 47 ಶ್ಲೋ 23

"ಕಮಲಮುಖಿ ಸುಲಿವಡೆದು ಲಕ್ಷ್ಮೀರಮಣ ಲಕ್ಷ್ಮೀರಮಣ ಲಕ್ಷ್ಮೀ
ರಮಣ ಎಂದೊಱಲಿದರೆ ಸಂಜಯ ನೊಂದೆ ನಾನೆಂದ ॥"

ಕು.ವ್ಯಾ ಭಾ ಸಂ ೫ ಪ ೬

೧೮ "ಕುಶಸ್ಥಲಂ ವೃಕಸ್ಥಲಂ ವಾಸಂತೀಂ ವಾರಣಾವತಂ ।
ಅವಸಾನಂ ಚ ಗೋವಿಂದ ! ಕಿಂಚಿದೇವಾತ್ರ ಪಂಚಮಂ ॥
ಪಂಚ ನಸ್ತಾತ ದೀಯಂತಾಂ ಗ್ರಾಮಾ ವಾ ನಗರಾಣಿ ವಾ ।
ವಸೇಮ ಸಹಿತಾ ಯೇಷು ಮಾ ಚ ನೋ ಭರತಾನಶನ್ ॥"

ವ್ಯಾ ಭಾ ಅ 65 ಶ್ಲೋ 21–22

"ವರಕುಶಸ್ಥಳವನು ವೃಕಸ್ಥಳಪುರವ ವಾಸಂತಿಯನು ಕೌರವ
ಧರಣಿಪಾಲನೊಳೀಸಿ ಕೊಡುವುದು ವಾರಣಾವತವ ।
ಶರಧಿಮೇರೆಯೊಳೈದನೆಯ ಪುರವರವನೊಲಿದುದ ಕೊಡಲಿ ಮನವು
ತ್ಸರವ ಮಱೆದೋಲೈಸುವೆವು ಧೃತರಾಷ್ಟ್ರಭೂಪತಿಯ ॥"

ಕು ವ್ಯಾ ಸಂ ೬ ಪ ೫

೧೯ "ಏತಚ್ಛ್ರುತ್ವಾ ಮಹಾಬಾಹುಃ ಕೇಶವಃ ಪ್ರಹಸನ್ನಿವ ।
ಅಭೂತಪೂರ್ವಂ ಭೀಮಸ್ಯ ಮಾರ್ದವೋಪಹಿತಂ ವಚಃ ॥
ಗಿರೇರಿವ ಲಘುತ್ವಂ ತತ್ ಶೀತತ್ವಮಿವ ಪಾವಕೇ ।
ಮತ್ವಾ ರಾಮಾನುಜಶ್ಶೌರಿಃ ಶಾರ್ಙ್ಗಧನ್ವಾ ವೃಕೋದರಂ ॥"

ವ್ಯಾ ಭಾ ಅ 68 ಶ್ಲೋ 1–2

"ಎಲೆ ಮಹಾದೇವಾಯ್ತು ಹಾಲಾಹಲ ಸುಧಾರಸವುಕ್ಕಿದುರಿಯು
ಗ್ಗಳವು ಶೀತಳವಾಯ್ತು ಸಿಡಿಲಾಟೋಪ ನಯವಾಯ್ತು ।
ಕೊಳುಗುಳಕೆ ಪವಮಾನನಂದನನಳುಕಿದನು ಮಝು ಮಾಯೆ ಕುಂತೀ
ಲಲನೆ ಹೆತ್ತಳು ಸುತರನೆಂದನು ಶೌರಿ ನಸುನಗುತ ॥

ಕು ವ್ಯಾ ಭಾ ಸಂ ೬ ಪ ೧೧

೨೦ "ರಥಮಾರೋಪ್ಯತಾಂ ಶಂಖಃ ಚಕ್ರಂ ಚ ಗದಯಾ ಸಹ ।
ಉಪಾಸಙ್ಗಾಶ್ಚ ಶಕ್ತ್ಯಶ್ಚ ಸರ್ವಪ್ರಹರಣಾನಿ ಚ ॥

ದುರ್ಯೋಧನೋ ಹಿ ದುಷ್ಟಾತ್ಮಾ ಕರ್ಣಶ್ಚ ಸಹಸೌಬಲಃ ।
ನ ಚ ಶತ್ರುರವಜ್ಞೇಯೋ ದುರ್ಬಲೋಽಪಿ ಬಲೀಯಸಾ ॥"
ವ್ಯಾ ಭಾ ಅ 74 ಶ್ಲೋ 12–13

" ಧನುವ ಶಸ್ತ್ರಸುದರ್ಶನಂಗಳ ಕನಕಕವಚ ಕೃಪಾಣವನು ಸೆಂ
ದನದೊಳಿರಿಸೆಂದಸುರರಿಪು ಸಾತ್ಯಕಿಗೆ ನೇಮಿಸಿದ ॥ "
ಕು ವ್ಯಾ.ಭಾ ಸಂ ೭ ಪ ೬

೨೧ " ವಾಜಿಭಿಸ್ಸೈನ್ಯಸುಗ್ರೀವಮೇಘಪುಷ್ಪಬಲಾಹಕೈಃ ।
ಸೂತಸ್ಸಂಪಾದಯಾಂಚಕ್ರೇ ಸಂಪನ್ನೈಸ್ಸರ್ವಸಂಪದಾ ॥ "
ವ್ಯಾ ಭಾ ಅ 74 ಶ್ಲೋ 19

" ಘನಬಳಾಹಕ ಸೈನ್ಯಸುಗ್ರೀವನನು ನಿರ್ಮಳ ಮೇಘಪುಷ್ಪನ
ನನುವಿನಲಿ ಹೂಡಿದನು ಸಾತ್ಯಕಿ ಹೇಮಮಯರಥಕೆ ॥
ಕು ವ್ಯಾ ಭಾ ಸಂ ೭ ಪ ೬

೨೨ "ಮಮ ಪುತ್ರಾಶ್ಚ ಪೌತ್ರಾಶ್ಚ ಸರ್ವೇ ದುರ್ಯೋಧನಾದೃತೇ ।
ಪ್ರತ್ಯುದ್ಯಾಸ್ಯಂತಿ ದಾಶಾರ್ಹಂ ರಥೈರ್ವ್ಯಷ್ಟೈಸ್ಸ್ವಲಂಕೃತಾಃ ॥"
ವ್ಯಾ ಭಾ ಅ 76 ಶ್ಲೋ 14

"ಎಲೆ ವಿದುರ ಕೇಳ್ಸೈ ಸುಯೋಧನನುಳಿಯಲಖಿಳಮಹಾಮಹೀಶರು
ನಳಿನನಾಭನನಿದಿರುಗೊಳಲಿ " ಕು ವ್ಯಾ ಭಾ ಸಂ ೭ ಪ ೧೭

೨೩ "ಯತ್ತತ್ ಸತ್ಕಾರಸಂಯುಕ್ತಂ ದೇಯಂ ವಸು ಜನಾರ್ದನೇ ।
ಅನೇಕರೂಪಂ ರಾಜೇಂದ್ರ । ತನ್ನ ದೇಯಂ ಕದಾಚನ ॥ "
ವ್ಯಾ ಭಾ ಅ 77 ಶ್ಲೋ ೩

" ತೆಗೆದ ವಸ್ತುವನೀಯದಿರು ಹರಿ ಹಗೆ ಕಣಾ "
ಕು ವ್ಯಾ ಭಾ ಸಂ ೭ ಪ ೧೮

೨೪ " ಇದಂ ತು ಸುಮಹತ್ಕಾರ್ಯಂ ಶೃಣು ಮೇ ಯತ್ ಸಮರ್ಥಿತಂ ।
ಪರಾಯಣಂ ಪಾಂಡವಾನಾಂ ನಿಯಂಸ್ಯಾಮಿ ಜನಾರ್ದನಂ ।
ತಸ್ಮಿನ್ ಬದ್ಧೇ ಭವಿಷ್ಯಂತಿ ವೃಷ್ಣಯಃ ಪೃಥಿವೀ ತಥಾ ।
ಪಾಂಡವಾಶ್ಚ ವಿಧೇಯಾ ಮೇ ಸ ಚ ಪ್ರಾತರಿಹೇಷ್ಯತಿ ॥ "
ವ್ಯಾ ಭಾ ಅ 77 ಶ್ಲೋ 13–14

" ನಗರಿಗಾತನು ಬರಲಿ ಯಾದವನಗಡುತನಕೌಷಧಿಯ ಬಳ್ಳಿನು
ಬಿಗಿದು ಕೆಡಹುವೆನೆಂದು ನುಡಿದನು ಕೌರವರ ರಾಯ ॥ "

ಕು ವ್ಯಾ.ಭಾ ಸಂ ೭ ಪ ೧೮

೨೫ " ಪಾಪಸ್ಯಾಸ್ಯ ನೃಶಂಸಸ್ಯ ತ್ಯಕ್ತಧರ್ಮಸ್ಯ ದುರ್ಮತೇಃ ।
ನೋತ್ಸಹೇऽನರ್ಥಸಂಯುಕ್ತಾಃ ಶ್ರೋತುಂ ವಾಚಃ ಕಥಂಚನ ॥
ಇತ್ಯುಕ್ತ್ವಾ ಭರತಶ್ರೇಷ್ಠೋ ವೃದ್ಧಃ ಪರಮಮನ್ಯುಮಾನ್ ।
ಉತ್ಥಾಯ ತಸ್ಮಾತ್ ಪ್ರಾತಿಷ್ಠತ್ ಭೀಷ್ಮಸ್ಸತ್ಯಪರಾಕ್ರಮಃ ॥ "

ವ್ಯಾ.ಭಾ ಅ. 77. ಶ್ಲೋ 22–23

" ಈತ ನುಡಿವೀ ಮಾತಕೇಳಲು ಪಾತಕವು ಬಹುದೆಂದು ಗಂಗಾ
ಜಾತನೋಲಗದಿಂದ ಸರಿದನು ತನ್ನ ಮಂದಿರಕೆ ॥ "

ಕು ವ್ಯಾ ಭಾ ಸಂ. ೭ ಪ ೧೯

೨೬ " ಅವತೀರ್ಯ ರಥಾಚ್ಛೌರಿಃ ಕೈಲಾಸಶಿಖರೋಪಮಾತ್ ।
ನಗಮೇಘಪ್ರತೀಕಾಶಾಂ ಜ್ವಲಂತೀಮಿವ ತೇಜಸಾ ॥ "

ವ್ಯಾ ಭಾ ಅ 81. ಶ್ಲೋ 45

" ಸುರಗಿರಿಯ ತುದಿಯಿಂದ ಮುರಿಮಿಂಚುಗಳ ಮುಗಿ
ಲಿಳಿದಂತೆ ಭೂತಳಕೆ ಅಂದು ನೀಲಾಚಲನಿಕಾಯದ
ಸುಂದರಾಂಗದ ಕೌಸ್ತುಭಪ್ರಭೆಯಿಂದ ಕಾಂಚನರಥವ
ನಿಳಿದನು ದಾನವಧ್ವಂಸಿ ॥ " ಕು ವ್ಯಾ ಭಾ ಸಂ ೮ ಪ ೬೨

೨೭ " ಸಂಪ್ರೀತಿಭೋಜ್ಯಾನ್ಯನ್ನಾನಿ ಆಪದ್ಭೋಜ್ಯಾನಿ ವಾ ಪುನಃ ।
ನ ಚ ಸಂಪ್ರೀಯಸೇ ರಾಜನ್ । ನ ಚೈವಾಪದ್ಗತಾ ವಯಂ ॥ "

ವ್ಯಾ ಭಾ ಅ 79 ಶ್ಲೋ 27

"ಪ್ರಿಯದಲುಂಬುದು ಮೇಣು ವಿಪದಾಶ್ರಯದಲುಂಬುದು ಮಾನನರಿಗಿದು
ನಿಯತವಂತಲ್ಲದುವೆ ಕೇಳ್ಕೈ ಕೌರವರರಾಯ ।
ಪ್ರಿಯನು ನೀನೆಮಗಲ್ಲ ವಿಪದಾಶ್ರಯವು ತಾ ಮುನ್ನಿಲ್ಲ ನಿನ್ನಾ
ಲಯದೊಳೆಂತೆಮಗೂಟ ಸಂಭವಿಸುವುದು ಹೇಳೆಂದ ॥ "

ಕು ವ್ಯಾ ಭಾ ಸಂ ೮ ಪ ೭೫

೨೮ " ದ್ವಿಷದನ್ನಂ ನ ಭೋಕ್ತವ್ಯಂ ದ್ವಿಷಂತಂ ನೈವ ಭೋಜಯೇತ್ ।
ಪಾಂಡವಾನ್ ದ್ವಿಷಸೇ ರಾಜನ್ ಮಮ ಪ್ರಾಣಾಹಿ ಪಾಂಡವಾಃ ॥"

ವ್ಯಾ ಭಾ ಅ 79. ಶ್ಲೋ 34

" ಹಗೆಯನುಣಿಸುವುದಾಗದೈ ವೈರಿಗಳ ನಿಳಯದೊಳನ್ನಪಾನಾ
ದಿಗಳ ಕೊಳಲಾಗದು ನಿದಾನಿಸೆ ರಾಜನೀತಿಯಿದು ।
ಬಗೆಯೆ ನೀ ಪಾಂಡವರಿಗಹಿತನು ವಿಗಡಪಾಂಡವರೆನ್ನ ಜೀವನ
ಹಗೆಯ ನಂಬುವೆನೆಂತು ಹೇಳೈ ಕೌರವರರಾಯ ॥ "

ಕು ವ್ಯಾ ಭಾ ಸಂ ೮ ಪ ೭೬

೨೯ " ದುರ್ಯೋಧನ । ನ ಶೋಚಾಮಿ ತ್ವಾಮಹಂ ಭರತರ್ಷಭ ।
ಇಮೌ ತು ವೃದ್ಧೌ ಶೋಚಾಮಿ ಗಾಂಧಾರೀಂ ಪಿತರಂ ಚ ತೇ ॥
ಯಾವನಾಥೌ ಭವಿಷ್ಯೇತೇ ತ್ವಯಾ ನಾಥೇನ ದುರ್ಹೃದಾ ।
ಹತಮಿತ್ರೌ ಹತಾಮಾತ್ಯೌ ಲೂನಪಕ್ಷಾವಿವಾಂಡಜೌ ॥
ಭಿಕ್ಷುಕೌ ವಿಚರಿಷ್ಯೇತೇ ಶೋಚಂತೌ ಪೃಥಿವೀಮಿಮಾಂ ॥ "

ವ್ಯಾ ಭಾ ಅ 112 ಶ್ಲೋ 20–21–22

" ಕಡೆಗೆ ಧೃತರಾಷ್ಟ್ರಾವನೀಶನು ಮಡದಿಸಹಿತಲನಾಥನಾಗಿಯೆ
ಕೆಡುವನೆಂಬುದ ಬಲ್ಲೆನಾ ಪಾಂಡವರ ರಾಜ್ಯದಲಿ ।
ಪಡಿಗ ಪವಮಾನಜನ ಸಮುಖದ ಪಡೆಯದಿಹತರುವಾಯ ನಿನಗದು
ನಡಸಿಕೊಡುವುದು ತಪ್ಪದಕಟಕಟೆಂದನಾ ವಿದುರ ॥ "

ಕು ವ್ಯಾ ಭಾ ಸಂ ೯, ಪ ೩೪

೩೦ " ಯಾವದ್ಧಿ ತೀಕ್ಷ್ಣಯಾ ಸೂಚ್ಯಾ ವಿಧ್ಯೇದಗ್ರೇಣ ಮಾಧವ ।
ತಾವದಪ್ಯಪರಿತ್ಯಾಜ್ಯಂ ಭೂಮೇರ್ನಃ ಪಾಂಡವಾನ್ ಪ್ರತಿ ॥ "

ವ್ಯಾ ಭಾ ಅ 114 ಶ್ಲೋ 26

" ನೆಲನ ಕಡೆಯಲಿ ಮುಳ್ಳುಮೊನೆಯುಚ್ಚಳಿಪ ಧರಣಿಯ
ನಿತ್ತೆನಾದಡೆ ಬಳಿಕ ನೀ ನಗು ಹೋಗು "

ಕು ವ್ಯಾ ಭಾ ಸಂ ೯ ಪ ೩೨

೩೧ "ಏವಂ ಬ್ರುವತಿ ದಾಶಾರ್ಹೇ ದುರ್ಯೋಧನಮಮರ್ಷಣಂ ।
ದುಶ್ಶಾಸನ ಇದಂ ವಾಕ್ಯಂ ಅಬ್ರವೀತ್ ಕುರುಸಂಸದಿ ॥
ನ ಚೇತ್ ಸಂಧಾಸ್ಯಸೇ ರಾಜನ್ ಸ್ವೇನ ಕಾಮೇನ ಪಾಂಡವೈಃ ।
ಬಧ್ವಾ ಕಿಲ ತ್ವಾಂ ದಾಸ್ಯಂತಿ ಕುಂತೀಪುತ್ರಾಯ ಕೌರವಾಃ ॥
ವೈಕರ್ತನಂ ತ್ವಾಂ ಚ ಮಾಂ ಚ ತ್ರೀನೇತಾನ್ ಮನುಜರ್ಷಭ ।
ಪಾಂಡವೇಭ್ಯಃ ಪ್ರದಾಸ್ಯಂತಿ ಭೀಷ್ಮೋ ದ್ರೋಣಃ ಪಿತಾ ಚ ತೇ ॥ "

ವ್ಯಾ ಭಾ ಅ 115 ಶ್ಲೋ 23–24–25

" ಮಾನದ ಸಂಕೇತದಲಿ ದುರ್ಯೋಧನನ ಕಟ್ಟಲು ವಿದುರ ಗಂಗಾ
ತನಯ ಧೃತರಾಷ್ಟ್ರಾವನಿಪರಾಲೋಚಿಸಿದ ಹದನ ।
ಮನದೊಳರಿದನು ಬಳಿಕ ದುಶ್ಶಾಸನನು ದುರ್ಯೋಧನಗೆ
ಯಿನಿಬರನೆನಹ ಬಿನ್ನಹವಮಾಡಿದನು ಖಾತಿಯಲಿ ಕಳವಳಿಸೆ ॥"

ಕು ವ್ಯಾ ಭಾ ಸಂ ೯ ಪ ೩೫

೩೨ "ಅಂಗುಷ್ಠಮಾತ್ರಾಸ್ತ್ರಿದಶಾ ಬಭೂವುಃ ಪಾವಕಾರ್ಚಿಷಃ ।
ತಸ್ಯ ಬ್ರಹ್ಮಾ ಲಲಾಟಸ್ಥೋ ರುದ್ರೋ ವಕ್ಷಸಿ ಚಾಭವತ್ ॥
ಲೋಕಪಾಲಾ ಭುಜೇಷ್ವಾಸನ್ನಗ್ನಿರಾಸ್ಯಾದಜಾಯತ ।
ಆದಿತ್ಯಾಶ್ಚೈವ ಸಾಧ್ಯಾಶ್ಚ ವಸವೋಽಥಾಶ್ವಿನಾವಪಿ ॥
ಮರುತಶ್ಚ ಸಹೇಂದ್ರೇಣ ವಿಶ್ವೇದೇವಾಸ್ತಥೈವ ಚ ।
ಬಭೂವುಶ್ಚೈವ ಯಕ್ಷಾಶ್ಚ ಗಂಧರ್ವೋರಗರಾಕ್ಷಸಾಃ ॥
ಪ್ರಾದುರಾಸ್ತಾಂ ತದಾ ದೋರ್ಭ್ಯಾಂ ಸಂಕರ್ಷಣಧನಂಜಯೌ ।
ದಕ್ಷಿಣೇ ಚಾರ್ಜುನೋ ಧನ್ವೀ ಹಲೀ ರಾಮಶ್ಚ ಸವ್ಯತಃ ॥
ಭೀಮೋ ಯುಧಿಷ್ಠಿರಶ್ಚೈವ ಮಾದ್ರೀಪುತ್ರೌ ಚ ಪೃಷ್ಠತಃ ।
ಅಂಧಕಾ ವೃಷ್ಣಯಶ್ಚೈವ ಪ್ರದ್ಯುಮ್ನಪ್ರಮುಖಾಸ್ತತಃ ॥
ಅಗ್ರೇ ಬಭೂವುಃ ಕೃಷ್ಣಸ್ಯ ಸಮುದ್ಯತಮಹಾಯುಧಾಃ ।
ನೇತ್ರಾಭ್ಯಾಂ ನಾಸಿಕಾಭ್ಯಾಂ ಚ ಶ್ರೋತ್ರಾಭ್ಯಾಂ ಚ ಸಮಂತತಃ ।
ಪ್ರಾದುರಾಸನ್ ಮಹಾರೌದ್ರಾಃ ಸಧೂಮಾಃ ಪಾವಕಾರ್ಚಿಷಃ ॥
ರೋಮಕೂಪೇಷು ಚ ತಥಾ ಸೂರ್ಯಸ್ಯೇವ ಮರೀಚಯಃ ॥"

ವ್ಯಾ ಭಾ ಅ 118 ಶ್ಲೋ 5–10, 12, 13

"ಚರಣದುಂಗುಟದಲ್ಲಿ ದೇವರು ತುಟುಗಿದರು ನೊಸಲನಲಿ ಕಮಲಜ
ನುರದಲಗ್ಗದ ರುದ್ರನಾಸ್ಯದೊಳಗ್ನಿವಾಯುಗಳು ।
ಬೆರಳಲಿಂದ್ರಾದಿಗಳು ನಯನಾಂಬುರುಹದಲಿ ರವಿ ನಾಭಿಯಲಿ ನಭ
ವರಭುಜಾಗ್ರದೊಳಖಿಳದಿಗುಪಾಲಕರು ರಂಜಿಸಿತು ॥
ಸುರರು ಖಚರರು ಕಿನ್ನರರು ಕಿಂಪುರುಷರನುಪಮಸಿದ್ಧ ವಿದ್ಯಾ
ಧರರು ವಸುಗಳು ಮನುಗಳಾದಿತ್ಯರು ಭುಜಂಗಮರು ।
ಗರುಡಗಂಧರ್ವಾಶ್ವಿನೀದೇವರು ಸವಿಶ್ವೇದೇವರಖಿಲಾ
ಪ್ಸರೆಯರೆಸೆದರು ರೋಮರೋಮದ ಕುಳಿಯ ಚೌಕದಲಿ ॥
ಬಲದಭುಜದಲಿ ಪಾರ್ಥನೆಡದಲಿ ಹಲಧರನು ಚರಣದಲಿ ಧರ್ಮಜ
ಕಲಿವೃಕೋದರ ನಕುಲ ಸಹದೇವಾದಿ ಯಾದವರು ।
ಲಲಿತಕಾಂತಿಯೊಳಖಿಳತಾರಾವಳಿಗಳಮಳಗ್ರಹವಿರಲು ತೊಳ
ತೊಳಗಿ ಮೆಱೆದನು ವಿಶ್ವರೂಪವಿಹಾರಿ ಮುರವೈರಿ ॥

"ಕಿವಿಗಳಲಿ ಕಂಗಳಲಿ ನಾಸಾವಿವರದಲಿ ಹೊಗೆ ಮಸಗಿ ದಳ್ಳುರಿ
ತಿವಿದುದಾಕಾಶವನು ಕವಿದುದು ಕಾಂತಿ ದೆಸೆದೆಸೆಗೆ।
ರವಿಯು ತಗಡೆನೆ ತಳಿತವಾಯುಧನಿವಹ ಸಾಸಿರಭುಜದ ಬಹುಳತೆ
ಯವಗಡಿಸಿ ವೈಕುಂಠನೆಸೆದನು ವಿಶ್ವರೂಪದಲಿ ॥"

ಕು ವ್ಯಾ ಭಾ ಸಂ ೯ ಪ ೬೦–೬೩

೩೩. "ತದ್ದೃಷ್ಟ್ವಾ ಮಹದಾಶ್ಚರ್ಯಂ ಮಾಧವಸ್ಯ ಸಭಾತಲೇ।
ದೇವದುಂದುಭಯೋ ನೇದುಃ ಪುಷ್ಪವರ್ಷಂ ಪಪಾತ ಚ ॥"

ವ್ಯಾ ಭಾ ಅ 118 ಶ್ಲೋ 18

"ಅರಳಮಳೆ ಸೂಸಿದವು ದುಂದುಭಿ ಮೊರೆದುದಾಕಾಶದಲಿ
ಮುದದಲಿ"

ಕು ವ್ಯಾ ಭಾ ಸಂ ೯ ಪ ೬೪

## ಪಂಪಭಾರತ–ಕುಮಾರವ್ಯಾಸಭಾರತ

ಕುಮಾರವ್ಯಾಸನು ಪಂಪನನ್ನು ಹಲವು ವಿಚಾರಗಳಲ್ಲಿ ಅನುಸರಿಸಿರುತ್ತಾನೆ ಇದನ್ನು ಮೂರುಪಂಗಡಗಳನ್ನಾಗಿ ವಿಭಾಗಿಸಬಹುದು

೧ ಗ್ರಂಥರಚನೆ ೨ ವರ್ಣನೆ ಮತ್ತು ಭಾವಾನುವಾದ
೩ ಕಥಾಸಂದರ್ಭ

### ೧ ಗ್ರಂಥರಚನೆ

(1) ಪಂಪನು ತನಗೆ ಹಿಂದಿದ್ದ ಯಾವ ಕವಿಯನ್ನೂ ಭಾರತಕಾವ್ಯದಲ್ಲಿ ಸ್ತುತಿಸಿಲ್ಲ

"ವ್ಯಾಸಮುನೀಂದ್ರ ರುಂದ್ರವಚನಾಮೃತವಾರ್ಧಿಯು
ನೀಸುವೆಂ ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ"

ಎಂದು ವ್ಯಾಸನನ್ನುಮಾತ್ರ ಸ್ಮರಿಸಿರುತ್ತಾನೆ ಪಂಪನಂತೆಯೇ ಕುಮಾರವ್ಯಾಸನು ಹಿಂದಿದ್ದ ಯಾವ ಕವಿಯನ್ನೂ ತನ್ನ ಗ್ರಂಥದಲ್ಲಿ ಸ್ತುತಿಸಿಲ್ಲ

"ತರಳನನು ತನ್ನವನೆನಿಸಿ ಪತಿಕರಿಸಿ ಮಗನೆಂದೊಲಿದು ಕರುಣದಿ
ವರವನಿತ್ತನು ದೇವ ವೇದವ್ಯಾಸಮುನಿರಾಯ।"

---

ಪಂಪಭಾರತದಲ್ಲಿ ಉದ್ಯೋಗಪರ್ವದ ಕಥೆ ಒಂಬತ್ತನೆಯ ಆಶ್ವಾಸದಲ್ಲಿದೆ.

"ವಿದ್ಯಾಶರಧಿ ವೇದವ್ಯಾಸಮುನಿ ಮಾಳ್ಕೆಮಗೆ ಸನ್ಮತಿಯ"
ಎಂದು ವೇದವ್ಯಾಸರನ್ನು ಸ್ತುತಿಸಿರುತ್ತಾನೆ.

(ii) ಪಂಪನು, "ಪೆಱವುಮುಪಾಖ್ಯಾನಕತೆಗಳೊಳವೊಂದಂ
ಕುಂದಲೀಯದೆ ಪೇಳ್ದಂ"

"ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾರತಮನಪೂರ್ವಮಾಗೆ ಸಲೆ ಪೇಳ್ದ ಕವೀಶ್ವರರಿಲ್ಲ" ಎಂದು ಹೇಳಿಕೊಂಡಿರುತ್ತಾನೆ

ಕುಮಾರವ್ಯಾಸನಿಗೆ ತಾನು ಪಂಪನಿಗಿಂತಲೂ ಹೆಚ್ಚು ಪ್ರಸಿದ್ಧಿ ಪಡೆಯಬೇಕೆಂಬ ಆಶೆ ಇದ್ದಿರಬಹುದು. ಅದಕ್ಕಾಗಿಯೇ ಈತನು *ವ್ಯಾಸ ಭಾರತದಲ್ಲಿ ಪ್ರಾಸಂಗಿಕವಾಗಿ ಹೇಳಿರುವ ಉಪಾಖ್ಯಾನಗಳನ್ನೂ ತನ್ನ ಗ್ರಂಥದಲ್ಲಿ ಒಂದೊಂದು ಪದ್ಯದಿಂದಲೇ ತಿಳಿಸುತ್ತಾನೆ

(iii) ಪಂಪನು ತಾನು ರಚಿಸಿರುವ ಭಾರತದ ಒಂಬತ್ತನೆಯ ಆಶ್ವಾಸದಲ್ಲಿ ಪಾಂಡವರ ಸೇನೆಯು ಕುರುಕ್ಷೇತ್ರದಲ್ಲಿ ಬೀಡುಬಿಟ್ಟವರೆಗಿನ ಕಥಾಭಾಗವನ್ನು ಹೇಳಿರುತ್ತಾನೆ ಮೂಲಭಾರತದ ಉದ್ಯೋಗಪರ್ವ ದಲ್ಲಿರುವ, ಕೌರವಸೇನೆ ಯುದ್ಧಭೂಮಿಗೆ ಬರುವುದು, ಭೀಷ್ಮನಿಗೆ ಸೇನಾನಾಯಕಪಟ್ಟಕಟ್ಟುವುದು ಈ ಕಥಾಭಾಗಗಳನ್ನು ಹತ್ತನೆಯ ಆಶ್ವಾಸದಲ್ಲಿ ಹೇಳಿರುತ್ತಾನೆ ಈ ಅಂಶದಲ್ಲಿ ಕುಮಾರವ್ಯಾಸನು ತಾನೂ ಪಂಪನನ್ನೇ ಅನುಸರಿಸಿ ಪಾಂಡವಸೇನೆಯು ಕುರುಕ್ಷೇತ್ರಕ್ಕೆ ಬಂದು ನೆಲಸುವವರೆಗಿನ ಕಥಾಭಾಗವನ್ನು ಮಾತ್ರ ಉದ್ಯೋಗಪರ್ವದಲ್ಲಿ ತಿಳಿಸುತ್ತಾನೆ

(iv) ಕೃಷ್ಣನು ದುರ್ಯೋಧನನನ್ನು ಕಾಣಲು ಬರುವ ಸುದ್ದಿಯನ್ನು ವಿದುರನು ಆತನಿಗೆ ತಿಳಿಸಲು, ಮಾರನೆಯ ದಿನ ದುರ್ಯೋಧನನೇ ಸಭೆಯನ್ನು ರಚಿಸಿದನೆಂದು ಪಂಪನು ತಿಳಿಸಿರುವ ಸನ್ನಿವೇಶವನ್ನೇ ಕುಮಾರವ್ಯಾಸನೂ ಅನುಸರಿಸಿರುತ್ತಾನೆ

## ೨ ವರ್ಣನೆ ಮತ್ತು ಭಾವಾನುವಾದ

(i) "ಸೀತೆಯ ದೂಸಱಿಂದಳಿದ ರಾವಣನಂತಿರೆ ನೀನು ಮಾಗಳ್" ಪಂ ಭಾ ೪ ೯ ಪ ೪೯

---

*ಉದ್ಯೋಗಪರ್ವದಲ್ಲಿ ಬರುವ ಈ ಪ್ರಾಸಂಗಿಕ ಉಪಾಖ್ಯಾನಗಳಲ್ಲಿ ಪಂಪನು ಒಂದನ್ನೂ ತನ್ನ ಭಾರತದಲ್ಲಿ ತಿಳಿಸಿಲ್ಲ ಕುಮಾರವ್ಯಾಸನು ವಿದುಲೋಪಾಖ್ಯಾನವನ್ನು ಬಿಟ್ಟು ಉಳಿದೆಲ್ಲ ಉಪಾಖ್ಯಾನಗಳನ್ನೂ ಹೇಳಿರುತ್ತಾನೆ ಉಪಾಖ್ಯಾನಗಳ ಹೆಸರನ್ನು ಮುಂದೆ ಪುಟ lxxxi ರಲ್ಲಿ ಕೊಟ್ಟಿದೆ.

"ರಾವಣನ ಪರಿ ನೆಲಸಿತಿವನೊಳು ಸಾವಿಗಂಜುವನಲ್ಲ"
ಕು ವ್ಯಾ ಭಾ ಸಂ ೮ ಪ ೫೩

(ii) "ನಾಮೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆ"
ಪಂ ಭಾ ಆ ೯ ಪದ್ಯ ೪೮ ಆದಮೇಲೆ ಇರುವ ಗದ್ಯ

"ನಿಮ್ಮ ಗರುಡಿಯಲಿ ಎನಗೆ ಶ್ರಮವುಂಟು"
ಕು ವ್ಯಾ ಭಾ ಸಂ ೧ ಪ ೪೨

(iii) "ತೊಲಗದೆ ಗೋವುಗಾದ ಕಿಱಿಯಂದಿನ ಗೋಪಿಕೆ ನಿನ್ನ ಚಿತ್ತದೊಳ್"
ಪಂ ಭಾ ಆ ೯ ಪ ೪೪

"ದನವ ಕಾವುದು ತೀರಿತೇ" ಕು ವ್ಯಾ ಭಾ ಸಂ ೯ ಪ ೩೩

"ಗೋವಳಿಗತನ ನಿಮ್ಮ ಮೈಸಿರಿ"
ಕು ವ್ಯಾ ಭಾ ಸಂ ೮ ಪ ೬೯

(iv) "ಭಾಗಮನಾಸೆವಟ್ಟಳಿಪಿ ಬೇಳ್ಪುದು ನಿನ್ನ ಕಲ್ತವಿದ್ಯೆ"
ಪಂ ಭಾ ಆ ೯ ಪ ೪೭

"ಬೇಡಲಱಿವನು" ಕು ವ್ಯಾ ಭಾ ಸಂ ೯ ಪ ೯

(v) "ತತ್ಸಯೋಧನನೊಡ್ಡೋಲಗಮಿಂದ್ರನೋಲಗಮುಮಂ ಕೀಳ್ಮಾಡಿ ಕಣ್ಗೊಪ್ಪುಗುಂ"
ಪಂ ಭಾ ಆ ೯ ಪ ೨೯

"ಅಮರಾವತಿಯ ರಾಯನ ಸಭೆಯ ಗೆಲಿದುದು ಕೌರವಾಸ್ಥಾನ"
ಕು ವ್ಯಾ ಭಾ ಸಂ ೮ ಪ ೪೨

"ಭೂಪಾಲನೋಲಗವೆಸೆದುದಿಂದ್ರನ ಸಭೆಗೆ ವೆಗ್ಗಳಿಸಿ
ಕು ವ್ಯಾ ಭಾ ಸಂ ೨ ಪ ೨೮

(vi) "ನುಡಿದಂ ಪಾಸುಂ ಪೊಕ್ಕುಂ ಪರೆದು ಸಭಾಸದನಂ ತೊಳಗಿ ಬೆಳಗೆ ದಂತಪ್ರಭೆಗಳ್"
ಪಂ ಭಾ ಆ ೯ ಪ ೩೪

"ತೊಳಪ ದಶನಮಯೂಖತತಿ ಹೊಳೆಹೊಳೆಯೆ ನುಡಿದನು"
ಕು ವ್ಯಾ ಭಾ ಸಂ ೮ ಪ ೭೮

(vii) "ಕಾದದೆ ಪನ್ನಗಧ್ವಜನಿಳಾತಳಮಂ ಕುಡಂ"
ಪಂ ಭಾ ಆ ೯ ಪ ೧೮

ಕಾಳಗದೊಳಲಗಿನ ಮೊನೆಯೊಳಲ್ಲದೆ ಮಹಿಯ ಕೊಡುವನೆ
ಇರವೇಶ್ವರನು"          ಕು ವ್ಯಾ ಭಾ ಸಂ ೧ ಪ ೧೦

(viii) "ತೊಡೆಸೋಂಕಿ ಕುಳ್ಳಿರಿಸಿ"

ಪಂ ಭಾ ಅ ೯ ಪದ್ಯ ೨೮ ಆದಮೇಲೆ ಇರುವ ಗದ್ಯ

"ತೊಡೆಸೋಂಕಿನಲಿ ಸಾರಿದು" ಕು ವ್ಯಾ ಭಾ ಸಂ ೧೦ ಪ ೨

(ix) "ಮಱುದಿವಸಂ ನೇಸಱ್ ಮೂಡಿದಾಗಳಾದಿತ್ಯನಂತನೇಕ ಮಣಿಮಯೂಖವಿಜೃಂಭ[ಮಾ]ಣಾಖಂಡಳ ವಿಳಂಬಿತಾಭೀಳ ಕೋದಂಡ ವಿಳಾಸವಿಭ್ರಮ ಸಿಂಹಾಸನಾಸೀನನುಂ ಪ್ರಮದಾಹಸ್ತವಿನ್ಯಸ್ತ ವಾಮ ಕ್ರಮುಕಮಳನುಮನವರತಸ್ಫುರಿತ ತಾರಕಾಕಾರ ಮುಕ್ತಾಭರಣ ಕಿರಣ ನಿಕರವಿಳಸಿತವಿಶಾಲೋರಸ್ಥಳನುಮನಂತಸಾಮಂತಮುಕುಟ ಮಾಣಿಕ್ಯ ಮಯೂಖಮಂಜರೀಜಾಳಪಲ್ಲವಿತಾಸ್ಥಾನಮಂಟಪನುಮಾಗಿ ಸಭಾಮಂಟಪದೊಳೊಡ್ಡೋಲಗಂಗೊಟ್ಟಿಡೆವಱಿಯದವರವರ ಪಡೆದ ಪ್ರತಿಪತ್ತಿಗಳ ನಱಿದಿಕ್ಕಿದ ಲೋಹಾಸನಂಗಳೊಳಂ ಮಣಿಖಚಿತ ಕನಕಪೀಠಂಗಳೊಳಂ ಕಟ್ಟಿದ ಚಿನ್ನದ ಬೊಂದರಿಗೆಯೊಳಂ ಭೀಷ್ಮದ್ರೋಣಾಶ್ವತ್ಥಾಮಕೃಪ ಕೃತವರ್ಮ ಶಲ್ಯ ಶಕುನಿ ಬಾಹ್ಲೀಕ ಸೋಮದತ್ತ ಭಗದತ್ತ ಭೂರಿ ಶ್ರವಃ ಪ್ರಭೃತಿಗಳನಿರಿಸಿ ಮತ್ತಮನೇಕದೇಶಾಧೀಶ್ವರರರೆಲ್ಲರುಮನೆಡೆ ಯಱಿದು ಕುಳ್ಳಿರಿಸಿ ಪೆಂಡವಾಸದೊಳ್ವೆಂಡಿರನೆರಡೋಳಿಯೊಳಮಿರಿಸಿ ನೂರ್ವರ್ ತಮ್ಮಂದಿರುಮಂ ಪಿಂತಿರಿಸಿ ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಮಂ ಮುಂತಿರಿಸಿ ಯುವರಾಜನಪ್ಪಣುಗದುಶ್ಶಾಸನನುಮನಂಗ ರಾಜನಪ್ಪಣುಗಾಳ್ ಕರ್ಣನುಮನೆರಡುಂ ಕೆಲದೊಳಂ ತೊಡೆಸೋಂಕೆ ಕುಳ್ಳಿರಿಸಿ"

ಪಂ ಭಾ ಅ ೯ ಪದ್ಯ ೨೮ ಆದಮೇಲೆ ಇರುವ ಗದ

"ಜಾಳಿಸಿತು ತಮ ಮೂಡಣಾದ್ರಿಯ ಮೇಲೆ ತಲೆದೋಱಿದನು ರವಿ
ಭೂಪಾಲ ಕೌರವನಂದಿನೊಡ್ಡೋಲಗವ ರಚಿಸಿದನು ।
ಕರಸಿದನು ಮಣಿಮುಕುಟಕಿರಣದ ಗರುವರನು ಗಾಢಪ್ರತಾಪರ
ಬರಿಸಿದನು ತೂಕದ ಮಹಾಮಂಡಳಿಕಮನ್ನೆಯರ ।
ಧುರವಿಜಯಸಿದ್ಧರನು ಚಾಮೀಕರದ ಗದ್ದುಗೆಯಖಿಳಸಾವಂ
ತರನು ಪೃಥ್ವೀಪಾಲರನು ನೆರಹಿದನು ಕುರುರಾಯ ॥

ಬಲದಗದ್ದುಗೆಗಳಲಿ ಭಟರಗ್ಗಳೆಯರವಿಸುತ ನದಿಯಮಗ ನೃಪ
ತಿಲಕ ದುಶ್ಶಾಸನ ಕೃಪದ್ರೋಣಾದಿನಾಯಕರು ।
ಹೊಳೆವ ರತುನದ ಸಾಲಮಕುಟದ ಚೆಲುವಿಕೆಯ ಸೌರಂಭದಲಿ ಗಜ
ಗಲಿಸಿದರು ಮಾಣಿಕ್ಯಮಯಭೂಷಣವಿಲಾಸದಲಿ ।
ಮದವದತಿಬಲಶಕುನಿ ಸೈಂಧವನದಟನೃಪಕಾಂಭೋಜನತಿಸಂ
ಪದನು ಭೂರಿಶ್ರವ ಸುಲೋಚನ ವೀರವೃಷಸೇನ ।
ಕದನಕಾಲಾನಲರು ವರಹೇಮದಮಕುಟದವರರಸನೆಡವಂ
ಕದಲಿ ಕುಳ್ಳಿರ್ದರು ಮಹಾಯಾಸ್ಥಾನರಚನೆಯಲಿ ॥
ತರುಣಶೃಂಗಾರದ ಸಭಾಬಂಧುರದ ನೂರ್ವರು ಕೌರವೇಂದ್ರನ
ವರಕುಮಾರರು ಮಂದೆ ಮೆಱೆದರು ಲಕ್ಷಣಾದಿಗಳು ।
ವರಕಿರೀಟದ ಕಾಲತೊಡರಿನ ಕೊರಳಪದಕದ ಕೈಯಸುರಗಿಗ
ಳರಸನನುಜರು ನೂರ್ವರೆಡವಂಕದಲಿ ಮೋಹಿದರು ॥
ಮಿಸುಪ ತಮ್ಮ ಮುಖೇಂದುವನು ಸೈರಿಸದ ಚಂದ್ರನ ಕಿತ್ತು ನಭದಲಿ
ಬಿಸುಟು ಬೇರ್ಗಳ ಹಿಡಿದರೋ ಹೇಳೆನಲು ಸಭೆಯೊಳಗೆ ।
ಶಶಿವದನೆಯರ ಕೈಯಸೀಗುರಿಯೆಸೆದುದಿಕ್ಕೆಲದಲಿ ಸುಯೋಧನ
ವಸುಮತೀಶನ ವೈಭವದಲಾಸ್ಥಾನ ಚೆಲುವಾಯ್ತು ॥"

ಕು ವ್ಯಾ ಭಾ ಸಂ ೮ ಪ ೨೮–೩೪

(x) "ಕರಮೆನಗುಱಿದಿರ್ಕುಮೆ ನಿನ್ನ ಪೇಳ್ದ ಧರ್ಮಶ್ರವಣಂ"

ಪಂ ಭಾ ಆ ೬ ಪ ೪೫

"ಧರ್ಮಶ್ರವಣಕೋಸುಗ ಬಾರೆವಾವ್"

ಕು ವ್ಯಾ ಭಾ ಸಂ ೧ ಪ೩೧

(xi) "ಮುನ್ನಱುಪಿಂಗಳ್ ಜಱುಚುತ್ತುಮಿರ್ಪುದೆ"

ಪಂ ಭಾ ಆ೬ ಪ ೬೨

"ಗಜಬಜಿಸಲೇಕಿನ್ನಾಱುತಿಂಗಳೆ"

ಕು ವ್ಯಾ ಭಾ ಸಂ ೧೧ ಪ.೧೧

## ೩ ಕಥಾಸಂದರ್ಭ

ಕುಮಾರವ್ಯಾಸನು ಔಚಿತ್ಯವರಿತು ಪಂಪಭಾರತದ ಕೆಲವು ಕಥಾ ಸಂದರ್ಭಗಳನ್ನು ತಾನೂ ಉಪಯೋಗಿಸಿಕೊಂಡಿರುತ್ತಾನೆ.

೧ *ಪ್ರಧಾನಕಾರ್ಯಮಂ ತಮ್ಮೊಳಾಳೋಚಿಸಿ ವಿಕ್ರಮಾರ್ಜುನನಂ ನೀನೆ ಪೋಗಲ್ವೇಳ್ಕುಮೆಂಬುದುಮಪ್ರತಿರಥಂ ರಥಮನೇಱಿ ಮನಃಪವನವೇಗದಿಂ ದ್ವಾರಾವತಿಯನೆಯ್ದಿ ರಾಜಮಂದಿರಮಂ ಪೊಕ್ಕು ದುಗ್ಧಾಬ್ಧಿಧವಳಶಯ್ಯಾತಳದೊಳ್ ಮಱೆದೊಱಗಿದ ಮಧುಮಥನನೆತ್ತಲಣ್ಮದೆ ಕಾಲದೆಸೆಯೊಳುಸಿರದೆ ಕುಳ್ಳಿರೆ ದುರ್ಯೋಧನನುಮಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ ಕಿಱಿದಾನುಂ ಬೇಗದಿಂ ”

ಪಂ.ಭಾ ಆ ೯ ಪದ್ಯ ೧೦ ಆದಮೇಲಿರುವ ಗದ್ಯ

‘ ಧರ್ಮಜನಳುಕಿ ಕಳುಹಿದನಿಂದ್ರನಂದನನ”

ಕು ವ್ಯಾ ಭಾ ಸಂ ೧ ಪ೧೭

“ಮುಕುಳಕರಪುಟನಾಗಿ ಭಯಭರ ಚಕಿತಚಿತ್ತಶರೀರನಬುಜಾಂ
ಬಕನನೆಬ್ಬಿಸಲಮ್ಮದೊಯ್ಯನೆ ಚರಣಸೀಮೆಯಲಿ ।
ಅಕುಟಿಲನು ಸಾರಿದನು ಬಳಿಕೀ ವಿಕಳದುರ್ಯೋಧನನು ನಿಗಮ
ಪ್ರಕರಮೌಳಿಯ ಮೌಳಿಯತ್ತಲು ಸಾರ್ದ ಮಂಡಿಸಿದ ॥ ”

ಕು ವ್ಯಾ ಭಾ ಸಂ೧ ಪ ೨೪

೨. † “ನೀವಿರ್ವರುಂ ಬಂದಂದಮುಮಾ ಮನೆವಾಳ್ತೆಯುಂ ಪೇಳಿಮೆಂ ದೊಡೆಮ್ಮೆಮ್ಮಂ ಕೆಯ್ಕೊಂಡು ಗಲಿಸಲ್ವೇಳ್ಕುಮೆಂದು ಬಂದೆವು ”

ಪಂ ಭಾ ಆ ೯ ಪದ್ಯ ೧೧ ಆದಮೇಲಿರುವ ಗದ್ಯ

“ಕಡುಮಾನ್ಯರೆಮ್ಮಾಲಯಕೆ ಬರವೇನೆನಲು ಕುರುರಾಯ
ನಿಂತೆಂದ ’ ಕು ವ್ಯಾ ಭಾ ಸಂ ೧ ಪ ೨೬

“ಸೋದರರ ಮನ ಕದಡಿದವು ದಾಯಾದವಿಷಯದೊಳಿಂದು
ಧರಣಿಗೆ ಕಾದುವೆವು ನೀವಿಬ್ಬರಿಗೆ ಬಲವಾಗಬೇಕೆಂದ”

ಕು ವ್ಯಾ 'ಭಾ ಸಂ ೧ ಪ ೨೭

---

* ವ್ಯಾಸಭಾರತದಲ್ಲಿ “ ಅರ್ಜುನನನ್ನು ದ್ವಾರಕಿಗೆ ಯಾರೂ ಕಳುಹಿಸುವುದಿಲ್ಲ ಆತನು ತಾನಾಗಿಯೇ ಹೋಗುತ್ತಾನೆ ದುರ್ಯೋಧನನು ಮೊದಲು ಹೋಗಿ ಕೃಷ್ಣನ ತಲೆಯ ಹತ್ತಿರ ಕುಳಿತುಕೊಂಡಿರಲು ಅರ್ಜುನನು ಆತನ ಪಾದದ ಹತ್ತಿರಕ್ಕೆ ಹೋಗುತ್ತಾನೆ” ಎಂದಿದೆ

† ವ್ಯಾಸಭಾರತದಲ್ಲಿ ‘ತಾನು ಮೊದಲು ಬಂದಿರವ ಕಾರಣ ತನಗೆ ಸಹಾಯ ಮಾಡಬೇಕು ಎಂದು ದುರ್ಯೋಧನನು ಹೇಳುತ್ತಾನೆ” ಎಂದಿದೆ

೩ *"ಅಂತು ವಿದುರನಜನನುಚಿತ ಪ್ರತಿಪತ್ತಿಗಳಿಂ ಸಂತಸಂಬಡಿಸಿ ಬಂದ ಬರವನಾಗಳೆ ಸುಯೋಧನಂಗಱಿಪುವುದುಂ ರಾಜರಾಜನುಱಿದೆ ಕಿಱುನಗೆ ನಕ್ಕು ನಾಳಿನೋಲಗದೊಳ್ ತಂದು ಕಾಣಿಸೆಂಬುದಂ"

ಪಂ ಭಾ ಆ ೯ ಪದ್ಯ ೨೮ ಆದಮೇಲಿರುವ ಗದ್ಯ

"ವಿದುರನ ಕರೆದು ಕೌರವನರಮನೆಯ ಸಮಯವನು
ನೋಡಿದು ಹೇಳು ನಮಗೆಂದ" ಕು ವ್ಯಾ ಭಾ ಸಂ ೮ ಪ ೨೪

"ಎನಲು ಕುರುಕುಲಸಾಗರಾಗ್ನಿಯ ಮನೆಗೆ ಬಂದನು ವಿದುರ ಹರಿ
ಬೆಸಸೆ" ಕು ವ್ಯಾ ಭಾ ಸಂ ೮ ಪ ೨೫

"ಓಲಗದೊಳಿರ್ದಖಿಳಮೂರ್ಖರ ಮೌಳಿಯನು ಕಂಡವಧರಿಸು ಸಿರಿ
ಲೋಲ ಬಿಜಯಂಗೈಯಲವಸರವುಂಟೆ ಹೇಳೆನಲು ।
ನಾಳೆ ಕಾಣಿಸಿಕೊಂಬೆವಿಂದೇನು" ಕು ವ್ಯಾ ಭಾ ಸಂ ೮ ಪ ೨೬

"ನಾಳೆ ಬರಹೇಳೆಂದು ವಿದುರನ ಬೀಳುಕೊಟ್ಟನು"

ಕು ವ್ಯಾ ಭಾ ಸಂ ೮ ಪ ೨೮

೪ "ಎಳ್ವೋಗು ದೂತನಪ್ಪನ
ಬೆಳ್ಪನೆ ನುಡಿಗೇಳ್ದು ಮುಳಿಯಲಾಗದು ನೀನುಂ ।
ಮೆಳ್ಪಟ್ಟು ವಿದುರನೆಂಬೀ
ತೊಳ್ಪುಟ್ಟಿಯ ಮನೆಯ ಕೂಳೆ ನುಡಿಯಿಸೆ ನುಡಿದೈ ॥"

ವಚನ —ಎನೆ ವಿದುರನತಿಕುಪಿತಮನನಾಗಿ—

† "ಕಡುಮುಳಿದು ನಿನ್ನ ತೊಡೆಗಳ
ನುಡಿವೆಡೆಯೊಳ್ ಭೀಮಸೇನನಾನಾಪದದೊಳ್ ।
ಪಿಡಿಯಲ್ಕೆಂದಿರ್ದನಿದಂ
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ ॥"

ಪಂ ಭಾ ಆ ೯ ಪ ೫೮–೫೯

---

ವ್ಯಾಸಭಾರತದಲ್ಲಿ ವಿದುರನು ದುರ್ಯೋಧನನಿಗೆ ಕೃಷ್ಣನು ಬಂದಿರುವ ಸುದ್ದಿಯನ್ನು ತಿಳಿಸುವ ಸನ್ನಿವೇಶವಿಲ್ಲ ದುರ್ಯೋಧನನೇ ಕೃಷ್ಣನನ್ನು ಸಭೆಗೆ ಕರೆದುಕೊಂಡು ಹೋಗುತ್ತಾನೆ

† ಈ ಪ್ರಸಂಗ ವ್ಯಾಸಭಾರತದಲ್ಲಿಲ್ಲ

"ಈ ಕೃಪನನೀ ದ್ರೋಣನೀ ಗಂಗಾಕುಮಾರನ ಮನೆಯ ಹೊಗದವಿ
ವೇಕಿ ತೊತ್ತಿನಮಗನ ಮನೆಯಲಿ ಹಸಿವ ನೂಕಿದಿರಿ ।"

ಕು ವ್ಯಾ ಭಾ ಸಂ ೮ ಪ ೭೧

"ಕಡುಮುಳಿದು ಕಲಿಭೀಮ ನಿನ್ನಯ ತೊಡೆಗಳನು ಮುಱಿವಾ ಸಮಯದಲಿ
ಬಿಡದೆ ನಿನ್ನನು ಕಾಯಬೇಕೆಂದುಳುಹಿದೆನು ಧನುವ ।
ಕೆಡೆನುಡಿಸಿಕೊಂಡಿನ್ನು ಕಾವೆನೆ ಪೊಡವಿಪತಿ ಕೇಳೆನುತ ವಿದುರನು
ಹಿಡಿದ ಬಿಲ್ಲನು ಮುಱಿದನಾ ಕುರುಸೇನೆ ಕಳವಳಿಸೆ ॥"

ಕು ವ್ಯಾ ಭಾ ಸಂ ೮ ಪ ೭೩

೫ "ನೀಮುಂ ನಿಮ್ಮ ಚೆಚ್ಚಿಲಮಗನಪ್ಪ ಸೂರ್ಯಸೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿಬನ್ನಿಮೆಂದು ಕೊಂತಿಯಂ ಬೀಳ್ಕೊಂಡು ಪರಕೆಯಂ (ಕೈಕೊಂ)ಡು ರಥಾಂಗಧರಂ ರಥಮನೇಱಿ ಕರ್ಣನ ಮನೆಯ ಮುಂದನೆ ಬಂದು ಮೇಲೆ ಬಿ(ದ್ದಿ)ಮ್ಮಂ ಕಿಱಿದಂತರಂ ಕಳಿಪಿ ಮಗುಳ್ವೆ ಬಾ ಪೋಪಮೆಂದು ತನ್ನೊಡನೆ ರಥಮ ನೇಱಿಸಿಕೊಂಡು ಪೋಗಿ ಮುಂದೊಂದೆಡೆಯೊಳ್"

ಪಂ ಭಾ ೮೯ ಪದ್ಯ ೭೩ ಆದಮೇಲಿರುವ ಗದ್ಯ

*"ನಿನ್ನಯ ಕಂದ ಕರ್ಣನ ಬೇಡಿಕೊಳು ನೀನೆಂದು ಸೂಚಿಸಿ
ಮರಳಿದನು ಮುರವೈರಿ" ಕು ವ್ಯಾ ಭಾ ಸಂ ೯ ಪ ೭೮

"ನಿಂದು ತಾ ರವಿಸುತನ ಕರೆದನು ರಥದ ಹೊರೆಗಾಗಿ ।
ಬಂದು ಕಿಱಿದೆಡೆಗಾಗಿ ಕಳುಹುವುದೆಂದು ನೇಮಿಸಿ"

ಕು ವ್ಯಾ ಭಾ ಸಂ ೯ ಪ ೮೧

"ಇನತನೂಜನ ಕೂಡೆ ಮೈದುನತನದ ಸರಸವನೆಸಗಿ ರಥದೊಳು
ದನುಜರಿಪು ಬರಸೆಳದು ಕುಳ್ಳಿರಿಸಿದನು ಪೀರದಲಿ॥"

ಕು ವ್ಯಾ ಭಾ ಸಂ ೧೦ ಪ ೧

---

* ಕೃಷ್ಣನು ಕ ಂತಿಗೆ ಕರ್ಣನನ್ನು ಬೇಡುವಂತೆ ಸೂಚಿಸುವುದು ವ್ಯಾಸ ಭಾರತದಲ್ಲಿಲ್ಲ

೬ "ಅವಾರ್ಯವೀರ್ಯಂ ಸೂರ್ಯದಿನದಂದು ಮಂದಾಕಿನಿಯಂ ಮಾಯಲೆಂದು ಬಂದು ಅಘಮರ್ಷಣಪೂರ್ವಕಂ ಮಿಂದು ಕನಕಪಾತ್ರ ದೊಳ್ ತೆಕ್ಕನೆ ತೀವಿದ ಕನಕಕಮಳಂಗಳಿಂದಾದಿತ್ಯತೇಜನಾದಿತ್ಯಂಗರ್ಘ್ಯ ಮೆತ್ತಿ ಸೂರ್ಯಜಂ ಸೂರ್ಯಮಂತ್ರಂಗಳನೋದಿ ನೀರಂ ಸೂಸಿ ತ್ರಿಃ ಪ್ರದಕ್ಷಿಣಂ ಗೆಯ್ವಾಗಳ್"—ಪಂ ಭಾ ೮ ೯ ಪದ್ಯ ೭೨ ಆದಮೇಲಿರುವ ಗದ್ಯ. "ಅಂತು ಕಂಡು ಸಾಷ್ಟಾಂಗವೆಱಗಿ ಪೊಡವಟ್ಟ ನಿಜನಂದನನ ನಳ್ಕಱಿಂದಪ್ಪಿಕೊಂಡು ಪರಮಾಶೀರ್ವಚನಂಗಳಿಂ ಪರಸಿದಳ್" ಆಗ "ಗಂಗಾದೇವಿಯುಂ ದಿವ್ಯಮೂರ್ತಿಯಂ ಕೆಯ್ಕೊಂಡು ಬಂದು—

ಒಪ್ಪಿಸಿದೆಂ ಕೆಯ್ಯೆಡೆಯೆಂ<br>
ದಪ್ಪೈಸಿದ ನಿನ್ನ ಮಗನನೀಗಳೆ ನಿನಗೆಂ ।<br>
ದಪ್ಪೈಸಿ ಗಂಗೆ ಪೋಪುದು<br>
ಮೊಪ್ಪುವ ನಿಜಬಿಂಬದೊಳಗಣಿಂದ ದಿನಪಂ ॥

ಪೊಱಮಟ್ಟು ಬರಲ್ ತನ್ನಡಿ<br>
ಗೆಱಗಿದ ನಿಜಸುತನನಕ್ಕಱಿಂ ಪರಸಿ ಮನಂ ।<br>
ಮಱುಗಿ ರವಿ ನುಡಿದನೆನ್ನುಮ<br>
ನುಱದೆ ಮರುಳ್ಮಗನೆ ಹರಿಗೆ ಕವಚಮನಿತ್ತೈ ।

ನುಡಿಯೆನದಂ ನಿನ್ನಂಬಿಕೆ<br>
ಪಡೆಮಾತೇಂ ಕೊಂತಿ ಹರಿಯ ಮತದಿಂ ಕಾಯ ।<br>
ಲ್ಕೊಡರಿಸಿ ಬಂದಳ್ ಸುತರಂ<br>
ಕುಡದಿರ್ ಪುರಿಗಣೆಯನೆನಿತು ಲಲ್ಲೈಸಿದೊಡಂ ॥

ಎಂದರವಿಂದಪ್ರಿಯಸಖ ।<br>
ನಂದಂಬರತಳಮನಡರ್ವುದುಂ ಕೆಯ್ಮುಗಿದಿಂ । ತೆಂದಂ"

ಪಂ ಭಾ ಆ ಪ ೭೬—೭೯

"ವೀರರವಿಸುತನೊಂದುದಿನ ರವಿವಾರದಲಿ ಪರಿತೋಷ ಮಿಗೆ ಭಾ<br>
ಗೀರಥೀ ತೀರದಲಿ ತಾತಂಗರ್ಘ್ಯವನು ಕೊಡುತ ।<br>
ಸೌರಮಂತ್ರವ ಜಪಿಸುತಿರಲೌದಾರಿಯದ ಸುರತರುವೆ ಕುಂತೀ<br>
ನಾರಿ ಕಾಣಲು ಬಂದಳಾತ್ಮಜನಿದ್ದ ನದಿಗಾಗಿ ॥<br>
ಬರಲು ತಾಯ್ಗಿದಿರಾಗಿ ರವಿಸುತನಿರದೆ ಬಂದನು ದಂಡದಂತಿರೆ<br>
ಚರಣದಲಿ ಮೈಯಿಕ್ಕಲಾತನ ನೊಸಲ ನೆಗಹಿದಳು ।<br>
ಬರಸೆಳೆದು ಬಿಗಿಯಪ್ಪಿದಳು ನೀರುರವಣಿಸಿದವು ನಯನದಲಿ<br>
ಸೆರೆ ಕೊರಳಿಗೇಕಿದುದಳಲನಬುಧಿಯೊಳದ್ದಳಾ ಕುಂತಿ ।

ಆ ಸಮಯದಲಿ ಗಂಗೆ ನಾರೀವೇಷದಲಿ ನಡೆತಂದಳೆಲೆ ಕುಂ
ತೀಸತಿಯ ಕೆಯ್ಯೆಡೆಯ ಕಂದನನೊಪ್ಪುಗೊಳು ನೀನು।
ಈಸುದಿನವಿವನಾಗುಹೋಗಿನ ಗಾಸಿಯನು ತಲೆಗಾಯ್ದೆನೆನ್ನಯ
ಭಾಷೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ॥
ಇರಲಿರಲು ರವಿ ಬಂದನೆಕ್ಕಟಿಗರೆದನೀತನ ಕಿವಿಯೊಳೆಲ್ಲವ
ನೊರೆದು ನಿನಗೆಲೆ ಮಗನೆ ಕುಂತೀದೇವಿ ತಾಯಹಳು।
ಮುರಹರನ ಮತದಿಂದ ನಿನ್ನಯ ಸರಳ ಬೇಡಲು ಬಂದಳಂದಿನ
ಹರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ॥
ಬೆಸಸಿತಕ್ಕೆ ಹಸಾದವೆಂದನು ಬಿಸಜಬಂಧುವ ಕಳುಹಿದನು"

ಕು ವ್ಯಾ ಭಾ ಸಂ ೧೦ ಪ ೨೭-೩೧

೭ "ಪಿಡಿಯೆಂ ಪುರಿಗಣೆಯಂ ನರ
ನೆಡೆಗೊಂಡೊಡಮುಳಿದ ನಿನ್ನ ಮಕ್ಕಳನಿನ್ನೇ।
ರ್ದೊಡಮಳಿಯೆಂ ಪೆರ್ಜಸಮನೆ
ಪಿಡಿದೆನ್ನನೆ ರಣದೊಳಳಿವೆನಿರದಡಿಯೆತ್ತೆಂ॥

ಪಂ ಭಾ ಆ ೯ ಪ ೮೭

"ಆದಡೈವರುಮಕ್ಕಳನು ತಲೆಗಾದು ತೋಱೈ ಕಂದ"
ಹೋದಬಾಣವ ಮರಳಿತೊಡದಿರು ಮಾದುಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಂಡನು ಬಂದನರಮನೆಗೆ॥"

ಕು ವ್ಯಾ ಭಾ ಸಂ ೧೦ ಪ ೩೭

---

* ವ್ಯಾಸಭಾರತದಲ್ಲಿ ಗಂಗೆಯು ಕರ್ಣನನ್ನು ಕುಂತಿಗೆ ಒಪ್ಪಿಸುವ ಕಥಾಭಾಗವಿಲ್ಲ ಸೂರ್ಯನು ಕರ್ಣನಿಗೆ ಕಿವಿಯಲ್ಲ ಕುಂತಿಯು ಸರಳನ್ನು ಬೇಡಲು ಬಂದಿರುವಳೆಂದೂ, "ನೀನು ಮರುಳಾಗಬೇಡ" ಎಂದೂ ತಿಳಿಸುವುದಿಲ್ಲ,

"ಸತ್ಯಮಾಹ ಪೃಥಾ ವಾಕ್ಯಂ ಕರ್ಣ ಮಾತೃವಚಶ್ಶೃಣು।
ಶ್ರೇಯಸ್ತೇ ಸ್ಯಾನ್ನರವ್ಯಾಘ್ರ ಸರ್ವಮಾಚರತಸ್ತಥಾ॥"

ವ್ಯಾ ಭಾ ಅ 133 ಶ್ಲೋ 2

"ಕರ್ಣ! ಕುಂತಿಯು ಹೇಳಿರುವ ಮಾತು ಸತ್ಯ, ತಾಯಿಯ ಮಾತನ್ನು ಕೇಳು. ಅದರಂತೆ ನಡೆದರೆ ನಿನಗೆ ಶ್ರೇಯಸ್ಸುಂಟಾಗುತ್ತದೆ" ಎಂದು ಸೂರ್ಯನು ಹೇಳುತ್ತಾನೆ

* ೮ "ಒಂದಕ್ಷೋಹಿಣೀಬಲಂ ಬೆರಸು ತಲೆಬಳಿವಳಿಯೆಂದಭಿಮನ್ಯುಗೆ ಕೂಸಂ ಕೊಟ್ಟ ಜಟ್ಟಿಗಂ ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ ಶತಾನೀಕ ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪನ್ನೊರ್ವರ್ ತಮ್ಮಂದಿರುಂ ಬೆರಸು ನೆಲನದಿರೆ ಮುಂಗೋಳೊಳ್ ನಡೆಯೆ"

ಪಂ ಭಾ ಆ ೯ ಪದ್ಯ ೯೫ ಆದಮೇಲೆ ಇರುವ ಗದ್ಯ

"ವರವಿರಾಟನು ಕಂಬುನೃಪನುತ್ತರ ಶತದ್ಯುಮ್ನಕನು ಶತಚಂ
ದ್ರರು ಶತಾನೀಕರು ಶತಾಯುಧರೆನಿಪ ಮತ್ಸ್ಯಪರು ।
ತುರಗಗಜರಥಪಾಯದಳ ಸಾಗರದ ಸಂರಂಭದಲಿ ನಿಜಸಂ
ವರಣೆಯನು ತೋಱಿದರು ತಮ್ಮಕ್ಷೋಹಿಣೀ ಬಲವ ॥"

ಕು ವ್ಯಾ ಭಾ ಸಂ ೧೧ ಪ ೨೩

"ದ್ರೌಪದಿಯ ಕೊಟ್ಟ ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋಹಿಣೀಬಲಂ ಬೆರಸು ದ್ರುಪದಂ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಃಪುರುಕುತ್ಸವಿಚಿತ್ರಾದಿಗಳಪ್ಪ ತನ್ನ ಮಕ್ಕಳ್ವೆರಸು ನೆಲಂ ಮೂರಿವಿಟ್ಟಂತೆ ಬಲವಕ್ಕದೊಳ್ ನಡೆಯೆ"

ಪಂ ಭಾ

"ವರಯುಧಾಮನ್ಯೂತ್ತಮೌಜಸರುರುಶಿಖಂಡಿ ಸುಚೇಕಿತಾನರು
ಧುರಧುರಂಧರ ವೀರಪಾಂಚಾಲಕ್ಷಿತೀಶ್ವರರು ।
ದಟ್ಟಕ್ಷೋಹಿಣಿಯ ತೋಱಿದನು ಪಾಂಚಾಲ ॥"

ಕು ವ್ಯಾ ಭಾ ಸಂ ೧೧ ಪ ೨೨

---

* ವ್ಯಾಸಭಾರತದಲ್ಲಿ—

"ಸಂಗ್ರಾಮೇ ನ ಹನಿಷ್ಯಾಮಿ ತೇ ಸುತಾನ್ ।
ಯುಧಿಷ್ಠಿರಂ ಚ ಭೀಮಂ ಚ ಯಮೌ ತಾವರ್ಜುನಾದೃತೇ ॥"

ಅ 133 ಶ್ಲೋ 20

"ನ ತೇ ಜಾತು ನ ಶಿಷ್ಯಂತಿ ಪುತ್ರಾಃ ಪಂಚ ಯಶಸ್ವಿನೀ ।"

ಅ 133 ಶ್ಲೋ 23

"ಅರ್ಜುನನನ್ನು ಬಿಟ್ಟು ಉಳಿದವರನ್ನು ಯುದ್ಧದಲ್ಲಿ ಕೊಲ್ಲುವುದಿಲ್ಲ ಅಂತೂ ನಿನ್ನ ಐದುಮಕ್ಕಳು ನಾಶವಾಗುವುದಿಲ್ಲ ಅಂದರೆ ಕರ್ಣಾರ್ಜುನರಲ್ಲಿ ಒಬ್ಬನು ಉಳಿಯುವುದರಿಂದ ಐದುಮಕ್ಕಳು ಮಾತ್ರ ಇದ್ದಂತಾಯಿತು" ಎಂದಿದೆ

" ಕೇಕಯವಿಷಯಾಧೀಶ್ವರರಪ್ಪ ಕೈಕಯರಯ್ವರುಮೊಂದಕ್ಷೋಹಿಣೀಬಲದೊಡನೆ ಸಿಡಿಲನುರುಳಿಮಾಡಿದಂತು ಪಿಂಗೋಲೊಳ್ ನಡೆಯೆ, ಪಾಂಡ್ಯಂ ಶ್ರೀಜಯ ಸೋಮಕರೊಡನೊಂದಕ್ಷೋಹಿಣೀ ಬಲಂಬೆರಸು ಸುತ್ತಿಱಿದು ಬಳಸಿಬರೆ"

ಪಂ ಭಾ

"ಜಯಸಮರ ಸಾಮಗ್ರ್ಯಬಲ ಕೈಕಯನೃಪಾಲರು ತಮ್ಮೊಳಕ್ಷೋ
ಣಿಯನು ತೋಱಿದರಂದು ಗಜಕಂಧರದ ಭೂಪತಿಗೆ।
ಭಯವಿಹೀನನು ಪಾಂಡ್ಯನೃಪ ಸೃಂಜಯನು ಸೋಮಕಭೂಪರಕ್ಷೋ
ಣಿಯನು ತೋಱಿದರವನಿ ಕುಸಿದುದು ದಳದ ಪದಹತಿಗೆ॥"

ಕು ವ್ಯಾ ಭಾ ಸಂ ೧೧ ಪ ೨೪

"ಹಿಡಿಂಬೆಗಂ ಭೀಮಂಗಂ ಪುಟ್ಟಿದ ಮಗಂ ಘಟೋತ್ಕಚ
ನಱುವತ್ತೆಂಟುಕೋಟಿರಾಕ್ಷಸಬಲಂ ಬೆರಸು ಬರೆ" ಪಂ ಭಾ

" ಭಾರಿದೇಹನು ಭಟಭಯಂಕರ ತೋರಹತ್ತನು ದೈತ್ಯಮಯ ಪರಿ
ವಾರಬಹುಳದಿ ಬಂದು ಕಂಡನು ಕಲಿಘಟೋತ್ಕಚನು॥"

ಕು ವ್ಯಾ ಭಾ ಸಂ ೧೧ ಪ ೨೮

"ಕೊಂತಿಯ ಮಾವನಪ್ಪ ಕೊಂತಿಭೋಜನುಂ ಸೋಮಕಂ
ಬೆರಸೊಂದಕ್ಷೋಹಿಣೀಬಲಂ ಬೆರಸು ಬರೆ"

ಪಂ ಭಾ ಆ ೯ ಪದ್ಯ ೯೫ ಆದಮೇಲೆ ಇರುವ ಗದ್ಯ

* "ತೋಱಿದನು ಕುಂತೀಭೋಜನಕ್ಷೋಣಿ"

ಕು ವ್ಯಾ ಭಾ ಸಂ ೧೧ ಪದ್ಯ ೨೫

## ಭಾಸನ ದೂತವಾಕ್ಯ—ಕುಮಾರವ್ಯಾಸ ಭಾರತ

ಕುಮಾರವ್ಯಾಸನು ಪಂಪಭಾರತದಿಂದ ಕೆಲವು ಕಥಾಸನ್ನಿವೇಶಗಳನ್ನು ಆರಿಸಿಕೊಂಡಿರುವಂತೆ, ಭಾಸನ ದೂತವಾಕ್ಯದಿಂದಲೂ ಕೆಲವು ಸನ್ನಿವೇಶಗಳನ್ನು ಆರಿಸಿಕೊಂಡಿರುತ್ತಾನೆ

---

* ವ್ಯಾಸಭಾರತದಲ್ಲಿ ಈ ರಾಜರ ಹೆಸರುಗಳೂ, ಮತ್ತು ವಿವರಗಳೂ ಇಲ್ಲ.

೧. ದೂ. ವಾ —

"ವಾಸುದೇವಃ–ಭೋಃ ಸುಯೋಧನ । ಕಿಮಾಸ್ಸೇ ।

ದುರ್ಯೋಧನಃ–(ಆಸನಾತ್ ಪತಿತ್ವಾ ಆತ್ಮಗತಂ) ಸುವ್ಯಕ್ತಂ ಪ್ರಾಪ್ತ ಏವ ಕೇಶವಃ ।

ಉತ್ಸಾಹೇನ ಮತಿಂ ಕೃತ್ವಾಪ್ಯಾಸೀನೋಽಸ್ಮಿ ಸಮಾಹಿತಃ ।
ಕೇಶವಸ್ಯ ಪ್ರಭಾವೇನ ಚಲಿತೋಽಸ್ಮ್ಯಾಸನಾದಹಂ ॥"

ಕು ವ್ಯಾ ಭಾ —

* " ಕಡುಕುಮತಿ ಕೌರವನಿಳಿಯದಿರ್ದನು ಸಿಂಹವಿಷ್ಟರವ "

ಸಂ ೮ ಪ.೬೩

"ಸೆಣಸುಸೇರದ ದೇವನಿದಿರಲಿ ಮಣಿಯದಾತನ ಕಾಣುತವೆ ಧಾ
ರಿಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ ।
ಮಣಿಖಚಿತಕಾಂಚನದ ಪೀಠದ ಗೋಣಸು ಮುರಿದುದು ನಭದಿ ಸುರಸಂ
ದಣಿಗಳಾ ಎನೆ ಕೆಡೆದು ಬಿದ್ದನು ಹರಿಯ ಚರಣದಲಿ ॥"

ಸಂ ೮ ಪ ೬೪

೨ ದೂ ವಾ —

ದುರ್ಯೋಧನಃ–ಕಥಂ ಯಾಸ್ಯತಿ ಕಿಂ ಕೇಶವಃ । ದುಶ್ಶಾಸನ ! ದುರ್ಮರ್ಷಣ ! ದುರ್ಮುಖ ! ದುರ್ಬುದ್ಧೇ ! ದುಷ್ಟೇಶ್ವರ ! ದೂತ ಸಮುದಾಚಾರಮತಿಕ್ರಾಂತಃ ಕೇಶವೋ ಬಧ್ಯತಾಂ । ಕಥಮಶಕ್ತಾಃ । ದುಶ್ಶಾಸನ । ನ ಸಮರ್ಥಃ ಖಲ್ವಸಿ । ಅಯಮಶಕ್ತಃ । ಮಾತುಲ । ಬಧ್ಯತಾಮಯಂ ಕೇಶವಃ। ಕಥಂ ಪರಾಙ್ಮುಖಃ ಪತತಿ। ಭವತು, ಅಹಮೇವ ಪಾಶೈರ್ಬಧ್ನಾಮಿ ।

---

* ದುರ್ಯೋಧನನು ಆಸನದಿಂದ ಉರುಳಿಬೀಳುವ ಸನ್ನಿವೇಶ ವ್ಯಾಸಭಾರತದಲ್ಲಿಲ್ಲ ಭಾಸನ ದೂತವಾಕ್ಯದಲ್ಲೂ ಆಸನದಿಂದ ಬಿದ್ದನೆಂದಿದೆಯೇ ವಿನಾ ಕೃಷ್ಣನ ಕಾಲುಗಳಮೇಲೆ ಬಿದ್ದನೆಂದಿಲ್ಲ

ಪಂಪಭಾರತದಲ್ಲಿ, ದುರ್ಯೋಧನನು ಆಸನದಿಂದ ಉರುಳುವ ಸನ್ನಿವೇಶವು ಈ ಪ್ರಕರಣದಲ್ಲಿಲ್ಲ ವಿದುರನು ಬಿಲ್ಲನ್ನು ಮುರಿದ ಬಳಿಕ ಖತಿಗೊಂಡ ದುರ್ಯೋಧನನು ಕೃಷ್ಣನಮೇಲೆ ಬೀಳುವ ಸಂದರ್ಭದಲ್ಲಿ—

"ಸುಯೋಧನಂ ತನ್ನ ಬಲದ ತೋಳುಡಿದಂತಾಗಿ ಸಿಗ್ಗಾಗಿ ಬಾಳಂ ಕಿಳ್ತುದಱು ಮನದೊಳಾದೇವದಿಂ ದೇವಕೀನಂದನನ ಮೇಲೆವಾಯ್ವುದಂ ನಂಜನ ಮೇಲೆ ವಾಯ್ವ ನೊಳವಿನಂತುರುಳ್ತರೆ ಪಾಯ್ದು" ಎಂದು ಪಂ ಭಾ ೯ ಪದ್ಯ ೫೫ ಆದಮೇಲಿರುವ ಗದ್ಯದಲ್ಲಿ ಉರುಳುವ ಸನ್ನಿವೇಶವಿದೆ

ಆಃ ತಿಷ್ಠೇದಾನೀಂ । **ಕಥಂ ನದೃಷ್ಟಃ ಕೇಶವಃ ।** ಅಯಂ ಕೇಶವಃ । ಅಹೋ ಹ್ರಸ್ವತ್ವಂ ಕೇಶವಸ್ಯ । ಆಃ ತಿಷ್ಠೇದಾನೀಂ ಕಥಂ ನ ದೃಷ್ಟಃ ಕೇಶವಃ । ಅಯಂ ಕೇಶವಃ । ಅಹೋ ದೀರ್ಘತ್ವಂ ಕೇಶವಸ್ಯ । ಕಥಂ ನ ದೃಷ್ಟಃ ಕೇಶವಃ । ಅಯಂ ಕೇಶವಃ । **ಸರ್ವತ್ರ ಮಂತ್ರ ಶಾಲಾಯಾಂ ಕೇಶವಾ ಭವಂತಿ** । ಕಿಮಿದಾನೀಂ ಕರಿಷ್ಯೇ । ಭವತು ದೃಷ್ಟಂ । ಭೋ ! ಭೋ ! ರಾಜಾನಃ । ಏಕೇನೈಕಃ ಕೇಶವೋ ಬಧ್ಯತಾಂ । ಕಥಂ ಸ್ವಯಮೇವ ಪಾಶೈರ್ಬದ್ಧಾಃ ಪತಂತಿ ರಾಜಾನಃ ।"

* **ಕು ವ್ಯಾ ಭಾ** ––

"ಒಳಗೆ ಹೊಳೆದನು ಬಾಹ್ಯದಲಿ ಪ್ರಜ್ವಲಿಸಿದನು ತಾನಲ್ಲದನ್ಯರ
ಬಳಕೆ ಬೇರೊಂದಿಲ್ಲದಂತಿರೆ ಕೂಡೆ ತೋರಿದನು ।
ಒಳಗೆ ಬಿಗಿವೆವೊ ಹೊರಗೆ ಕೃಷ್ಣನ ಸಿಲುಕಿಸುವೆವೋ ತಿಳಿಯೆ ಕೃಷ್ಣರು
ಹಲಬರಾಗಿಹರಾರ ಕಟ್ಟುವೆವೆಂದರಾ ಖಳರು ॥" ಸಂ ೯ ಪ ೬೭

೩ **ದೂ ವಾ** ––

" ದುರ್ಯೋಧನಃ––

ವನೇ ಪಿತೃವ್ಯೋ ಮೃಗಯಾಪ್ರಸಂಗತಃ
ಕೃತಾಪರಾಧೋ ಮುನಿಶಾಪಮಾಪ್ತವಾನ್ ।
ತದಾಪ್ರಭೃತ್ಯೇವ ಸದಾರನಿಸ್ಪೃಹಃ
ಪರಾತ್ಮಜಾನಾಂ ಪಿತೃತಾಂ ಕಥಂ ವ್ರಜೇತ್ ॥ "

[ದಾರನಿಸ್ಪೃಹನಾಗಿರುವ ಪಾಂಡುವು ಇತರರಿಂದ (ದೇವತೆಗಳಿಂದ) ಹುಟ್ಟಿದ ಇವರಿಗೆ ಹೇಗೆ ತಾನೆ ತಂದೆ ಆಗಬಲ್ಲ ?]

ಈ ಅಭಿಪ್ರಾಯವನ್ನೇ ಕುಮಾರವ್ಯಾಸನು––

" ತಮ್ಮ ಜನನವ ನೋಡಿ ನುಡಿಯಲಿ ಪಾಂಡು
ಸುತರಲ್ಲೆಂದು ಹೇಳೆಂದ " [ಸಂ ೨ ಪ ೩೮]

ಎಂದು ಹೇಳಿರುತ್ತಾನೆ

---

* ಕೃಷ್ಣನನ್ನು ಕಟ್ಟಲು ಪ್ರಯತ್ನಿಸುವ ಸನ್ನಿವೇಶ ವ್ಯಾಸಭಾರತದಲ್ಲಿಲ್ಲ ಕಟ್ಟುವ ಯೋಚನೆಯನ್ನು ಮಾತ್ರ ಮಾಡುತ್ತಾನೆಂದಿದೆ ಕುಮಾರವ್ಯಾಸನು ಹೇಳಿರುವ ಈ ಸನ್ನಿವೇಶಕ್ಕೆ ಮೂಲ, ಭಾಸನ ದೂತವಾಕ್ಯವೇ ಆಗಿರಬಹುದು ಅಂತೆಯೇ, "ಕಂಡರು ಹರಿಯರೂಪವನೊಬ್ಬ ಕೌರವನಲ್ಲದುಳಿದವರು" ಎಂದು ಹೇಳಿರುವುದಕ್ಕೂ "ಕಥಂ ನ ದೃಷ್ಟಃ ಕೇಶವಃ" ಎನ್ನುವುದೇ ಮೂಲವಾಗಿರಬಹುದು.

೪ ದೊ ವಾ —

" ರಾಜ್ಯಂ ನಾಮ ನೃಪಾತ್ಮಜೈಃ ಸಹೃದಯೈರ್ಜಿತ್ವಾ ರಿಪೂನ್ ಭುಜ್ಯತೇ
ತಲ್ಲೋಕೇ ನ ತು ಯಾಚ್ಯತೇ ನ ತು ಪುನರ್ದೀನಾಯ ವಾ ದೀಯತೇ ।
ಕಾಂಕ್ಷಾ ಚೇನ್ನೃಪತಿತ್ವಮಾಪ್ತುಮಚಿರಾತ್ ಕುರ್ವಂತು ತೇ ಸಾಹಸಂ
ಸ್ವೈರಂ ವಾ ಪ್ರವಿಶಂತು ಶಾಂತಮತಿಭಿರ್ಜುಷ್ಟಂ ಶಮಾಯಾಶ್ರಮಂ ॥ "

ಕುಮಾರವ್ಯಾಸನು ಈ ಶ್ಲೋಕದ ಅಭಿಪ್ರಾಯವನ್ನೇ—

"ನಾಡ ಬಯಸುವರೆಮ್ಮೊಡನೆ ಹೊಯ್ದಾಡುವುದು ಸಂಪ್ರತಿಗೆ ಚಿತ್ತವ
ಮಾಡಲಾಗದು ಸಂಧಿ ವೀರಕ್ಷತ್ರಿಯರ ಮತವೆ ।
ಬೇಡುವರು ಪಾರ್ಥಿವರೆ" ಸಂಧಿ ೨ ಪ ೩೮

" ತುದಿಗೆ ತಾ ಸನ್ಯಾಸವನು ಮಾಡಿದನು ಮಗುಳಳುಪಿದರೆ ರಾ
ಜ್ಯದ ಪದವಿಯನುಚಿತವಾಯ್ತು ಯಮಜಂಗೆ" ಸಂ ೨ ಪ ೩೯

ಎಂದು ಹೇಳಿರುತ್ತಾನೆ

## ಉದ್ಯೋಗಪರ್ವದಲ್ಲಿ ಬರುವ ಉಪಾಖ್ಯಾನಗಳು.

ವ್ಯಾಸಭಾರತದಲ್ಲಿ ಪ್ರಾಸಂಗಿಕವಾಗಿ ಹೇಳಿರುವ ಉಪಾಖ್ಯಾನಗಳಲ್ಲಿ ಪ್ರಕೃತ ಸಂದರ್ಭಕ್ಕೆ ಬೇಕಾದ ಅಂಶವನ್ನು ಮಾತ್ರ ತೆಗೆದುಕೊಂಡು ವಿಸ್ತಾರವಾದ ಆ ಕಥೆಯನ್ನು ಒಂದೆರಡು ಪದ್ಯಗಳಲ್ಲೇ ಸಂಗ್ರಹವಾಗಿ ರಚಿಸಿರುವುದು ಕವಿಯ ಕವಿತಾಸಾಮರ್ಥ್ಯವನ್ನು ವ್ಯಕ್ತಪಡಿಸುತ್ತದೆ

## ನಹುಷೋಪಾಖ್ಯಾನ

೧, ವ್ಯಾಸಭಾರತದಲ್ಲಿ ಈ ಉಪಾಖ್ಯಾನವನ್ನು ಶಲ್ಯನು, ಪಾಂಡವರಿಗೆ " ಸತ್ಯಕ್ಕೆ ಕಟ್ಟುಬಿದ್ದು ಸಿರಿಯನ್ನು ಕಳೆದುಕೊಂಡಿರುವ ನೀವು ಪುನಃ ಅದನ್ನು ಪಡೆಯುತ್ತೀರಿ " ಎನ್ನುವ ಅಂಶವನ್ನು ಸೂಚಿಸುವುದಕ್ಕಾಗಿ ಹೇಳುತ್ತಾನೆ ಅದನ್ನು ಕುಮಾರವ್ಯಾಸನು,

" ಆದಡೇನೆಲೆ ಕಂದ ತಪ್ಪದು ಮೇದಿನಿಯ ಸಿರಿ ನಿಮಗೆ ಸತ್ಯವ
ಕಾದು ಹದಿಮೂಱಬುದ ನವೆದಿರಿ ಮುಂದೆ ಲೇಸಹುದು ।
ಕಾದಿ ವೃತ್ರಾಸುರನ ಮುಱಿದಪವಾದದಲಿ ಸಿರಿ ಹೋಗಿ ದುಃಖಿತ
ನಾದನಿಂದ್ರನು ಮತ್ತೆ ಬದುಕಿದ ಶಚಿಯ ದೆಸೆಯಿಂದ ॥

ನಹುಷನನು ಕೆಡೆನೂಕಿ ಋಷಿಗಳ ಮಹಿಮೆಯಲಿ ಸಾಮ್ರಾಜ್ಯದಲಿ
ಸನ್ನಿಹಿತನಾದನು ಮತ್ತೆ ದಿವಿಜರರಾಯರೊಳಗಾಗಿ !

ಅಹಿತರವಗಡಿಸಿದರೆ ಕುಸಿದನು ಬಹಳಲೇಸನು ಬಳಿಕ ಕಂಡನು
ಮಹಿ ನಿಮಗೆ ಬೆಸೆಗೈಯೆ ಬದುಕುವಿರೆಂದನಾಶಲ್ಯ"
ಸಂಧಿ೨ ಪ ೧೫-೧೬

ಎಂದು ಎರಡು ಪದ್ಯಗಳಲ್ಲಿ ಹೇಳಿರುತ್ತಾನೆ

೨ ಕೃಷ್ಣಾರ್ಜುನರೇ ನರನಾರಾಯಣರೆಂದು ತಿಳಿಸುವುದಕ್ಕಾಗಿ ಪರಶುರಾಮನು ದಂಭೋದ್ಭವ ಚರಿತ್ರೆಯನ್ನು ಹೇಳುತ್ತಾನೆ
ಸಂಧಿ ೯ ಪ ೮-೯

೩ ದುರ್ಯೋಧನನ ಹೆಮ್ಮೆಯನ್ನು ಮುರಿಯುವುದಕ್ಕಾಗಿ ಗರುಡನ ದರ್ಪಭಂಗದ ಕಥೆಯನ್ನು ಕಣ್ವನು ಸೂಚಿಸುತ್ತಾನೆ
ಸಂಧಿ ೯ ಪ ೧೦

೪ ಅತ್ಯಂತನಿರ್ಬಂಧವು ಅನರ್ಥಕ್ಕೆ ಕಾರಣವೆನ್ನುವುದನ್ನು ತಿಳಿಸುವುದಕ್ಕಾಗಿ ನಾರದನು ದುರ್ಯೋಧನನಿಗೆ ಗಾಲವೋಪಾಖ್ಯಾನ ವನ್ನೂ, ಯಯಾತಿಯ ದೃಷ್ಟಾಂತವನ್ನೂ ಹೇಳಿ ಗರ್ವಪಡಬಾರದೆಂದು ಆತನಿಗ ತಿಳಿಸುತ್ತಾನೆ ಸಂಧಿ೯ ಪ ೧೧-೧೨

೫ ಕುಂತಿಯು ಕೃಷ್ಣನಿಗೆ ಹೇಳುವ ವಿದುಲೋಪಾಖ್ಯಾನವನ್ನು ಕುಮಾರವ್ಯಾಸನು ಬಿಟ್ಟಿರುತ್ತಾನೆ ಇದಕ್ಕೆ ಕಾರಣವನ್ನು ಮುಂದೆ ಪು lxxxvi ರಲ್ಲಿ ಕೊಟ್ಟಿದೆ

ಕುಮಾರವ್ಯಾಸನು ಕೆಲವು ಕಡೆ ವ್ಯಾಸಭಾರತದ ಕಥಾಸನ್ನಿವೇಶ ವನ್ನು ಪೂರ್ತಿಯಾಗಿ ಅನುಸರಿಸಿರುತ್ತಾನೆ ಮತ್ತೆ ಕೆಲವುಕಡೆ ವ್ಯಾಸ ಭಾರತ ಮತ್ತು ಪಂಪಭಾರತ ಇವೆರಡರ ಅಭಿಪ್ರಾಯವನ್ನೂ ಒಟ್ಟು ಗೂಡಿಸುತ್ತಾನೆ

ಕವಿಯು ಕಥಾದೃಷ್ಟಿಯಿಂದ ಸಂಸ್ಕೃತ ಕನ್ನಡಗಳೆರಡರಲ್ಲೂ ಆದಿ ಭಾರತವನ್ನನುಸರಿಸಿ ತನ್ನ ಕಾವ್ಯವನ್ನು ರಚಿಸಿದ್ದರೂ ಮಧ್ಯೆ ಮಧ್ಯೆ ಕೆಲವು ಮಾರ್ಪಾಡುಗಳನ್ನು ತಾನೂ ಮಾಡಿರುತ್ತಾನಲ್ಲದೆ ಹೊಸ ಸನ್ನಿ ವೇಶವನ್ನೂ ಕಲ್ಪಿಸಿರುತ್ತಾನೆ

## ಕವಿಯು ಸೇರಿಸಿರುವ ಹೊಸ ಸನ್ನಿವೇಶಗಳು

೧ ವಿದುರನನ್ನು ದುರ್ಯೋಧನನು ತೊತ್ತಿನಮಗನೆಂದು ಮೂದಲಿಸಿದಾಗ ವಿದುರನು "ನೀನಲ್ಲೈ ಅಜಪುತ್ರ" ಎಂದು ಹೇಳುವುದು

೨ ಸಂಧಿವಿಚಾರದಲ್ಲಿ ಕೃಷ್ಣನು ಧರ್ಮರಾಜಾದಿಗಳ ಅಭಿ ಪ್ರಾಯವನ್ನು ಕೇಳುವ ಸಂದರ್ಭದಲ್ಲಿ ದ್ರೌಪದಿಗೂ ಹೇಳಿ ಕಳುಹಿಸಿ ಬರ ಮಾಡಿ ಆಕೆಯ ಅಭಿಮತವನ್ನು ಕೇಳುವುದು

೩ ವ್ಯಾಸಭಾರತದಲ್ಲಿ "ದ್ರುಪದರಾಜಪುರೋಹಿತನು ರಾಜಕಾರ್ಯವನ್ನು ಸಭೆಯಲ್ಲಿ ಹೇಳುತ್ತಾನೆ ಬಳಿಕ ಆತನಿಗೆ ರಾಜನು ಪ್ರತ್ಯುತ್ತರವನ್ನು ಹೇಳಿಕಳುಹಿಸುತ್ತಾನೆ ಅನಂತರ ಧೃತರಾಷ್ಟ್ರನು ಸಂಜಯನನ್ನು ಕರೆದು "ಸಂಜಯ! ನೀನು ಪಾಂಡವರ ಸಮೀಪಕ್ಕೆ ಹೋಗಿ ಯುದ್ಧವು ಆಗದಂತೆ ಮಾತನಾಡಿ ಶಾಂತಿಯನ್ನು ಉಂಟುಮಾಡು" ಎಂದು ಹೇಳುತ್ತಾನೆ ಅದರಂತೆಯೇ ಸಂಜಯನು ಹೋಗಿ ಪಾಂಡವರಿಗೆ ತಿಳಿಸುತ್ತಾನೆ ಆಗ ಧರ್ಮರಾಜನು, "ನಾನು ಕೃಷ್ಣನ ಅನುಯಾಯಿ, ಆತನ ಹೇಳಿಕೆಯಂತೆಯೇ ಈಗ ದೂತನನ್ನು ಕಳುಹಿಸಿರುತ್ತೇನೆ ನನಗೂ ಯುದ್ಧವಿಲ್ಲದೆ ಶಾಂತಿಯಿಂದಲೇ ಇರಬೇಕೆಂಬ ಅಭಿಪ್ರಾಯವಿದೆ ದುರ್ಯೋಧನನು ನನಗೆ ಐದು ಗ್ರಾಮಗಳನ್ನು ಕೊಟ್ಟರೆ ಆಗ ಇದು ಸಾಧ್ಯ, ಇಲ್ಲದಿದ್ದರೆ ಯುದ್ಧವು ಖಂಡಿತ ಕೃಷ್ಣನು ತಾನೇ ಧೃತರಾಷ್ಟ್ರನನ್ನು ಕಂಡು ಸಂಧಿಯ ವಿಚಾರವನ್ನು ಪ್ರಸ್ತಾಪಿಸುತ್ತಾನೆ ಎಂದು ಧೃತರಾಷ್ಟ್ರನಿಗೆ ತಿಳಿಸುವಂತೆ ಹೇಳಿಕಳುಹಿಸುತ್ತಾನೆ" ಎಂದಿದೆ

ಕುಮಾರವ್ಯಾಸನು ಈ ಸನ್ನಿವೇಶವನ್ನು ಸ್ವಲ್ಪ *ಮಾರ್ಪಾಡು ಮಾಡಿರುತ್ತಾನೆ

ದ್ರುಪದರಾಜಪುರೋಹಿತನ ಮಾತನ್ನು ಕೇಳಿ ದುರ್ಯೋಧನನು ಚಪಳಕರ್ಣನ ಕೂಡ ಯೋಚಿಸಿ ಕಾಳಗಮಾಡಲು ನಿಶ್ಚೈಸುತ್ತಾನೆ ಬಳಿಕ ಹರ್ಷದಿಂದ ಸಂಜಯನನ್ನು ಆಗಲೆ ಕರೆಸಿ, ಸಂಜಯ! ಅರಿನೃಪರ ಪಾಳಯಕ್ಕೆ ಹೋಗಿ "ಧರೆಯ ಬೇಡಿಸಿ ಕಳುಹಿದಿರಿ ಸಂಗರದೊಳಸಿಧಾರೆಯಲಿ ಕೊಡುವೆವು ಬಱಿದೆ ಕೊಟ್ಟರಧರ್ಮವು" ಎಂದು ಧರ್ಮತನಯಂಗೆ ತಿಳಿಸುವಂತೆ ಹೇಳಿಕಳುಹಿಸುತ್ತಾನೆ

ಧರ್ಮರಾಜನು ಇದಕ್ಕೆ ಪ್ರತ್ಯುತ್ತರವನ್ನು ಹೇಳಿಕಳುಹಿಸುವುದರಲ್ಲಿ, ದುರ್ಯೋಧನನಿಗ ಐದು ಪಟ್ಟಣಗಳನ್ನಾದರೂ ಕೊಡುವಂತೆ ತಿಳಿಸುವುದಾಗಲೀ, ಕೃಷ್ಣನು ಸಂಧಿಗಾಗಿ ಹಸ್ತಿನಾವತಿಗೆ ಹೋಗುವ ಸುದ್ದಿಯನ್ನಾಗಲೀ ಹೇಳಿಲ್ಲ

೪ ಕೃಷ್ಣನ ವಿಶ್ವರೂಪವನ್ನು ಕಂಡು ಆತನನ್ನು ಗಾಂಧಾರಿ ಮತ್ತು ಭಾನುಮತಿ ಇವರು ಪ್ರಾರ್ಥಿಸುತ್ತಾರೆ ಈ ಕಥಾಭಾಗವು ಮೂಲಭಾರತದಲ್ಲಿಲ್ಲ ಕವಿಯು ಇದನ್ನು ಹೊಸದಾಗಿ ಸೇರಿಸಿರುತ್ತಾನೆ

---

*ಧೃತರಾಷ್ಟ್ರನ ಸಭೆಯನ್ನು ದುರ್ಯೋಧನನ ಸಭೆಯನ್ನಾಗಿ ವ್ಯತ್ಯಾಸ ಮಾಡಿರುವುದರಿಂದ ದುರ್ಯೋಧನನ ಅಭಿಪ್ರಾಯಕ್ಕೆ ತಕ್ಕಂತೆ ಈ ಸಂದರ್ಭವನ್ನು ಮಾರ್ಪಡಿಸಿರುವುದು ನ್ಯಾಯವಾಗಿಯೇ ಇದೆ.

೫ ಸಂಧಿಯು ಮುರಿದ ಮೇಲೆ ಕೃಷ್ಣನು ಉಪಪ್ಲಾವ್ಯನಗರಕ್ಕೆ ಮರಳಿದಾಗ ತಾನು ಬಂದಿರುವ ಸುದ್ದಿಯನ್ನು ಧರ್ಮರಾಜನಿಗೆ ತಿಳಿಸು ವಂತೆ ಸಾತ್ಯಕಿಯೊಡನೆ ಹೇಳಿಕಳುಹಿಸುತ್ತಾನೆ ಬಳಿಕ ಧರ್ಮರಾಜಾದಿ ಗಳು ಎದುರ್ಗೊಂಡು ಬಂದು ಕೃಷ್ಣನನ್ನು ಮರ್ಯಾದೆಯಿಂದ ಕರೆದು ಕೊಂಡು ಹೋಗುತ್ತಾರೆ ಈ ಕಥಾಭಾಗವೂ ಕವಿಕೃತವೇ ಮೂಲಭಾರತ ದಲ್ಲಿಲ್ಲ

## ಕುಮಾರವ್ಯಾಸಭಾರತದ ಉದ್ಯೋಗ ಪರ್ವದಲ್ಲಿ ಕಂಡು ಬರುವ ಕೆಲವು ನ್ಯೂನತೆಗಳು

೧ ಕುಮಾರವ್ಯಾಸನು ದುರ್ಯೋಧನನ ಸಭೆಯನ್ನು ವರ್ಣಿಸು ವಾಗ ಸಭೆಯಲ್ಲಿ ಗಾಂಧಾರಿಯೂ ಇದ್ದಳು "ಸತಿಸಹಿತ ಧೃತರಾಷ್ಟ್ರಭೂಪತಿ ಸುತನ ಬಲವಂಕದಲಿ ಕನಕೋಚಿತಪೀಠದಲೆಸೆದಳು" ಎಂದು ಮೊದಲು ತಿಳಿಸಿ, ಮುಂದೆ ದುರ್ಯೋಧನನು ಕೃಷ್ಣನನ್ನು ಕಟ್ಟಲು ಯೋಚಿಸಿರುವ ವಿಚಾರವನ್ನು ಧೃತರಾಷ್ಟ್ರನು ಕೇಳಿ ದುರ್ಯೋಧನನಿಗೆ ಬುದ್ಧಿಹೇಳಲು "ಅವಳ ಬರಹೇಳಿತ್ತ ಮಗನಾಟವನು ನೋಡಲಿ ಹೆತ್ತಮೋಹದ ಹವಣುಗಳ ಬೆಸಗೊಂಬ ಗಾಂಧಾರಿಯನು ಕರೆಯೆಂದ ॥"

ಕು ವ್ಯಾ ಭಾ ಸಂ ೯ ಪ ೪೪

ಎಂದು ಗಾಂಧಾರಿಯನ್ನು ಕರೆಸುವಂತೆ ಹೇಳಿರುವುದರಿಂದ ಪರಸ್ಪರ ವಿರೋಧವು ಕಂಡುಬರುತ್ತದೆ

೨ ಕರ್ಣನನ್ನು ಬೇಡುವಂತೆ ಕೃಷ್ಣನು ಕುಂತಿಗೆ ಹೇಳುವ ಸನ್ನಿವೇಶ ವ್ಯಾಸಭಾರತದಲ್ಲಿಲ್ಲ ಅಲ್ಲಿ, ಕುಂತಿಯು ತಾನಾಗಿಯೇ ಕರ್ಣನ ಪರಾಕ್ರಮಕ್ಕೆ ಹೆದರಿ ತನ್ನ ಐದು ಮಕ್ಕಳನ್ನೂ ಕಾಪಾಡುವಂತೆ ಆತನನ್ನು ಬೇಡಲು ಹೋಗುತ್ತಾಳೆ ಎಂದಿದೆ

ಪಂಪಭಾರತದಲ್ಲಿ ಈ ರೀತಿ ಇದೆ—

"ಅಂತು ಸಹಜಕವಚರತ್ನಕುಂಡಲಂಗಳ್ ನೆತ್ತರ್ ಪನಪನಪನಿಯೆ ತಿದಿಯುಗಿವಂತುಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರನಾತಂಗಮೋಘ ಶಕ್ತಿಯನಿತ್ತನಾತನಂ ನಾನುಮೆನ್ನ ಬಲ್ಲ ಮಾಳ್ಕೆಯಿಂ ಭೇದಿಸಿದಪ್ಪೆಂ ನೀಮುಂ ನಿಮ್ಮ ಚೊಚ್ಚಿಲಮಗನಪ್ಪ ಸೂರ್ಯಸೂನುವಂ ಸೂರ್ಯದಿನ ದಂದು ಕಂಡು ಕಾರ್ಯಸಿದ್ಧಿಯಂ ಮಾಡಿಬನ್ನಿಂ" ಎಂದು ಕುಂತಿಗೆ ಕೃಷ್ಣನು ತಿಳಿಸುತ್ತಾನೆ ಅದರಂತೆ ಆಕೆ ಕರ್ಣನ ಸಮೀಪಕ್ಕೆ ಬರುತ್ತಾಳೆ ಆಗ ಸೂರ್ಯನು "ಕೊಂತಿ ಹರಿಯ ಮತದಿಂ ಕಾಯಲ್ಕೊಡರಿಸಿ ಬಂದಳ್ । ಸುತ ರಂ ಕುಡದಿರ್ ಪುರಿಗಣೆಯನೆನಿತುಲಲ್ಲೈಸಿದೊಡಂ ॥" ಎಂದು ಕರ್ಣನಿಗೆ ಹೇಳುತ್ತಾನೆ ಕುಂತಿಯು, ಮಗನೇ! ನಿನ್ನನ್ನು ನಂಬಿ ನಿನ್ನ ಸಹೋದ

ರರು ನಿನ್ನ ಅಪ್ಪಣೆಯಂತೆ ನಡೆಯುವರು , ನೀನು ರಾಜ್ಯಭಾರ ಮಾಡು , ಅವರು ದುರ್ಯೋಧನನ ಪ್ರೀತಿಗೆ ಪಾತ್ರರಾಗಿ ನಿನ್ನ ಅನುಜ್ಞೆಯಲ್ಲಿರುವುದರಿಂದ ಎರಡು ಕಡೆಯಲ್ಲಿಯೂ ಮನಸ್ತಾಪಕ್ಕೆ ಸ್ವಲ್ಪವೂ ಅವಕಾಶವಿರದು, ಇದಕ್ಕೆ ನೀನು ಒಡಂಬಡಬೇಕು '' ಎಂದು ಹೇಳುತ್ತಾಳೆ ಕರ್ಣನು ಇದನ್ನು ಒಪ್ಪುವುದಿಲ್ಲ, ಕೊನೆಗೆ ಕುಂತಿ ಕರ್ಣನ ಛಲವನ್ನು ಕಂಡು ಮನಮರುಗಿ '' ನಾನು ಕೆಟ್ಟೆನು , ಚಂದ್ರ ವಂಶವು ಇಂದೇ ನಾಶವಾಗಿಹೋಗುವುದಲ್ಲವೇ ? ನನಗಿನ್ನು ಬಾಳುವ ಆಸೆ ಎಲ್ಲಿಂದ ಬಂದೀತು ? ಉಳಿದ ಮಕ್ಕಳ ಆಸೆಯನ್ನೂ ನಾನು ಬಿಟ್ಟುಬಿಟ್ಟೆನು '' ಎಂದು ಹೇಳುತ್ತಾಳೆ ಆಗ ಕರ್ಣನು '' ಪಿಡಿಯೆಂ ಪುರಿಗಣೆಯಂ '' ಎಂದು ಹೇಳುತ್ತಾನೆ

ಕುಮಾರವ್ಯಾಸನು ಈ ಸಂದರ್ಭದಲ್ಲಿ ಪಂಪಭಾರತದಿಂದ ಕೆಲವು ಅಂಶಗಳನ್ನು ಮಾತ್ರ ತೆಗೆದುಕೊಂಡಿರುತ್ತಾನೆ ಇಂದ್ರನು ಕರ್ಣನಿಗೆ ಕೊಟ್ಟ ಶಕ್ತ್ಯಾಯುಧದ ವಿಷಯವನ್ನು ಕೃಷ್ಣನು ಕುಂತಿಗೆ ತಿಳಿಸುವ ವಿಚಾರವಿಲ್ಲ, ಆದಕಾರಣ ವ್ಯಾಸಭಾರತದಲ್ಲಿರುವಂತೆ ಕುಂತಿಯು, ತನ್ನ ಮಕ್ಕಳನ್ನು ಕಾಪಾಡಲು ಕೇಳಿಕೊಂಡಂತೆ ಹೇಳಿದ್ದರೆ ಸರಿಯಾಗಿತ್ತು

ಕರ್ಣನಿಗಿರುವ ಈ ಅಸಾಧಾರಣ ಶಕ್ತ್ಯಾಯುಧದ ಅರಿವಿಲ್ಲದ ಕುಂತಿ ಆತನನ್ನು '' ಹೋದ ಬಾಣವ ಮರಳಿ ತೊಡದಿರು '' ಎಂದು ಕೇಳಿಕೊಳ್ಳುವಂತೆ ಹೇಳಿರುವುದು ಸರಿಯಲ್ಲ ಕರ್ಣನಿಗೆ ದೇವೇಂದ್ರನು ಕೊಟ್ಟಿರುವ ಈ ಅಮೋಘಶಕ್ತಿ ವಿಚಾರವನ್ನು ಕುಂತಿಗೆ ಕೃಷ್ಣನು ಹೇಳುವ ಸನ್ನಿವೇಶವನ್ನು ಕುಮಾರವ್ಯಾಸನು ಬಿಟ್ಟಿರುವುದು ಒಂದು ಲೋಪ

## ವರ್ಣನೆ—ಅಲಂಕಾರಗಳು

ಕುಮಾರವ್ಯಾಸನಿಗ ಕೇವಲ ಕಥೆಯಲ್ಲಿ ಮಾತ್ರ ದೃಷ್ಟಿಯಿಲ್ಲ ಕಾವ್ಯಮರ್ಯಾದೆಯಾದ ಅಲಂಕಾರ ಮತ್ತು ವರ್ಣನೆಗಳಲ್ಲೂ ದೃಷ್ಟಿಯುಂಟು

ಈತನಿಗ ರಾಜಾಶ್ರಯವಿದ್ದಿತೆಂದು ತಿಳಿಸಲು ಕಾರಣಗಳು ಕಾವ್ಯದಲ್ಲಿ ಕಂಡುಬರುವುದಿಲ್ಲ ಆದರೂ ಕವಿಯು ರಾಜಾಸ್ಥಾನದ ವರ್ಣನೆಯನ್ನು ಅನೇಕ ಪದ್ಯಗಳಿಂದ ಮಾಡಿರುತ್ತಾನೆ ಧರ್ಮರಾಜನ ಆಸ್ಥಾನ ವರ್ಣನೆಗಿಂತ ಕೌರವನ ರೀವಿಯ ಇರವನ್ನು ತೋರ್ಪಡಿಸುವುದಕ್ಕಾಗಿ ಆತನ ಆಸ್ಥಾನದ ಚಿತ್ರವನ್ನು ವಿವರವಾಗಿ ಚಿತ್ರಿಸಿರುತ್ತಾನೆ ಇದಲ್ಲದೆ ಸಮುದ್ರ, ಸೇನೆ, ಉದ್ಯಾನ ಇವುಗಳ ವರ್ಣನೆಯನ್ನು ಸಮಯಾವರಿತು ಮಾಡಿರುತ್ತಾನೆ

ಕವಿಯು ಕೌರವನ ಆಸ್ಥಾನವನ್ನು ವರ್ಣನೆಮಾಡುವ ಸಂದರ್ಭದಲ್ಲಿ '' ಹಲವುಪಮೆಯುತ್ಪ್ರೇಕ್ಷೆ ಸುಲಲಿತಾಲಂಕೃತಿ ಚಮತ್ಕೃತಿಗಳ ಚತು

ಆ ಸಮಯದಲಿ ಗಂಗೆ ನಾರೀವೇಷದಲಿ ನಡೆತಂದಳೆಲೆ ಕುಂ
ತೀಸತಿಯೆ ಕೆಯ್ಯಡೆಯ ಕಂದನನೊಪ್ಪುಗೊಳು ನೀನು।
ಈಸುದಿನವಿವನಾಗುಹೋಗಿನ ಗಾಸಿಯನು ತಲೆಗಾಯ್ದೆನೆನ್ನಯ
ಭಾಷೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ॥
ಇರಲಿರಲು ರವಿ ಬಂದನೆಕ್ಕಟಿಗರೆದನೀತನ ಕಿವಿಯೊಳೆಲ್ಲವ
ನೊಱೆದು ನಿನಗೆಲೆ ಮಗನೆ ಕುಂತೀದೇವಿ ತಾಯಹಳು।
ಮುರಹರನ ಮತದಿಂದ ನಿನ್ನಯ ಸರಳ ಬೇಡಲು ಬಂದಳೆಂದಿನ
ಹರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ॥
ಬೆಸಸಿತಕ್ಕೆ ಹಸಾದವೆಂದನು ಬಿಸಜಬಂಧುವ ಕಳುಹಿದನು"

ಕು ವ್ಯಾ ಭಾ ಸಂ ೧೦ ಪ ೨೭-೩೧

೭ "ಪಿಡಿಯೆಂ ಪುರಿಗಣೆಯಂ ನರ
ನೆಡೆಗೊಂಡೊಡಮುಳಿದ ನಿನ್ನ ಮಕ್ಕಳನಿನ್ನೇ ।
ದೊರ್ಡಮಳಿಯೆಂ ಪೆರ್ಜಸಮನೆ
ಪಿಡಿದೆನ್ನನೆ ರಣದೊಳಳಿವೆನಿರದಡಿಯೆತ್ತೆಂ ॥

ಪಂ ಭಾ ಆ ೯ ಪ ೮೭

"ಆದಡೈವರುಮಕ್ಕಳನು ತಲೆಗಾದು ತೋಱ್ಕೆ ಕಂದ"
ಹೋದಬಾಣವ ಮರಳಿತೊಡದಿರು ಮಾದುಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಂಡನು ಬಂದನರಮನೆಗೆ ॥"

ಕು ವ್ಯಾ ಭಾ ಸಂ ೧೦ ಪ ೩೬

---

* ವ್ಯಾಸಭಾರತದಲ್ಲಿ ಗಂಗೆಯು ಕರ್ಣನನ್ನು ಕುಂತಿಗೆ ಒಪ್ಪಿಸುವ ಕಥಾಭಾಗವಿಲ್ಲ ಸೂರ್ಯನು ಕರ್ಣನಿಗೆ ಕಿವಿಯಲ್ಲಿ ಕುಂತಿಯು ಸರಳನ್ನು ಬೇಡಲು ಬಂದಿರುವಳೆಂದೂ, "ನೀನು ಮರುಳಾಗಬೇಡ" ಎಂದೂ ತಿಳಿಸುವುದಿಲ್ಲ,

"ಸತ್ಯಮಾಹ ಪೃಥಾ ವಾಕ್ಯಂ ಕರ್ಣ ಮಾತೃವಚಶ್ಶೃಣು।
ಶ್ರೇಯಸ್ತೇ ಸ್ಯಾನ್ನರವ್ಯಾಘ್ರ ಸರ್ವಮಾಚರತಸ್ತಥಾ ॥"

ವ್ಯಾ ಭಾ ಅ 133 ಶ್ಲೋ 2

"ಕರ್ಣ! ಕುಂತಿಯು ಹೇಳಿರುವ ಮಾತು ಸತ್ಯ, ತಾಯಿಯ ಮಾತನ್ನು ಕೇಳು ಅದರಂತೆ ನಡೆದರೆ ನಿನಗೆ ಶ್ರೇಯಸ್ಸುಂಟಾಗುತ್ತದೆ" ಎಂದು ಸೂರ್ಯನು ಹೇಳುತ್ತಾನೆ

* ೮ "ಒಂದಕ್ಷೋಹಿಣೀ ಬಲಂ ಬೆರಸು ತಲೆಬಲಿವಲಿಯೆಂದಭಿಮನ್ಯುಗೆ ಕೂಸಂ ಕೊಟ್ಟ ಜಟ್ಟಿಗಂ ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ ಶತಾನೀಕ ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪನ್ನೊರ್ವರ್ ತಮ್ಮಂದಿರುಂ ಬೆರಸು ನೆಲನದಿರೆ ಮುಂಗೋಳೊಳ್ ನಡೆಯೆ"

ಪಂ ಭಾ ಆ ೯ ಪದ್ಯ ೯೫ ಆದಮೇಲೆ ಇರುವ ಗದ್ಯ

"ವರವಿರಾಟನು ಕಂಬುನೃಪನುತ್ತರ ಶತದ್ಯುಮ್ನಕನು ಶತಚಂ
ದ್ರರು ಶತಾನೀಕರು ಶತಾಯುಧರೆನಿಪ ಮತ್ಸ್ಯಪರು ।
ತುರಗಗಜರಥಪಾಯದಳ ಸಾಗರದ ಸಾರಂಭದಲಿ ನಿಜಸಂ
ವರಣೆಯನು ತೋಱಿದರು ತಮ್ಮಕ್ಷೋಹಿಣೀ ಬಲವ ॥"

ಕು ವ್ಯಾ ಭಾ ಸಂ ೧೧ ಪ ೨೩

"ದ್ರೌಪದಿಯ ಕೊಟ್ಟ ನಣ್ಪುಮಂ ದ್ರೋಣನೊಳಾದ ಪರಿಭವಮುಮಂ ನೆನೆದೊಂದಕ್ಷೋಹಿಣೀಬಲಂ ಬೆರಸು ದ್ರುಪದಂ ಧೃಷ್ಟದ್ಯುಮ್ನ ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಃಪುರುಕುತ್ಸವಿಚಿತ್ರಾದಿಗಳಪ್ಪ ತನ್ನ ಮಕ್ಕಳ್ವೆರಸು ನೆಲಂ ಮೂರಿವಿಟ್ಟಂತೆ ಬಲವಕ್ಕದೊಳ್ ನಡೆಯೆ"

ಪಂ ಭಾ

"ವರಯುಧಾಮನ್ಯೂತ್ತಮೌಜಸರುರುಶಿಖಂಡಿ ಸುಚೇಕಿತಾನರು
ಧುರಧುರಂಧರ ವೀರಪಾಂಚಾಲಕ್ಷಿತೀಶ್ವರರು ।
ಧಟ್ಟಕ್ಷೋಹಿಣಿಯ ತೋಱಿದನು ಪಾಂಚಾಲ ॥"

ಕು ವ್ಯಾ ಭಾ ಸಂ ೧೧ ಪ ೨೨

---

* ವ್ಯಾಸಭಾರತದಲ್ಲಿ—

" ಸಂಗ್ರಾಮೇ ನ ಹನಿಷ್ಯಾಮಿ ತೇ ಸುತಾನ್ ।
ಯುಧಿಷ್ಠಿರಂ ಚ ಭೀಮಂ ಚ ಯಮೌ ತಾವರ್ಜುನಾದೃತೇ ॥"

ಅ 133 ಶ್ಲೋ 20

"ನ ತೇ ಜಾತು ನ ಶಿಷ್ಯಂತಿ ಪುತ್ರಾಃ ಪಂಚ ಯಶಸ್ವಿನೀ ।"

ಅ 133 ಶ್ಲೋ 23

"ಅರ್ಜುನನನ್ನು ಬಿಟ್ಟು ಉಳಿದವರನ್ನು ಯುದ್ಧದಲ್ಲಿ ಕೊಲ್ಲುವುದಿಲ್ಲ ಅಂತೂ ನಿನ್ನಐದುಮಕ್ಕಳು ನಾಶವಾಗುವುದಿಲ್ಲ ಅಂದರ ಕರ್ಣಾರ್ಜುನರಲ್ಲಿ ಒಬ್ಬನು ಉಳಿಯುವುದರಿಂದ ಐದುಮಕ್ಕಳು ಮಾತ್ರ ಇದ್ದಂತಾಯಿತು" ಎಂದಿದೆ

" ಕೇಕಯವಿಷಯಾಧೀಶ್ವರರಪ್ಪ ಕೈಕಯರಯ್ವರುಮೊಂದಕ್ಷೋಹಿಣೀಬಲದೊಡನೆ ಸಿಡಿಲನುರುಳಿಮಾಡಿದಂತು ಪಿಂಗೋಳೊಳ್ ನಡೆಯೆ, ಪಾಂಡ್ಯಂ ಶ್ರೀಜಯ ಸೋಮಕರೊಡನೊಂದಕ್ಷೋಹಿಣೀ ಬಲಂಬೆರಸು ಸುತ್ತಿಱಿದು ಬಳಸಿಬರೆ"

ಪಂ ಭಾ

"ಜಯಸಮರ ಸಾಮಗ್ರಬಲ ಕೈಕಯನೃಪಾಲರು ತಮ್ಮೊಳಕ್ಷೋ
ಣಿಯನು ತೋಱಿದರಂದು ಗಜಕಂಧರದ ಭೂಪತಿಗೆ ।
ಭಯವಿಹೀನನು ಪಾಂಡ್ಯನೃಪ ಸೃಂಜಯನು ಸೋಮಕಭೂಪರಕ್ಷೋ
ಣಿಯನು ತೋಱಿದರವನಿ ಕುಸಿದುದು ದಳದ ಪದಹತಿಗೆ ॥"

ಕು ವ್ಯಾ ಭಾ ಸಂ ೧೧ ಪ ೨೪

"ಹಿಡಿಂಬೆಗಂ ಭೀಮಂಗಂ ಪುಟ್ಟಿದ ಮಗಂ ಘಟೋತ್ಕಚ
ನಱುವತ್ತೆಂಟುಕೋಟಿರಾಕ್ಷಸಬಲಂ ಬೆರಸು ಬರೆ" ಪಂ ಭಾ

" ಭಾರಿದೇಹನು ಭಟಭಯಂಕರ ತೋರಹತ್ತನು ದೈತ್ಯಮಯ ಪರಿ
ವಾರಬಹುಳದಿ ಬಂದು ಕಂಡನು ಕಲಿಘಟೋತ್ಕಚನು ॥"

ಕು ವ್ಯಾ ಭಾ ಸಂ ೧೧ ಪ ೨೮

"ಕೊಂತಿಯ ಮಾವನಪ್ಪ ಕೊಂತಿಭೋಜನುಂ ಸೋಮಕಂ
ಬೆರಸೊಂದಕ್ಷೋಹಿಣೀಬಲಂ ಬೆರಸು ಬರೆ"

ಪಂ ಭಾ ಆ ೯ ಪದ್ಯ ೯೫ ಆದಮೇಲೆ ಇರುವ ಗದ್ಯ

* "ತೋಱಿದನು ಕುಂತೀಭೋಜನಕ್ಷೋಣಿ"

ಕು ವ್ಯಾ ಭಾ ಸಂ ೧೧ ಪದ್ಯ ೨೫

### ಭಾಸನ ದೂತವಾಕ್ಯ—ಕುಮಾರವ್ಯಾಸ ಭಾರತ

ಕುಮಾರವ್ಯಾಸನು ಪಂಪಭಾರತದಿಂದ ಕೆಲವು ಕಥಾಸನ್ನಿವೇಶಗಳನ್ನು ಆರಿಸಿಕೊಂಡಿರುವಂತೆ, ಭಾಸನ ದೂತವಾಕ್ಯದಿಂದಲೂ ಕೆಲವು ಸನ್ನಿವೇಶಗಳನ್ನು ಆರಿಸಿಕೊಂಡಿರುತ್ತಾನೆ

---

* ವ್ಯಾಸಭಾರತದಲ್ಲಿ ಈ ರಾಜರ ಹೆಸರುಗಳೂ ಮತ್ತು ವಿವರಗಳೂ ಇಲ್ಲ

೧. ದೂ. ವಾ --

"ವಾಸುದೇವಃ-ಭೋಃ ಸುಯೋಧನ ! ಕಿಮಾಸ್ಸೆ !

ದುರ್ಯೋಧನಃ-(ಆಸನಾತ್ ಪತಿತ್ವಾ ಆತ್ಮಗತಂ) ಸುವ್ಯಕ್ತಂ ಪ್ರಾಪ್ತ ಏವ ಕೇಶವಃ ।

ಉತ್ಸಾಹೇನ ಮತಿಂ ಕೃತ್ವಾಪ್ಯಾಸೀನೋಽಸ್ಮಿ ಸಮಾಹಿತಃ ।
ಕೇಶವಸ್ಯ ಪ್ರಭಾವೇನ ಚಲಿತೋಽಸ್ಮ್ಯಾಸನಾದಹಂ ॥"

ಕು ವ್ಯಾ ಭಾ --

* " ಕಡುಕುಮತಿ ಕೌರವನಿಳಿಯದಿರ್ದನು ಸಿಂಹವಿಷ್ಟರವ "

ಸಂ ೮ ಪ. ೬೩

"ಸೆಣಸುಸೇರದ ದೇವನಿದಿರಲಿ ಮಣಿಯದಾತನ ಕಾಣುತವೆ ಧಾ
ರಿಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ ।
ಮಣಿಖಚಿತಕಾಂಚನದ ಪೀಠದ ಗೋಣಸು ಮುರಿದುದು ನಭದಿ ಸುರಸಂ
ದಣಿಗಳಾ ಎನೆ ಕೆಡೆದು ಬಿದ್ದನು ಹರಿಯ ಚರಣದಲಿ ॥"

ಸಂ ೮ ಪ ೬೪

೨ ದೂ ವಾ --

ದುರ್ಯೋಧನಃ-ಕಥಂ ಯಾಸ್ಯತಿ ಕಿಂ ಕೇಶವಃ । ದುಶ್ಶಾಸನ ! ದುರ್ಮರ್ಷಣ ! ದುರ್ಮುಖ ! ದುರ್ಬುದ್ಧೇ ! ದುಷ್ಟೇಶ್ವರ ! ದೂತ ಸಮುದಾಚಾರಮತಿಕ್ರಾಂತಃ ಕೇಶವೋ ಬಧ್ಯತಾಂ । ಕಥಮಶಕ್ತಾಃ ! ದುಶ್ಶಾಸನ ! ನ ಸಮರ್ಥಃ ಖಲ್ವಸಿ । ಅಯಮಶಕ್ತಃ । ಮಾತುಲ ! ಬಧ್ಯತಾಮಯಂ ಕೇಶವಃ। ಕಥಂ ಪರಾಙ್ಮುಖಃ ಪತತಿ। ಭವತು, ಅಹಮೇವ ಪಾಶೈರ್ಬಧ್ನಾಮಿ ।

---

* ದುರ್ಯೋಧನನು ಆಸನದಿಂದ ಉರುಳಿಬೀಳುವ ಸನ್ನಿವೇಶ ವ್ಯಾಸಭಾರತ ದಲ್ಲಿಲ್ಲ ಭಾಸನ ದೂತವಾಕ್ಯದಲ್ಲೂ ಆಸನದಿಂದ ಬಿದ್ದನೆಂದಿದೆಯೇ ವಿನಾ ಕೃಷ್ಣನ ಕಾಲುಗಳಮೇಲೆ ಬಿದ್ದನೆಂದಿಲ್ಲ

ಪಂಪಭಾರತದಲ್ಲಿ, ದುರ್ಯೋಧನನು ಆಸನದಿಂದ ಉರುಳುವ ಸನ್ನಿವೇಶವು ಈ ಪ್ರಕರಣದಲ್ಲಿಲ್ಲ ವಿದುರನು ಬಿಲ್ಲನ್ನು ಮುರಿದ ಬಳಿಕ ಖತಿಗೊಂಡ ದುರ್ಯೋಧ ನನು ಕೃಷ್ಣನಮೇಲೆ ಬೀಳುವ ಸಂದರ್ಭದಲ್ಲಿ—

"ಸುಯೋಧನಂ ತನ್ನ ಬಲದ ತೋಳುಡಿದಂತಾಗಿ ಸಿಗ್ಗಾಗಿ ಬಾಳಂ ಕಿಳ್ತುದಱು ಮನದೊಳಾದೇವದಿಂ ದೇವಕೀನಂದನನ ಮೇಲೆವಾಯ್ವುದಂ ನಂಜನ ಮೇಲೆ ವಾಯ್ವ ನೊಳವಿನಂತುರುಳ್ತರೆ ಪಾಯ್ದು" ಎಂದು ಪಂ ಭಾ ೮೯ ಪದ್ಯ ೫೯ ಆದಮೇಲಿರುವ ಗದ್ಯದಲ್ಲಿ ಉರುಳುವ ಸನ್ನಿವೇಶವಿದೆ

ಆಃ ತಿಷ್ಠೇದಾನೀಂ । **ಕಥಂ ನದೃಷ್ಟಃ ಕೇಶವಃ ।** ಅಯಂ ಕೇಶವಃ । ಅಹೋ ಹ್ರಸ್ವತ್ವಂ ಕೇಶವಸ್ಯ । ಆಃ ತಿಷ್ಠೇದಾನೀಂ ಕಥಂ ನ ದೃಷ್ಟಃ ಕೇಶವಃ। ಅಯಂ ಕೇಶವಃ। ಅಹೋ ದೀರ್ಘತ್ವಂ ಕೇಶವಸ್ಯ। ಕಥಂ ನ ದೃಷ್ಟಃ ಕೇಶವಃ । ಅಯಂ ಕೇಶವಃ । **ಸರ್ವತ್ರ ಮಂತ್ರ ಶಾಲಾಯಾಂ ಕೇಶವಾ ಭವಂತಿ** । ಕಿಮಿದಾನೀಂ ಕರಿಷ್ಯೆ । ಭವತು ದೃಷ್ಟಂ । ಭೋ ! ಭೋ ! ರಾಜಾನಃ । ಏಕೇನೈಕಃ ಕೇಶವೋ ಬಧ್ಯತಾಂ! ಕಥಂ ಸ್ವಯಮೇವ ಪಾಶೈರ್ಬದ್ಧಾಃ ಪತಂತಿ ರಾಜಾನಃ।"

* **ಕು ವ್ಯಾ ಭಾ** —

"ಒಳಗೆ ಹೊಳೆದನು ಬಾಹ್ಯದಲಿ ಪ್ರಜ್ವಲಿಸಿದನು ತಾನಲ್ಲದನ್ಯರ
ಬಳಕೆ ಬೇಱೊಂದಿಲ್ಲದಂತಿರೆ ಕೂಡೆ ತೋಱಿದನು ।
ಒಳಗೆ ಬಿಗಿವೆವೊ ಹೊಱಗೆ ಕೃಷ್ಣನ ಸಿಲುಕಿಸುವೆವೋ ತಿಳಿಯೆ ಕೃಷ್ಣರು
ಹಲಬರಾಗಿಹರಾರ ಕಟ್ಟುವೆವೆಂದರಾ ಖಳರು ॥"   ಸಂ ೯ ಪ ೬೭

೩ **ದೂ ವಾ** —

" ದುರ್ಯೋಧನಃ—

ವನೇ ಪಿತೃವ್ಯೋ ಮೃಗಯಾಪ್ರಸಂಗತಃ
ಕೃತಾಪರಾಧೋ ಮುನಿಶಾಪಮಾಪ್ತವಾನ್ ।
ತದಾಪ್ರಭೃತ್ಯೇವ ಸದಾರನಿಸ್ಪೃಹಃ
ಪರಾತ್ಮಜಾನಾಂ ಪಿತೃತಾಂ ಕಥಂ ವ್ರಜೇತ್ ॥ "

[ದಾರನಿಸ್ಪೃಹನಾಗಿರುವ ಪಾಂಡುವು ಇತರರಿಂದ (ದೇವತೆಗಳಿಂದ) ಹುಟ್ಟಿದ ಇವರಿಗೆ ಹೇಗೆ ತಾನೆ ತಂದೆ ಆಗಬಲ್ಲ ?]

ಈ ಅಭಿಪ್ರಾಯವನ್ನೇ ಕುಮಾರವ್ಯಾಸನು—

" ತಮ್ಮ ಜನನವ ನೋಡಿ ನುಡಿಯಲಿ ಪಾಂಡು
ಸುತರಲ್ಲೆಂದು ಹೇಳೆಂದ" [ಸಂ ೨ ಪ ೩೮]

ಎಂದು ಹೇಳಿರುತ್ತಾನೆ

---

* ಕೃಷ್ಣನನ್ನು ಕಟ್ಟಲು ಪ್ರಯತ್ನಿಸುವ ಸನ್ನಿವೇಶ ವ್ಯಾಸಭಾರತದಲ್ಲಿಲ್ಲ ಕಟ್ಟುವ ಯೋಚನೆಯನ್ನು ಮಾತ್ರ ಮಾಡುತ್ತಾನೆಂದಿದೆ ಕುಮಾರವ್ಯಾಸನು ಹೇಳಿರುವ ಈ ಸನ್ನಿವೇಶಕ್ಕೆ ಮೂಲ, ಭಾಸನ ದೂತವಾಕ್ಯವೇ ಆಗಿರಬಹುದು ಅಂತೆಯೇ, "ಕಂಡರು ಹರಿಯರೂಪವನೊಬ್ಬ ಕೌರವನಲ್ಲದುಳಿದವರು" ಎಂದು ಹೇಳಿರುವುದಕ್ಕೂ "ಕಥಂ ನ ದೃಷ್ಟಃ ಕೇಶವಃ" ಎನ್ನುವುದೇ ಮೂಲವಾಗಿರ ಬಹುದು.

೪ ದೂ ವಾ —

" ರಾಜ್ಯಂ ನಾಮ ನೃಪಾತ್ಮಜೈಃ ಸಹೃದಯೈರ್ಜಿತ್ವಾ ರಿಪೂನ್ ಭುಜ್ಯತೇ
ತಲ್ಲೋಕೇ ನ ತು ಯಾಚ್ಯತೇ ನ ತು ಪುನರ್ದೀನಾಯ ವಾ ದೀಯತೇ ।
ಕಾಂಕ್ಷಾ ಚೇನ್ನೃಪತಿತ್ವಮಾಪ್ತುಮಚಿರಾತ್ ಕುರ್ವಂತು ತೇ ಸಾಹಸಂ
ಸ್ವೈರಂ ವಾ ಪ್ರವಿಶಂತು ಶಾಂತಮತಿಭಿರ್ಜುಷ್ಟಂ ಶಮಾಯಾಶ್ರಮಂ ॥ "

ಕುಮಾರವ್ಯಾಸನು ಈ ಶ್ಲೋಕದ ಅಭಿಪ್ರಾಯವನ್ನೇ—

"ನಾಡ ಬಯಸುವರೆಮ್ಮೊಡನೆ ಹೊಯ್ದಾಡುವುದು ಸಂಪ್ರತಿಗೆ ಚಿತ್ತವ
ಮಾಡಲಾಗದು ಸಂಧಿ ವೀರಕ್ಷತ್ರಿಯರ ಮತವೆ ।
ಬೇಡುವರು ಪಾರ್ಥಿವರೆ" ಸಂಧಿ ೨ ಪ ೩೮

" ತುದಿಗೆ ತಾ ಸನ್ಯಾಸವನು ಮಾಡಿದನು ಮಗುಳಳುಪಿದರೆ ರಾ
ಜ್ಯದ ಪದವಿಯನುಚಿತವಾಯ್ತು ಯಮಜಂಗೆ " ಸಂ ೨ ಪ ೩೯

ಎಂದು ಹೇಳಿರುತ್ತಾನೆ

## ಉದ್ಯೋಗಪರ್ವದಲ್ಲಿ ಬರುವ ಉಪಾಖ್ಯಾನಗಳು.

ವ್ಯಾಸಭಾರತದಲ್ಲಿ ಪ್ರಾಸಂಗಿಕವಾಗಿ ಹೇಳಿರುವ ಉಪಾಖ್ಯಾನಗಳಲ್ಲಿ ಪ್ರಕೃತ ಸಂದರ್ಭಕ್ಕೆ ಬೇಕಾದ ಅಂಶವನ್ನು ಮಾತ್ರ ತೆಗೆದುಕೊಂಡು ವಿಸ್ತಾರವಾದ ಆ ಕಥೆಯನ್ನು ಒಂದೆರಡು ಪದ್ಯಗಳಲ್ಲೇ ಸಂಗ್ರಹವಾಗಿ ರಚಿಸಿರುವುದು ಕವಿಯ ಕವಿತಾಸಾಮರ್ಥ್ಯವನ್ನು ವ್ಯಕ್ತಪಡಿಸುತ್ತದೆ

## ನಹುಷೋಪಾಖ್ಯಾನ

೧. ವ್ಯಾಸಭಾರತದಲ್ಲಿ ಈ ಉಪಾಖ್ಯಾನವನ್ನು ಶಲ್ಯನು, ಪಾಂಡವರಿಗೆ " ಸತ್ಯಕ್ಕೆ ಕಟ್ಟುಬಿದ್ದು ಸಿರಿಯನ್ನು ಕಳೆದುಕೊಂಡಿರುವ ನೀವು ಪುನಃ ಅದನ್ನು ಪಡೆಯುತ್ತೀರಿ " ಎನ್ನುವ ಅಂಶವನ್ನು ಸೂಚಿಸುವುದಕ್ಕಾಗಿ ಹೇಳುತ್ತಾನೆ ಅದನ್ನು ಕುಮಾರವ್ಯಾಸನು,

" ಆದಡೇನೆಲೆ ಕಂದ ತಪ್ಪದು ಮೇದಿನಿಯ ಸಿರಿ ನಿಮಗೆ ಸತ್ಯವ
ಕಾದು ಹದಿಮೂಱುಬುದ ನವೆದಿರಿ ಮುಂದೆ ಲೇಸಹುದು ।
ಕಾದಿ ವೃತ್ರಾಸುರನ ಮುಱಿದಪವಾದದಲಿ ಸಿರಿ ಹೋಗಿ ದುಃಖಿತ
ನಾದನಿಂದ್ರನು ಮತ್ತೆ ಬದುಕಿದ ಶಚಿಯ ದೆಸೆಯಿಂದ ॥

ನಹುಷನನು ಕೆಡೆನೂಕಿ ಋಷಿಗಳ ಮಹಿಮೆಯಲಿ ಸಾಮ್ರಾಜ್ಯದಲಿ
ಸನ್ನಿಹಿತನಾದನು ಮತ್ತೆ ದಿವಿಜರರಾಯರೊಳಗಾಗಿ !

ಅಹಿತರವಗಡಿಸಿದರೆ ಕುಸಿದನು ಬಹಳಲೇಸನು ಬಳಿಕ ಕಂಡನು
ಮಹಿ ನಿಮಗೆ ಬೆಸೆಗೈಯೆ ಬದುಕುವಿರೆಂದನಾಶಲ್ಯ"

ಸಂಧಿ೨ ಪ ೧೫-೧೬

ಎಂದು ಎರಡು ಪದ್ಯಗಳಲ್ಲಿ ಹೇಳಿರುತ್ತಾನೆ

೨ ಕೃಷ್ಣಾರ್ಜುನರೇ ನರನಾರಾಯಣರೆಂದು ತಿಳಿಸುವುದಕ್ಕಾಗಿ ಪರಶುರಾಮನು ದಂಭೋದ್ಭವ ಚರಿತ್ರೆಯನ್ನು ಹೇಳುತ್ತಾನೆ

ಸಂಧಿ ೯ ಪ ೮-೯

೩ ದುರ್ಯೋಧನನ ಹೆಮ್ಮೆಯನ್ನು ಮುರಿಯುವುದಕ್ಕಾಗಿ ಗರುಡನ ದರ್ಪಭಂಗದ ಕಥೆಯನ್ನು ಕಣ್ವನು ಸೂಚಿಸುತ್ತಾನೆ

ಸಂಧಿ ೯ ಪ ೧೦

೪ ಅತ್ಯಂತನಿರ್ಬಂಧವು ಅನರ್ಥಕ್ಕೆ ಕಾರಣವೆನ್ನುವುದನ್ನು ತಿಳಿಸುವುದಕ್ಕಾಗಿ ನಾರದನು ದುರ್ಯೋಧನನಿಗೆ ಗಾಲವೋಪಾಖ್ಯಾನ ವನ್ನೂ, ಯಯಾತಿಯ ದೃಷ್ಟಾಂತವನ್ನೂ ಹೇಳಿ ಗರ್ವಪಡಬಾರದೆಂದು ಆತನಿಗ ತಿಳಿಸುತ್ತಾನೆ ಸಂಧಿ೯ ಪ ೧೧-೧೨

೫ ಕುಂತಿಯು ಕೃಷ್ಣನಿಗೆ ಹೇಳುವ ವಿದುಲೋಪಾಖ್ಯಾನವನ್ನು ಕುಮಾರವ್ಯಾಸನು ಬಿಟ್ಟಿರುತ್ತಾನೆ ಇದಕ್ಕೆ ಕಾರಣವನ್ನು ಮುಂದೆ ಪು lxxxvi ರಲ್ಲಿ ಕೊಟ್ಟಿದೆ

ಕುಮಾರವ್ಯಾಸನು ಕೆಲವು ಕಡೆ ವ್ಯಾಸಭಾರತದ ಕಥಾಸನ್ನಿವೇಶ ವನ್ನು ಪೂರ್ತಿಯಾಗಿ ಅನುಸರಿಸಿರುತ್ತಾನೆ ಮತ್ತೆ ಕೆಲವುಕಡೆ ವ್ಯಾಸ ಭಾರತ ಮತ್ತು ಪಂಪಭಾರತ ಇವೆರಡರ ಅಭಿಪ್ರಾಯವನ್ನೂ ಒಟ್ಟು ಗೂಡಿಸುತ್ತಾನೆ

ಕವಿಯು ಕಥಾದೃಷ್ಟಿಯಿಂದ ಸಂಸ್ಕೃತ ಕನ್ನಡಗಳೆರಡರಲ್ಲೂ ಆದಿ ಭಾರತವನ್ನನುಸರಿಸಿ ತನ್ನ ಕಾವ್ಯವನ್ನು ರಚಿಸಿದ್ದರೂ ಮಧ್ಯೆ ಮಧ್ಯೆ ಕೆಲವು ಮಾರ್ಪಾಡುಗಳನ್ನು ತಾನೂ ಮಾಡಿರುತ್ತಾನಲ್ಲದೆ ಹೊಸ ಸನ್ನಿ ವೇಶವನ್ನೂ ಕಲ್ಪಿಸಿರುತ್ತಾನೆ

## ಕವಿಯು ಸೇರಿಸಿರುವ ಹೊಸ ಸನ್ನಿವೇಶಗಳು

೧ ವಿದುರನನ್ನು ದುರ್ಯೋಧನನು ತೊತ್ತಿನಮಗನೆಂದು ಮೂದಲಿಸಿದಾಗ ವಿದುರನು " ನೀನಲ್ಕೆ ಅಜಪುತ್ರ " ಎಂದು ಹೇಳುವುದು

೨ ಸಂಧಿವಿಚಾರದಲ್ಲಿ ಕೃಷ್ಣನು ಧರ್ಮರಾಜಾದಿಗಳ ಅಭಿ ಪ್ರಾಯವನ್ನು ಕೇಳುವ ಸಂದರ್ಭದಲ್ಲಿ ದ್ರೌಪದಿಗೂ ಹೇಳಿ ಕಳುಹಿಸಿ ಬರ ಮಾಡಿ ಆಕೆಯ ಅಭಿಮತವನ್ನು ಕೇಳುವುದು

೩ ವ್ಯಾಸಭಾರತದಲ್ಲಿ "ದ್ರುಪದರಾಜಪುರೋಹಿತನು ರಾಜಕಾರ್ಯವನ್ನು ಸಭೆಯಲ್ಲಿ ಹೇಳುತ್ತಾನೆ ಬಳಿಕ ಆತನಿಗೆ ರಾಜನು ಪ್ರತ್ಯುತ್ತರವನ್ನು ಹೇಳಿಕಳುಹಿಸುತ್ತಾನೆ ಅನಂತರ ಧೃತರಾಷ್ಟ್ರನು ಸಂಜಯನನ್ನು ಕರೆದು "ಸಂಜಯ! ನೀನು ಪಾಂಡವರ ಸಮೀಪಕ್ಕೆ ಹೋಗಿ ಯುದ್ಧವು ಆಗದಂತೆ ಮಾತನಾಡಿ ಶಾಂತಿಯನ್ನು ಉಂಟುಮಾಡು" ಎಂದು ಹೇಳುತ್ತಾನೆ ಅದರಂತೆಯೇ ಸಂಜಯನು ಹೋಗಿ ಪಾಂಡವರಿಗೆ ತಿಳಿಸುತ್ತಾನೆ ಆಗ ಧರ್ಮರಾಜನು, "ನಾನು ಕೃಷ್ಣನ ಅನುಯಾಯಿ, ಆತನ ಹೇಳಿಕೆಯಂತೆಯೇ ಈಗ ದೂತನನ್ನು ಕಳುಹಿಸಿರುತ್ತೇನೆ ನನಗೂ ಯುದ್ಧವಿಲ್ಲದೆ ಶಾಂತಿಯಿಂದಲೇ ಇರಬೇಕೆಂಬ ಅಭಿಪ್ರಾಯವಿದೆ ದುರ್ಯೋಧನನು ನನಗೆ ಐದು ಗ್ರಾಮಗಳನ್ನು ಕೊಟ್ಟರೆ ಆಗ ಇದು ಸಾಧ್ಯ, ಇಲ್ಲದಿದ್ದರೆ ಯುದ್ಧವು ಖಂಡಿತ ಕೃಷ್ಣನು ತಾನೇ ಧೃತರಾಷ್ಟ್ರನನ್ನು ಕಂಡು ಸಂಧಿಯ ವಿಚಾರವನ್ನು ಪ್ರಸ್ತಾಪಿಸುತ್ತಾನೆ ಎಂದು ಧೃತರಾಷ್ಟ್ರನಿಗೆ ತಿಳಿಸುವಂತೆ ಹೇಳಿಕಳುಹಿಸುತ್ತಾನೆ" ಎಂದಿದೆ

ಕುಮಾರವ್ಯಾಸನು ಈ ಸನ್ನಿವೇಶವನ್ನು ಸ್ವಲ್ಪ *ಮಾರ್ಪಾಡು ಮಾಡಿರುತ್ತಾನೆ

ದ್ರುಪದರಾಜಪುರೋಹಿತನ ಮಾತನ್ನು ಕೇಳಿ ದುರ್ಯೋಧನನು ಚಪಳಕರ್ಣನ ಕೂಡ ಯೋಚಿಸಿ ಕಾಳಗಮಾಡಲು ನಿಶ್ಚೈಸುತ್ತಾನೆ ಬಳಿಕ ಹರ್ಷದಿಂದ ಸಂಜಯನನ್ನು ಆಗಲೆ ಕರೆಸಿ, ಸಂಜಯ! ಅರಿನೃಪರ ಪಾಳಯಕ್ಕೆ ಹೋಗಿ "ಧರೆಯ ಬೇಡಿಸಿ ಕಳುಹಿದಿರಿ ಸಂಗರದೊಳಸಿಧಾರೆಯಲಿ ಕೊಡುವೆವು ಬಱಿದೆ ಕೊಟ್ಟರಧರ್ಮವು" ಎಂದು ಧರ್ಮತನಯಂಗೆ ತಿಳಿಸುವಂತೆ ಹೇಳಿಕಳುಹಿಸುತ್ತಾನೆ

ಧರ್ಮರಾಜನು ಇದಕ್ಕೆ ಪ್ರತ್ಯುತ್ತರವನ್ನು ಹೇಳಿಕಳುಹಿಸುವುದರಲ್ಲಿ, ದುರ್ಯೋಧನನಿಗ ಐದು ಪಟ್ಟಣಗಳನ್ನಾದರೂ ಕೊಡುವಂತೆ ತಿಳಿಸುವುದಾಗಲೀ, ಕೃಷ್ಣನು ಸಂಧಿಗಾಗಿ ಹಸ್ತಿನಾವತಿಗೆ ಹೋಗುವ ಸುದ್ದಿಯನ್ನಾಗಲೀ ಹೇಳಿಲ್ಲ

೪ ಕೃಷ್ಣನ ವಿಶ್ವರೂಪವನ್ನು ಕಂಡು ಆತನನ್ನು ಗಾಂಧಾರಿ ಮತ್ತು ಭಾನುಮತಿ ಇವರು ಪ್ರಾರ್ಥಿಸುತ್ತಾರೆ ಈ ಕಥಾಭಾಗವು ಮೂಲಭಾರತದಲ್ಲಿಲ್ಲ ಕವಿಯು ಇದನ್ನು ಹೊಸದಾಗಿ ಸೇರಿಸಿರುತ್ತಾನೆ

---

*ಧೃತರಾಷ್ಟ್ರನ ಸಭೆಯನ್ನು ದುರ್ಯೋಧನನ ಸಭೆಯನ್ನಾಗಿ ವ್ಯತ್ಯಾಸ ಮಾಡಿರುವುದರಿಂದ ದುರ್ಯೋಧನನ ಅಭಿಪ್ರಾಯಕ್ಕೆ ತಕ್ಕಂತೆ ಈ ಸಂದರ್ಭವನ್ನು ಮಾರ್ಪಡಿಸಿರುವುದು ನ್ಯಾಯವಾಗಿಯೇ ಇದೆ.

೫ ಸಂಧಿಯು ಮುರಿದ ಮೇಲೆ ಕೃಷ್ಣನು ಉಪಪ್ಲಾವ್ಯನಗರಕ್ಕೆ ಮರಳಿದಾಗ ತಾನು ಬಂದಿರುವ ಸುದ್ದಿಯನ್ನು ಧರ್ಮರಾಜನಿಗೆ ತಿಳಿಸು ವಂತೆ ಸಾತ್ಯಕಿಯೊಡನೆ ಹೇಳಿಕಳುಹಿಸುತ್ತಾನೆ ಬಳಿಕ ಧರ್ಮರಾಜಾದಿ ಗಳು ಎದುರ್ಗೊಂಡು ಬಂದು ಕೃಷ್ಣನನ್ನು ಮರ್ಯಾದೆಯಿಂದ ಕರೆದು ಕೊಂಡು ಹೋಗುತ್ತಾರೆ ಈ ಕಥಾಭಾಗವೂ ಕವಿಕೃತವೇ ಮೂಲಭಾರತ ದಲ್ಲಿಲ್ಲ

## ಕುಮಾರವ್ಯಾಸಭಾರತದ ಉದ್ಯೋಗ ಪರ್ವದಲ್ಲಿ ಕಂಡು ಬರುವ ಕೆಲವು ನ್ಯೂನತೆಗಳು

೧ ಕುಮಾರವ್ಯಾಸನು ದುರ್ಯೋಧನನ ಸಭೆಯನ್ನು ವರ್ಣಿಸು ವಾಗ ಸಭೆಯಲ್ಲಿ ಗಾಂಧಾರಿಯೂ ಇದ್ದಳು "ಸತಿಸಹಿತ ಧೃತರಾಷ್ಟ್ರಭೂಪತಿ ಸುತನ ಬಲವಂಕದಲಿ ಕನಕೋಚಿತಪೀಠದಲೆಸೆದಳು" ಎಂದು ಮೊದಲು ತಿಳಿಸಿ, ಮುಂದೆ ದುರ್ಯೋಧನನು ಕೃಷ್ಣನನ್ನು ಕಟ್ಟಲು ಯೋಚಿಸಿರುವ ವಿಚಾರವನ್ನು ಧೃತರಾಷ್ಟ್ರನು ಕೇಳಿ ದುರ್ಯೋಧನನಿಗೆ ಬುದ್ಧಿಹೇಳಲು "ಅವಳ ಬರಹೇಳಿತ್ತ ಮಗನಾಟವನು ನೋಡಲಿ ಹೆತ್ತಮೋಹದ ಹವಣುಗಳ ಬೆಸಗೊಂಬ ಗಾಂಧಾರಿಯನು ಕರೆಯೆಂದ ‖"

ಕು ವ್ಯಾ ಭಾ ಸಂ ೯ ಪ ೪೪

ಎಂದು ಗಾಂಧಾರಿಯನ್ನು ಕರೆಸುವಂತೆ ಹೇಳಿರುವುದರಿಂದ ಪರಸ್ಪರ ವಿರೋಧವು ಕಂಡುಬರುತ್ತದೆ

೨ ಕರ್ಣನನ್ನು ಬೇಡುವಂತ ಕೃಷ್ಣನು ಕುಂತಿಗೆ ಹೇಳುವ ಸನ್ನಿವೇಶ ವ್ಯಾಸಭಾರತದಲ್ಲಿಲ್ಲ ಅಲ್ಲಿ, ಕುಂತಿಯು ತಾನಾಗಿಯೇ ಕರ್ಣನ ಪರಾಕ್ರಮಕ್ಕೆ ಹೆದರಿ ತನ್ನ ಐದು ಮಕ್ಕಳನ್ನೂ ಕಾಪಾಡುವಂತೆ ಆತನನ್ನು ಬೇಡಲು ಹೋಗುತ್ತಾಳೆ ಎಂದಿದೆ

ಪಂಪಭಾರತದಲ್ಲಿ ಈ ರೀತಿ ಇದೆ—

"ಅಂತು ಸಹಜಕವಚರತ್ನಕುಂಡಲಂಗಳ್ ನೆತ್ತರ್ ಪನಪನಪನಿಯೆ ತಿದಿಯುಗಿವಂತುಗಿದು ಕೊಟ್ಟುದರ್ಕೆ ಮೆಚ್ಚಿ ದೇವೇಂದ್ರನಾತಂಗಮೋಘ ಶಕ್ತಿಯನಿತ್ತನಾತನಂ ನಾನುಮೆನ್ನ ಬಲ್ಲ ಮಾಳ್ಕೆಯಿಂ ಭೇದಿಸಿದಪ್ಪೆಂ ನೀಮುಂ ನಿಮ್ಮ ಚೊಚ್ಚಲಮಗನಪ್ಪ ಸೂರ್ಯಸೂನುವಂ ಸೂರ್ಯದಿನ ದಂದು ಕಂಡು ಕಾರ್ಯಸಿದ್ಧಿಯಂ ಮಾಡಿಬನ್ನಿಂ" ಎಂದು ಕುಂತಿಗೆ ಕೃಷ್ಣನು ತಿಳಿಸುತ್ತಾನೆ ಅದರಂತೆ ಆಕೆ ಕರ್ಣನ ಸಮೀಪಕ್ಕೆ ಬರುತ್ತಾಳೆ ಆಗ ಸೂರ್ಯನು "ಕೊಂತಿ ಹರಿಯ ಮತದಿಂ ಕಾಯಲ್ಕೊಡರಿಸಿ ಬಂದಳ್ । ಸುತ ರಂ ಕುಡದಿರ್ ಪುರಿಗಣೆಯನೆನಿತುಲಲ್ಲೆ ೖಸಿದೊಡಂ ‖" ಎಂದು ಕರ್ಣನಿಗೆ ಹೇಳುತ್ತಾನೆ ಕುಂತಿಯು, ಮಗನೇ! ನಿನ್ನನ್ನು ನಂಬಿ ನಿನ್ನ ಸಹೋದ

ರರು ನಿನ್ನ ಅಪ್ಪಣೆಯಂತೆ ನಡೆಯುವರು , ನೀನು ರಾಜ್ಯಭಾರ ಮಾಡು , ಅವರು ದುರ್ಯೋಧನನ ಪ್ರೀತಿಗೆ ಪಾತ್ರರಾಗಿ ನಿನ್ನ ಅನುಜ್ಞೆಯಲ್ಲಿರುವುದರಿಂದ ಎರಡು ಕಡೆಯಲ್ಲಿಯೂ ಮನಸ್ತಾಪಕ್ಕೆ ಸ್ವಲ್ಪವೂ ಅವಕಾಶವಿರದು, ಇದಕ್ಕೆ ನೀನು ಒಡಂಬಡಬೇಕು " ಎಂದು ಹೇಳುತ್ತಾಳೆ ಕರ್ಣನು ಇದನ್ನು ಒಪ್ಪುವುದಿಲ್ಲ, ಕೊನೆಗೆ ಕುಂತಿ ಕರ್ಣನ ಛಲವನ್ನು ಕಂಡು ಮನಮರುಗಿ "ನಾನು ಕೆಟ್ಟೆನು , ಚಂದ್ರ ವಂಶವು ಇಂದೇ ನಾಶವಾಗಿಹೋಗುವುದಲ್ಲವೇ ? ನನಗಿನ್ನು ಬಾಳುವ ಆಸೆ ಎಲ್ಲಿಂದ ಬಂದೀತು ? ಉಳಿದ ಮಕ್ಕಳ ಆಸೆಯನ್ನೂ ನಾನು ಬಿಟ್ಟುಬಿಟ್ಟೆನು" ಎಂದು ಹೇಳುತ್ತಾಳೆ ಆಗ ಕರ್ಣನು "ಪಿಡಿಯೆಂ ಪುರಿಗಣೆಯಂ" ಎಂದು ಹೇಳುತ್ತಾನೆ

ಕುಮಾರವ್ಯಾಸನು ಈ ಸಂದರ್ಭದಲ್ಲಿ ಪಂಪಭಾರತದಿಂದ ಕೆಲವು ಅಂಶಗಳನ್ನು ಮಾತ್ರ ತೆಗೆದುಕೊಂಡಿರುತ್ತಾನೆ ಇಂದ್ರನು ಕರ್ಣನಿಗೆ ಕೊಟ್ಟ ಶಕ್ತ್ಯಾಯುಧದ ವಿಷಯವನ್ನು ಕೃಷ್ಣನು ಕುಂತಿಗೆ ತಿಳಿಸುವ ವಿಚಾರವಿಲ್ಲ, ಆದಕಾರಣ ವ್ಯಾಸಭಾರತದಲ್ಲಿರುವಂತೆ ಕುಂತಿಯು, ತನ್ನ ಮಕ್ಕಳನ್ನು ಕಾಪಾಡಲು ಕೇಳಿಕೊಂಡಂತೆ ಹೇಳಿದ್ದರೆ ಸರಿಯಾಗಿತ್ತು

ಕರ್ಣನಿಗಿರುವ ಈ ಅಸಾಧಾರಣ ಶಕ್ತ್ಯಾಯುಧದ ಅರಿವಿಲ್ಲದ ಕುಂತಿ ಆತನನ್ನು "ಹೋದ ಬಾಣವ ಮರಳಿ ತೊಡದಿರು" ಎಂದು ಕೇಳಿಕೊಳ್ಳುವಂತೆ ಹೇಳಿರುವುದು ಸರಿಯಲ್ಲ ಕರ್ಣನಿಗೆ ದೇವೇಂದ್ರನು ಕೊಟ್ಟಿರುವ ಈ ಅಮೋಘಶಕ್ತಿ ವಿಚಾರವನ್ನು ಕುಂತಿಗೆ ಕೃಷ್ಣನು ಹೇಳುವ ಸನ್ನಿವೇಶವನ್ನು ಕುಮಾರವ್ಯಾಸನು ಬಿಟ್ಟಿರುವುದು ಒಂದು ಲೋಪ

## ವರ್ಣನೆ—ಅಲಂಕಾರಗಳು

ಕುಮಾರವ್ಯಾಸನಿಗ ಕೇವಲ ಕಥೆಯಲ್ಲಿ ಮಾತ್ರ ದೃಷ್ಟಿಯಿಲ್ಲ ಕಾವ್ಯಮರ್ಯಾದೆಯಾದ ಅಲಂಕಾರ ಮತ್ತು ವರ್ಣನೆಗಳಲ್ಲೂ ದೃಷ್ಟಿಯುಂಟು

ಈತನಿಗ ರಾಜಾಶ್ರಯವಿದ್ದಿತೆಂದು ತಿಳಿಸಲು ಕಾರಣಗಳು ಕಾವ್ಯದಲ್ಲಿ ಕಂಡುಬರುವುದಿಲ್ಲ ಆದರೂ ಕವಿಯು ರಾಜಾಸ್ಥಾನದ ವರ್ಣನೆಯನ್ನು ಅನೇಕ ಪದ್ಯಗಳಿಂದ ಮಾಡಿರುತ್ತಾನೆ ಧರ್ಮರಾಜನ ಆಸ್ಥಾನ ವರ್ಣನೆಗಿಂತ ಕೌರವನ ರೀತಿಯ ಇರವನ್ನು ತೋರ್ಪಡಿಸುವುದಕ್ಕಾಗಿ ಆತನ ಆಸ್ಥಾನದ ಚಿತ್ರವನ್ನು ವಿವರವಾಗಿ ಚಿತ್ರಿಸಿರುತ್ತಾನೆ ಇದಲ್ಲದೆ ಸಮುದ್ರ, ಸೇನೆ, ಉದ್ಯಾನ ಇವುಗಳ ವರ್ಣನೆಯನ್ನು ಸಮಯಾವರಿತು ಮಾಡಿರುತ್ತಾನೆ

ಕವಿಯು ಕೌರವನ ಆಸ್ಥಾನವನ್ನು ವರ್ಣನೆಮಾಡುವ ಸಂದರ್ಭದಲ್ಲಿ "ಹಲವುಪಮೆಯುತ್ಪ್ರೇಕ್ಷೆ ಸುಲಲಿತಾಲಂಕೃತಿ ಚಮತ್ಕೃತಿಗಳ ಚತು

ಭಾಷಾವಿಶಾರದ ಕವಿಗಳೊಪ್ಪಿದರು ॥'' ''ನುಡಿದು ತಲೆದೂಗಿಸುವ ಮಣಿಗನ್ನಡದಲಾಹಾ ಎನಿಸಿ ಮೆಚ್ಚನು ಪಡೆವ ವಾಗ್ಮಿಗಳೋದಿ ಹೊಗಳಿಸಿ ಕೊಂಬ ಗಮಕಿಗಳು'' ಎಂದು ಹೇಳಿರುವುದನ್ನು ನೋಡಿದರೆ, ತನ್ನ ಕಾವ್ಯದಲ್ಲೂ ರೂಪಕ, ಉಪಮಾನ, ಉತ್ಪ್ರೇಕ್ಷಾಲಂಕಾರಗಳೇ ಅಧಿಕ ವೆಂದೂ, ಈ ಕಾವ್ಯವನ್ನು ಜನರು ಗಮಕಿಗಳಿಂದ ಓದಿಸಿ ಕೇಳಿ ಮೆಚ್ಚುತ್ತಾರೆಂದೂ ತನ್ನ ಪ್ರೌಢಿಮೆಯನ್ನು ಗ್ರಂಥದಲ್ಲಿ ಸೂಚಿಸಿರುತ್ತಾನೆ ಕವಿಯು ಚತುರ್ಭಾಷಾಪಂಡಿತನಾಗಿದ್ದಿರಬಹುದು ನಮಗೆ ತಿಳಿದಂತೆ ಈತನಿಗೆ ಸಂಸ್ಕೃತ ಮತ್ತು ಕನ್ನಡ ಈ ಎರಡು ಭಾಷೆಗಳ ಪಾಂಡಿತ್ಯ ಪೂರ್ಣವಾಗಿದೆ ಎನ್ನುವ ಅಂಶವು ಸ್ಪಷ್ಟವಾಗಿದೆ ಕಾವ್ಯದಲ್ಲಿ ಮರಾಠಿ ಪದಗಳನ್ನೂ ಅನೇಕವೇಳೆ ಪ್ರಯೋಗಿಸಿರುವ ಕಾರಣ ಕವಿಗೆ ಮರಾಠಿಯ ಪರಿಚಯವೂ ಇದ್ದಿರಬಹುದು ಮತ್ತೊಂದು ಭಾಷೆ ಪ್ರಾಕೃತವಿರ ಬಹುದು

ಅಲಂಕಾರ ಮತ್ತು ವರ್ಣನೆಗಳಿಗೆ ಉದಾಹರಣೆಗಳು—

## ಉತ್ಪ್ರೇಕ್ಷೆ

''ಹರಿಯು ಪದಕಮಲಾಭಿಷೇಕದ ವರಪಯೋಬಿಂದುಗಳು ಕೌರವ
ನರಮನೆಯನೊಳಕೊಂಬವೊಲು ಕಡಲಾಗಿ ಹರಿತರಲು ।
ಅರರೆ ಪುರಹರನೊಡನೆ ಹಾಲನಶರಧಿ ಮೇರೆಯ ಮುಱಿದುದಿಳೆಗ
ಚ್ಚರಿ ಎನುತ ಭೀಷ್ಮಾದಿಗಳು ಹೊಗಳಿದರು ಹರುಷದಲಿ ॥

ಸಂ ೮ ಪ ೫

ಮಿಸುಪ ತಮ್ಮ ಮುಖೇಂದುವನು ಸ್ವೈರಿಸದ ಚಂದ್ರನ ಕಿತ್ತು ನಭದಲಿ
ಬಿಸುಟು ಬೇರ್ಗಳ ಹಿಡಿದರೋ ಹೇಳೆನಲು ಸಭೆಯೊಳಗೆ ।
ಶಶಿವದನೆಯರ ಕೈಯಸೀಗುರಿಯೆಸೆದುದಿಕ್ಕೆಲದಲಿ

ಸಂ ೮ ಪ ೩೪

ಕುಲದವನ ಹೃದಯಾಂಧಕಾರವ ಕಳಚಲೆಂದು ಹಿಮಾಂಶು ಹರಹಿದ
ನೆಳೆಯಬೆಳೆದಿಂಗಳನೆನಲು ಸುರರಿಪುಕುಲಾಂತಕನು ।
ತೊಳಪ ದಶನಮಯೂಖತತಿ ಹೊಳೆಹೊಳೆಯೆ ನುಡಿದನು

ಸಂ ೮ ಪ ೨೪

ನವಬಲಾಹಕದೊಳಗೆ ಮಿಂಚಿನ ಗವಿಸಹಿತ ಮಣಿಮೇಘ
ವಾವಿರ್ಭವಿಸಿತೆನೆ ದಂಡಿಗೆಯನಿಳಿದಳು'' ಸಂ ೬ ಪ ೧೮

## ರೂಪಕ ಮತ್ತು ಉಪಮಾ

''ಭ್ರೂಲತೆಯ ಸುರಚಾಪದುರುಕೇಶಾಳಿಗಳ ಕಾರ್ಮುಗಿಲವಾಂಗದ

ಸಾಲ ಕುಡಿಮಿಂಚುಗಳ ನೂಪುರರವದ ಮೊಳಗುಗಳ ।
ಆ ಲತಾಂಗಿಯ ಗಮನವೇ ಮಳೆಗಾಲದಂತಿರೆ" ಸಂ ೬ ಪ. ೧೭

**ಉಪಮಾ**

" ಕಾರಿರುಳಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ ದಾಡೆಗ
ಳೋರಣದ ಹೊಳೆಹುಗಳ ಹೊಗರಿಡುವೊಡಲ ಕಪ್ಪುಗಳ ।"
ಸಂ. ೧೧ ಪ ೨೮

**ರೂಪಕ**

" ಬಿಂಬವನು ಬೇಯಿರಿಸಿ ಬಹುಮತವೆಂಬ ಬಿಸಿಲಲಿ
ರಾಜನಯವೆಂದೆಂಬ ನೈದಿಲು ನಲುವುಗೆಟ್ಟಿದೆ" ಸಂ ೧೧ ಪ ೧೨

**ದೃಷ್ಟಾಂತ**

" ಬಂಧುಕೃತ್ಯದ ಮಾತು ಸೂರ್ಯಾಂಗಂಧಕಾರವು ಸೇರುವುದೆ "
ಸಂ ೯ ಪ ೨೩

**ಲೋಕಸ್ವಭಾವದ ವರ್ಣನೆ**

" ಪರಿಣತಪ್ರೌಢಿಗಳಿಗಂತಃಕರಣ ನೆನೆವುದು ಸುಜನರಿಗೆ ನಿ
ಷ್ಠುರತೆಗಲ್ಲದೆ ಮಾನವನೀಯದು ಮಹಿಯ ಮೂಢಜನ ।
ಕರಗುವುದು ಶಶಿಕಾಂತ ಚಂದ್ರನಕಿರಣ ತಾಗಲು ವಜ್ರಹತಿಗ
ಬ್ಬರಿಸದಲ್ಲದೆ ಗಿರಿಗಳಳುಕವು ಭೀಷ್ಮ ಕೇಳೆಂದ ॥" ಸಂ ೯ ಪ ೪೨

**ಚಿಂತೆಯ ವರ್ಣನೆ**

" ಕೊರಳ ಸೆರೆ ಹಿಗ್ಗಿದವು ದೃಗುಜಲವುರವಣಿಸಿ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ"
ಸಂ ೧೦ ಪ ೯

**ತಂಗಾಳಿಯ ವರ್ಣನೆ**

" ಎಳಲತಯನೆಱಗಿಸುತ ಮಲೆತರೆ ತಳಿರುಗಳನಲ್ಲಾಡಿಸುತ ಪರಿ
ಮಳದ ಕಪ್ಪವ ಕೊಳುತ ಮಱಿದುಂಬಿಗಳ ಗೀತವನು ।
ಸಲೆ ಸೊಗಸಿ ಮಕರಂದನದಿಯಲಿ ತಳಿತು ಬೀಡನು ಬಿಡುತ ವನದಲಿ
ಸುಳಿದುದೈ ತಂಗಾಳಿ ಭೂಮಿಪಾಲನಂದದಲಿ ॥" ಸಂ ೭ ಪ ೨೫

## ಪಾತ್ರವಿಚಾರ

**ಕುಂತಿ-ದ್ರೌಪದಿ** — ಮೂಲಭಾರತದಲ್ಲಿ ಕುಂತಿಯು ವೀರಕ್ಷತ್ರಿಯ
ರಮಣಿ ಎನ್ನುವುದು ಸ್ಪಷ್ಟವಾಗಿದೆ ಕುಮಾರವ್ಯಾಸನಿಗೆ ಅದು

ಸರಿತೋರಲಿಲ್ಲ ಕರ್ಣನನ್ನು ಬೇಡಲು ಹೋದ ಆಕೆ ವೀರರಮಣಿ ಆಗಬಲ್ಲಳೇ ? ಎನ್ನುವುದೇ ಆತನ ಯೋಚನೆ ಅದಕ್ಕಾಗಿಯೇ, ಕುಂತಿಯು ಕೃಷ್ಣನಿಗೆ ಹೇಳುವ ವಿದುಲೋಪಾಖ್ಯಾನವನ್ನೂ, ತನ್ನ ಮಕ್ಕಳಿಗೆ ಆತನೊಡನೆ ಹೇಳಿಕಳುಹಿಸುವ ವೀರರಿಗೆ ತಕ್ಕ ಸಂದೇಶಗಳನ್ನೂ ಕುಮಾರವ್ಯಾಸನು ತನ್ನ ಕಾವ್ಯದಲ್ಲಿ ಬಿಟ್ಟಿರುತ್ತಾನೆ ಆದರೆ ಆ ವೀರಕ್ಷತ್ರಿಯರಮಣೀಪಟ್ಟವನ್ನು ದ್ರೌಪದಿಗೆ ಕೊಟ್ಟಿರುತ್ತಾನೆ

ಕೃಷ್ಣನು ಸಂಧಿಯ ವಿಚಾರದಲ್ಲಿ ಭೀಮನ ಅಭಿಪ್ರಾಯವನ್ನು ಕೇಳಿದಾಗ ಆತನು ಮೊದಲು ಸಂಧಿಗೆ ಒಪ್ಪುತ್ತಾನೆ ಈ ಅಭಿಪ್ರಾಯವನ್ನು ತಿಳಿದ ಬಳಿಕ ದ್ರೌಪದಿಯು

> " ತನಯರೈವರು ವೀರಸಹದೇವನು ಘಟೋತ್ಕಚನೀ ಸುಭದ್ರಾ
> ತನಯನೆನ್ನಯ ತಂದೆ ಮೂಱಕ್ಷೋಹಿಣೀ ಸೇನೆ ।
> ಇನಿಬರೇ ಕಾದುವರು ದುಶ್ಶಾಸನನ ಕರುಳನು ತೆಗೆದು ಕುರುಕುಲ
> ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ ॥ "
>
> ಸಂ ೬ ಪ ೨೬

ಎಂದು ಪತಿಗಳನ್ನು ಹಂಗಿಸುತ್ತಾಳೆ ಇದನ್ನು ನೋಡಿದರೆ ಆಕೆಯ ಕ್ಷಾತ್ರಭಾವ ಎಂತಹುದು ಎನ್ನುವುದು ಸ್ಪಷ್ಟಪಡುತ್ತದೆ ಭೀಮನಿಗೆ ಚೈತನ್ಯ ಕೊಟ್ಟು ಸಂಧಿಗೆ ವಿಮುಖನನ್ನಾಗಿ ಮಾಡಿದ ವೀರರಮಣಿ ದ್ರೌಪದಿ ಈಕೆ ಕೃಷ್ಣನ ಭಕ್ತೆ ಅದಕ್ಕಾಗಿಯೇ ಇವಳನ್ನು ಕಾಪಾಡಲು ಕೃಷ್ಣನು ಬದ್ಧಕಂಕಣನಾಗಿದ್ದುದು

ಕುಮಾರವ್ಯಾಸನು ಈ ರೀತಿ ಕುಂತೀ-ದ್ರೌಪದಿಯರ ಪಾತ್ರಗಳಲ್ಲಿ ಮಾಡಿರುವ ಬದಲಾವಣೆಯು ಯುಕ್ತಿಯುಕ್ತವಾಗಿ ಕಂಡುಬರುತ್ತದೆ

**ಕೃಷ್ಣ** —ಕೃಷ್ಣ ಕಪಟನಾಟಕಸೂತ್ರಧಾರಿ ಭಾರತವನ್ನು ಕೃಷ್ಣನ ಚರಿತ್ರೆಯೆಂದೇ ಹೇಳಬಹುದು ಈ ಭಾರತಕಥೆಯಲ್ಲಿ ಕೃಷ್ಣನ ಪಾತ್ರವೇ ಮುಖ್ಯ ಅದರಲ್ಲೂ ಉದ್ಯೋಗಪರ್ವದಲ್ಲಿ ಕೃಷ್ಣನ ಹೆಸರಿಲ್ಲದ ಒಂದು ಸಂಧಿಯೂ ಇಲ್ಲ ಕೃಷ್ಣನು ಸಾಮಾನ್ಯ ಮನುಷ್ಯನಲ್ಲ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಾಗಿ ಭಗವಂತನೇ ಶ್ರೀ ಕೃಷ್ಣನಾಗಿ ಅವತರಿಸಿರುತ್ತಾನೆ ಈ ವಿಚಾರ ದುರ್ಯೋಧನನಿಗೆ ತಿಳಿದಿದ್ದಿತು ಅದಕ್ಕಾಗಿಯೇ ಸಹಾಯ ಕೇಳಲು ಮತ್ತಾರಲ್ಲಿಗೂ ಹೋಗದ ದುರ್ಯೋಧನ ತಾನೇ ಕೃಷ್ಣನನ್ನು ಸಹಾಯ ಕೇಳಲು ಹೋಗುತ್ತಾನೆ ಕೃಷ್ಣನು ಸೂತ್ರಧಾರಿ ಎನ್ನುವುದನ್ನು,

> " ಹಳಚವವು ಹಾಹೆಗಳು ಸೂತ್ರವ ನಲುಗಿದರೆ ತತ್ಪುಣ್ಯಪಾಪಾ
> ವಳಿಗಳಾ ಹಾಹೆಗಳಿಗುಂಟೇ ಸೂತ್ರಧರನಿರಲು ।

ಕೊಲುವನನ್ಯರನನ್ಯರಿಂದವೆ ಕೊಲಿಸುವನು ಕಮಲಾಕ್ಷನಲ್ಲದೆ
ಯುಳಿದ ಜೀವವ್ರಾತಕೀ ಸ್ವಾತಂತ್ರ್ಯವಿಲ್ಲೆಂದ ॥" ಸಂ ೯ ಪ ೭೩

ಎಂದು ದುರ್ಯೋಧನನೇ ಹೇಳುತ್ತಾನೆ.

ಕೃಷ್ಣನೆಂದರೆ ಕವಿಗೆ ಪರಮಾನಂದ ಆತನನ್ನು ವರ್ಣಿಸಲು ಆರಂಭಿಸಿದರೆ ಆತನಿಗೆ ಎಚ್ಚರವೇ ಇರುವುದಿಲ್ಲ ಅದನ್ನೇ ಈ ಕಾವ್ಯದಲ್ಲಿ ಭಾಗವತಶಿರೋಮಣಿಯಾದ ವಿದುರನ ನೆಪದಲ್ಲಿ ವರ್ಣಿಸಿರುತ್ತಾನೆ ಭಗವದ್ಭಕ್ತನೆಂದರೆ ಕವಿಗೆ ಗೌರವ ಹೆಚ್ಚು ಕೃಷ್ಣನನ್ನು ಸ್ತುತಿಸುವುದರಲ್ಲಿ ಕವಿಗೆ ತಣಿವೇ ಇಲ್ಲ ಕೃಷ್ಣನು ವಿದುರನ ಮನೆಗೆ ಬಂದಾಗ ಹೇಗಿದ್ದನೆಂಬುದನ್ನು,

"ಸಿರಿಮೊಗದ ಕಿಱುಬೆಮರ ತೇಜಿಯಖುರಪುಟದ ಕೆಂಧೂಳಿ ಸೋಂಕಿದ
ಸಿರಿಮುಡಿಯ ಕೊನೆವಿೞಾಸೆಯಲಿ ಕೆಂಪಡರ್ದ ರೇಣುಗಳ ।
ಖರಮರೀಚಿಯ ಝಳಕೆ ಬಾಡಿದ ತರುಣತುಳಸಿಯ ದಂಡೆಯೊಪ್ಪುವ
ಗರುವದೇವನ ಬರವ ಕಂಡನು ಬಾಗಿಲಲಿ ವಿದುರ ॥"

ಸಂ ೮ ಪ ೭

ಎಂದು ಕವಿಯು ವರ್ಣಿಸಿರುತ್ತಾನೆ

ಭಕ್ತರನ್ನು ಕಾಪಾಡುವುದೇ ಕೃಷ್ಣನ ಕರ್ತವ್ಯ ಎನ್ನುವುದನ್ನು ಕವಿಯು ಉದ್ಯೋಗಪರ್ವದಲ್ಲಿ ಸ್ಪಷ್ಟಪಡಿಸಿರುತ್ತಾನೆ ಕಾವ್ಯಾರಂಭದಲ್ಲಿ "ಇದು ವಿಚಾರಿಸೆ ಬಱಿಯ ತುಳಸಿಯವುದಕದಂತಿರೆಯಿಲ್ಲ ನೋಳ್ಪುದು ಪದುಮನಾಭನ ಮಹಿಮೆ ಧರ್ಮವಿಚಾರಮಂತ್ರವನು" ಎಂದು ಹೇಳಿರುವುದನ್ನು ಭಾರತಸಾರವಾದ ಈ ಉದ್ಯೋಗಪರ್ವದಲ್ಲಿ ಕಾಣಬಹುದು

ಕೃಷ್ಣನು ತನ್ನ ಭಕ್ತರಿಗಾಗಿ ಯಾವ ಕಾರ್ಯವನ್ನಾದರೂ ಮಾಡುವುದಕ್ಕ ಸಿದ್ಧನಾಗಿರುವನು ಎನ್ನುವುದನ್ನು "ತನಗಹಂಕೃತಿಯಿಲ್ಲ ವೈರೋಚನಿಯ ಪಡಿಹಾಱಿಕೆ ಕಿರೀಟಿಯ ಮನೆಯ ಬಂಡಿಯ ಬೋವತನ" ಎಂದು ಹೇಳಿರುತ್ತಾನೆ

ಭಕ್ತೆಯಾದ ದ್ರೌಪದಿಯನ್ನು ರಕ್ಷಿಸುವ ಭಾರ ತನಗೆ ಸೇರಿದುದು ತಾನು ಭಜಕರಿಗೆ ಭಂಟ, ನೆನೆವರ ನಂಟ ಎನ್ನುವುದನ್ನು,

"ಕಮಲಮುಖಿ ಸುಲಿವಡೆದು ಲಕ್ಷ್ಮೀರಮಣ ಲಕ್ಷ್ಮೀರಮಣ ಲಕ್ಷ್ಮೀ
ರಮಣ ಎಂದೊಱಲಿದರೆ ಸಂಜಯ ನೊಂದೆ ನಾನೆಂದ"

"ಕಾವುದೈ ಗೋವಿಂದ ಸಲಹೈ ದೇವಕೀಸುತ ಗಂಡನೈವರ
ಭಾವ ಬೆಟ್ಟಿತು ನೀನಲ್ಲೈ ದೇಸಿಗರ ದೇವನಲ್ಲೈ ।

ದೇವ ಕೆಟ್ಟೆನು ಕೆಟ್ಟೆನೈ ಕರುಣಾವಲೋಕನದಿಂದ ಸಲಹೈ
ಜೀವನವನೆನಂದೊಳಿಲಿದರೆ ಹಂಗಿಗನು ತಾನೆಂದ ॥
ಘಂಟರಾವ್ ಭಜಕರಿಗೆ ನೆನೆವರ ನಂಟರೆಮಗೊಲಿದಂತೆ
ಹೊಗಳದರೆಂಟುಮುಡಿ ಮೆಚ್ಚುವೆವು ಮೆಚ್ಚೆವು ತರ್ಕ ಸಾಧಕರ॥ "

ಸಂ ೬ ಪ ೫–೭–೮

ಎಂದು ಕೃಷ್ಣನಿಂದಲೇ ಹೇಳಿಸಿರುತ್ತಾನೆ

ಕೃಷ್ಣನು, ಭಕ್ತರಿಗಾಗಿ ತಾನು ಮಾನಹಾನಿಗಳನ್ನೂ ಲೆಕ್ಕಿಸುವುದಿಲ್ಲ ಎನ್ನುವುದನ್ನು

" ಎನಗೆ ನಿಮ್ಮಯ ದೂಸಱಿಂದಾಯ್ತಿನಿತುಸಭೆಯಲಿ ಮಾನಹಾನಿಗಳು" ಎಂದು ಕೃಷ್ಣನು ಹೇಳಲು, ಧರ್ಮರಾಜನು " ಖಳರು ಮಾಡಿದ ಖತಿಯನೆಮ್ಮೊಳು ತಿಳಿದು ಮಱೆಯಲು ಬೇಕು ಕರುಣಾಜಲಧಿ" ಎಂದು ಕೃಷ್ಣನ ಅಂಘ್ರಿಗಳನ್ನು ಹಿಡಿಯುತ್ತಾನೆ ಆಗ ಕೃಷ್ಣನು " ಬಱಿದೆ ಕಾಡದಿರೇಳು ಮನದಲಿ ಮಱೆದವಾಗಳೆ" ಎಂದು ಹೇಳುತ್ತಾನೆ ಬಳಿಕ ಭೀಮನು "ಹಾನಿಯನು ತಾ ಹೊತ್ತು ಭೃತ್ಯರ ಮಾನವನು ಪತಿಕರಿಸುವುದು ಒಡೆಯನ ಗುಣ" ಎಂದು ಹೇಳುವಂತೆ ಕವಿಯು ತಿಳಿಸಿರುತ್ತಾನೆ

ಭೂಭಾರವನ್ನು ಇಳುಹಲು ಭಗವಂತನೇ ಕೃಷ್ಣನಾಗಿ ಭೂಮಿಯಲ್ಲಿ ಜನ್ಮವೆತ್ತಿರುತ್ತಾನೆ ಉದ್ಯೋಗಪರ್ವದಿಂದ ಮುಂದಿನ ಕಥಾಭಾಗದಲ್ಲಿ ಈ ಕಾರಣದಿಂದಲೇ ಕೃಷ್ಣನ ಚಟುವಟಿಕೆ ಹೆಚ್ಚು ಇದನ್ನೇ ಕವಿಯು,

" ಭಾರಹೆಚ್ಚಿದಡೊಱಲಿ ಧರಣೀನಾರಿ ಬಿನ್ನಹಮಾಡಿದಡೆ ದೈತ್ಯಾರಿ ಬಿಜಯಂಗೈದನಿಲ್ಲಿಗೆ ಮನುಜವೇಷದಲಿ । ಭೂರಿದನುಜರನೊರಸಿದನು ಕೈಯಾರೆ ಬಳಿಕರ್ಜುನನ ಕೈಯಲಿ ಕೌರವರ ಕೊಲಿಸುವನು " ಎಂದು ದುರ್ಯೋಧನನಿಂದಲೇ ಹೇಳಿಸುತ್ತಾನೆ

ಭೂಭಾರವಿಳಿಸಲು ಜನ್ಮವೆತ್ತಿ ಖಳರನ್ನೆಲ್ಲಾ ಸಂಹರಿಸಿ ತನ್ನ ಕಾರ್ಯವನ್ನು ಸಾಧಿಸುವ ಭಕ್ತಕುಟುಂಬಿ ಕೃಷ್ಣ ಎನ್ನುವುದನ್ನು ಕುಮಾರವ್ಯಾಸನು ಸ್ಪಷ್ಟಪಡಿಸಿರುತ್ತಾನೆ

**ದುರ್ಯೋಧನ** ––ಕುಮಾರವ್ಯಾಸನು ದುರ್ಯೋಧನನ ಪಾತ್ರದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿರುತ್ತಾನೆ

ವ್ಯಾಸ ಮತ್ತು ಪಂಪ ಇವರಿಗಿಂತ ಕುಮಾರವ್ಯಾಸನು, ದುರ್ಯೋಧನನು ಶರನೆನ್ನುವುದನ್ನು ಚೆನ್ನಾಗಿ ಚಿತ್ರಿಸಿರುತ್ತಾನೆ. ವ್ಯಾಸ ಮತ್ತು ಪಂಪಭಾರತಗಳೆರಡರಲ್ಲೂ ದುರ್ಯೋಧನನು ಹಸ್ತಿನಾವತಿಗೆ ಬಂದ

ಶ್ರೀ ಕೃಷ್ಣನಿಗೆ ಸತ್ಕಾರ ಮಾಡುತ್ತಾನೆ ಇದು ಕುಮಾರವ್ಯಾಸನಿಗೆ ಸರಿ ತೋರಲಿಲ್ಲ ಆದಕಾರಣ ಈತನು ಈ ಅಂಶವನ್ನು ತೇಲಿಸಿರುತ್ತಾನೆ ಕೃಷ್ಣನೇ ತನ್ನ ಮನೆಗೆ ಬರುವನೆಂದು ಆತನ ಸತ್ಕಾರಕ್ಕೆ ಎಲ್ಲ ಸಲಕರಣೆಗಳನ್ನೂ ಕೌರವನು ಸಿದ್ಧಪಡಿಸುತ್ತಾನೆ ಆದರೆ ಕೃಷ್ಣನು ಆತನ ಮನೆಗೆ ಹೋಗುವುದಿಲ್ಲ ಅದಕ್ಕಾಗಿಯೇ ದುರ್ಯೋಧನನು ಸಭೆಗೆ ಬಂದ ಕೃಷ್ಣನನ್ನು ಸತ್ಕರಿಸುವ ಯೋಚನೆಯನ್ನೇ ಬಿಟ್ಟು ಆತನು ಬಂದರೂ, ತಾನು ಆಸನದಿಂದ ಕದಲದೆ ಕುಳಿತಿದ್ದುದು ದುರ್ಯೋಧನನ ಶಠತ್ವವನ್ನು ಕಂಡ ಕೃಷ್ಣನು ಅದಕ್ಕೆ ತಕ್ಕ ಪ್ರಾಯಶ್ಚಿತ್ತಮಾಡಬೇಕೆಂದು ಆತನನ್ನು ಆಸನದಿಂದ ಉರುಳಿ ಬಂದು ತನ್ನ ಕಾಲಿನಮೇಲೆ ಬೀಳುವಂತ ಮಾಡುತ್ತಾನೆ

ಈ ಸನ್ನಿವೇಶದಿಂದ ರಾಜನಾದ ದುರ್ಯೋಧನನ ಸ್ಥಾನಮಾನಗಳಿಗೆ ಕುಂದು ತೋರಿಬಂದರೂ, ಕವಿಯು ಕೃಷ್ಣಭಕ್ತನಾದ ಕಾರಣ ತನ್ನ ಒಡೆಯನಿಗೆ ವಿರೋಧಿಯಾದ ಈತನಿಗೆ ಅವಮಾನಪಡಿಸಬೇಕೆಂಬ ಆವೇಶದಿಂದಲೋ, ಭಗವಂತನಾದ ಶ್ರೀಕೃಷ್ಣನ ಮಹಿಮೆಯನ್ನು ಎಲ್ಲರಿಗೂ ತೋರ್ಪಡಿಸುವುದಕ್ಕಾಗಿಯೋ ಈ ವಿಧವಾದ ಸನ್ನಿವೇಶವನ್ನು ಕುಮಾರವ್ಯಾಸನು ಸೇರಿಸಿರಬಹುದು

ಶ್ರೀಕೃಷ್ಣನಿಗೆ ಮಣಿಯದ ದುರ್ಯೋಧನನು ಕವಿಯ ದೃಷ್ಟಿಗೆ ನಾಯಂತೆಯೂ ನರಿಯಂತೆಯೂ ಕಂಡಿದ್ದಾನೆ ಅದಕ್ಕಾಗಿಯೇ ಕುಮಾರವ್ಯಾಸನು ದುರ್ಯೋಧನನಿಗೆ ನಾಯಿ, ನರಿ, ವಿಕಳ, ಖುಲ್ಲ, ಖಳ, ಪಾತಕಿ, ಮೂರ್ಖರವಗ್ಗಳಿ, ಕುಮತಿ, ಮರುಳ, ದುಷ್ಟ ಮೊದಲಾದ ವಿಶೇಷಣಗಳನ್ನೇ ಕೊಡುತ್ತಾನೆ

ದುರ್ಯೋಧನನು ಕೃಷ್ಣನ ಶತ್ರುವಾಗಿದ್ದು ಕುಮಾರವ್ಯಾಸನು ಕೃಷ್ಣನ ಭಕ್ತನಾಗಿರುವುದೇ, ಈ ವಿಧವಾದ ಸನ್ನಿವೇಶಬದಲಾವಣೆಗೂ ಮತ್ತು ವಿಶೇಷಣಗಳನ್ನು ಕೊಡುವುದಕ್ಕೂ ಕಾರಣವೆನ್ನಬಹುದು

ಅಲ್ಲದೆ "ಕೃಷ್ಣನು ಭಕ್ತಕುಟುಂಬಿ ನಂಬಿದವರನ್ನು ಕಾಪಾಡುವುದೇ ಆತನ ಕೆಲಸ ದುರ್ಯೋಧನನು ಕೃಷ್ಣನನ್ನು ಸತ್ಕರಿಸಿದರೆ, ಆತನೂ ಕೃಷ್ಣಭಕ್ತನೇ ಆಗುತ್ತಾನೆ ಭಕ್ತನಾದ ಆತನನ್ನು ಉಳಿಸುವ ಪ್ರಯತ್ನವನ್ನೇ ಕೃಷ್ಣನು ಎಸಗಬೇಕಾಗುತ್ತದೆ" ಇದು ಕಥೆಗೆ ವಿರುದ್ಧವಾಗುತ್ತದೆ ಅದಕ್ಕಾಗಿಯೇ ದುರ್ಯೋಧನನು ಕೃಷ್ಣನನ್ನು ಸತ್ಕರಿಸುವ ಸನ್ನಿವೇಶವನ್ನೇ ಕವಿಯು ಬಿಟ್ಟಿರುವುದು

ಕವಿಯು, ದುರ್ಯೋಧನನು ಶರನಂತೆ ವರ್ತಿಸಲು "ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ" "ಛಲಕೆ ಮಣಿಯದೆ ರಾವಣಾದಿಗಳಳಿದರಿದಲಾ ಕೀರ್ತಿ ಕಾಯವಿದಳಿವುದಗ್ಗದ ಕೀರ್ತಿಯುಳಿವುದು ಅಂಜಲೇಕೆಂದ" ಎಂದು ಕಾರಣವನ್ನು ತಿಳಿಸುತ್ತಾನೆ

ದುರ್ಯೋಧನನು ಸಾಮಾನ್ಯನಲ್ಲ, ಮತ್ತೊಬ್ಬರ ಹೃದಯವನ್ನರಿತು ಕೆಲಸಮಾಡುವುದರಲ್ಲಿ ಅಗ್ರಗಣ್ಯ "ನನಗೆ ಕೃಷ್ಣನ ಹೃದಯ ತಿಳಿದಿದೆ, ನೀವು ಮೇಗರೆಯಖಿತದವರೀರಾವಣಾರಿಯು ಬಗೆಯನಖಿಯರಿ" ಎಂದು ಹೇಳುತ್ತಾನೆ ಈತನಿಗೆ ಬೇಕಾಗಿರುವುದು ಗೌರವ ಕೀರ್ತಿಗಳು ಎಲ್ಲರೂ ತಿಳಿದಿರುವಂತೆ ರಾಜ್ಯದಾಸೆಯಲ್ಲ ಅದಕ್ಕಾಗಿಯೇ ತನಗೆ ಯುದ್ಧದಲ್ಲಿ ಸಾವು ಖಂಡಿತವೆಂದು ತಿಳಿದಿದ್ದರೂ ಸಂಧಿಗೆ ಒಪ್ಪದಿದ್ದುದು

ದುರ್ಯೋಧನ ಮಾನ ಎನ್ನುವುದು ಲೋಕವಿದಿತವಾದುದು ಅದನ್ನು ಕುಮಾರವ್ಯಾಸನು ಉದ್ಯೋಗಪರ್ವದಲ್ಲಿ ಸೂಕ್ಷ್ಮವಾಗಿ ಚಿತ್ರಿಸಿರುತ್ತಾನೆ

"ಕೃಷ್ಣನನ್ನು ಸಹಾಯಕೇಳಲು ಹೋದ ದುರ್ಯೋಧನನು ನಿದ್ರಾಸಕ್ತನಾದ ಆತನ ತಲೆಯ ಬಳಿ ಕುಳಿತುಕೊಳ್ಳುತ್ತಾನೆ ಎಚ್ಚರಗೊಂಡ ಕೃಷ್ಣನು ಮೊದಲು ತನ್ನನ್ನು ನೋಡದ ಅರ್ಜುನನ್ನು ನೋಡುತ್ತಾನೆ" ಆಗ ರಾಜನಾದ ದುರ್ಯೋಧನನಿಗೆ ತನ್ನ ಮಾನಕ್ಕೆ ಕುಂದುಂಟಾಯಿತೆಂಬ ಭಾವವನ್ನು "ವಿಕಾರದ ಇರವ" ಎಂದು ಕವಿಯು ಹೇಳಿರುರುತ್ತಾನೆ

ದುರ್ಯೋಧನನು ಬಲು ರೀವಿಕಾರ ಅದನ್ನು ತೋರ್ಪಡಿಸುವುದಕ್ಕಾಗಿಯೇ ಕವಿಯು ಕೃಷ್ಣನನ್ನು ಸಭೆಗೆ ಕರೆಸುವುದಕ್ಕೆ ಮೊದಲು ಆಸ್ಥಾನವರ್ಣನೆಯನ್ನು ವಿಶದವಾಗಿ ಚಿತ್ರಿಸಿರುವನಲ್ಲದೆ "ರಾವಣಾರಿಯು ಕಾಣಿಕೆಗೆ ಬಲುರೀವಿಯನು ತೋಱಿದನು" ಎಂದೂ ತಿಳಿಸಿರುತ್ತಾನೆ ಮತ್ತು "ನಿಮಗೇಕೆ ರಾಯರ ರೀವಿ" ಎಂದು ಕೃಷ್ಣನನ್ನೇ ಮೂದಲಿಸವಂತೆ ಹೇಳುತ್ತಾನೆ

ದುರ್ಯೋಧನನು ರಾಜಕಾರ್ಯನಿಪುಣ ಪಾಂಡವಪಕ್ಷಪಾತಿಯಾದ ಕೃಷ್ಣನನ್ನು ತನ್ನ ಕಡೆಗೆ ಮಾಡುವುದರಿಂದ ತನಗೆ ಗೆಲವು ನಿಶ್ಚಯವೆಂದು ಬಗೆದು ಅದಕ್ಕಾಗಿಯೇ ಕೃಷ್ಣನಲ್ಲಿಗೆ ಆತನು ಹೋಗುವುದು ಪಾಂಡವರಿಗೆ ಸಹಾಯ ಮಾಡಲು ಹೊರಟ ಶಲ್ಯನನ್ನು ಉಪಾಯದಿಂದ ತನ್ನ ಕಡೆಗೆ ತಿರುಗಿಸಿದುದೂ ಈತನ ನೈಪುಣ್ಯವನ್ನು ಸ್ಪಷ್ಟಪಡಿಸುತ್ತದೆ

ದುರ್ಯೋಧನನು ತಾನೊಬ್ಬನೇ, ಆತುರದಿಂದ ಮಂತ್ರಾಲೋಚನೆ ಇಲ್ಲದೆ ಕಾರ್ಯವನ್ನು ಮಾಡಲು ಪ್ರಯತ್ನಿಸಿದವನಲ್ಲ. ಎಲ್ಲರೊಡನೆಯೂ ಚರ್ಚಿಸಿ ಬಳಿಕ ತಾನು ನಿಶ್ಚಯಿಸಿ ಕೆಲಸಮಾಡಲು ಪ್ರಾರಂಭಿಸುತ್ತಾನೆ ಆ ನಿಶ್ಚಯವನ್ನು ಯಾರೂ ಭೇದಿಸಲು ಸಮರ್ಥರಾಗುವುದಿಲ್ಲ ಎನ್ನುವುದನ್ನು "ನೆನೆದ ಮಂತ್ರವ ತನ್ನ ತಂದೆಯ ಮನದ ಮುಚ್ಚದಲೊರೆದು ಕರ್ಣನ ನೆನಹಿನಲಿ ಪುಟವಿಟ್ಟು ಶಕುನಿಯ ನೀತಿಯಲಿ ನಿಗುಚಿ। ಅನುಜಮತದಲಿ ವಿಸ್ತರಿಸಿ ಮೈದುನನ ಮತದಲಿ ಬಣ್ಣವಿಟ್ಟನು ಜನಪ", "ಚಪಳಕರ್ಣನ ಕೂಡೆ ನಿಶ್ಚೈಸಿದನು ಕಾಳಗವ" ಎಂದು ತಿಳಿಸಿರುತ್ತಾನೆ

ಈ ಉದ್ಯೋಗಪರ್ವದಲ್ಲಿ ಧೃತರಾಷ್ಟ್ರ ಮತ್ತು ದುರ್ಯೋಧನರಿಗೆ ಉಪದೇಶಮಾಡುವ ವ್ಯಾಜದಲ್ಲಿ ಸಮಾಜನಿಯಮಗಳು, ರಾಜ್ಯಾಂಗ ವ್ಯವಸ್ಥೆ, ವ್ಯವಹಾರ, ಧರ್ಮ ಮೊದಲಾದ ವಿಷಯಗಳನ್ನು ಸಂಗ್ರಹವಾಗಿ ಕವಿಯು ತಿಳಿಸಿರುತ್ತಾನೆ

ನಾರಣಪ್ಪನು ಗ್ರಂಥಾರಂಭದಲ್ಲಿ—

"ಅರಸುಗಳಿಗಿದು ವೀರ ದ್ವಿಜರಿಗೆ
ಪರಮವೇದದ ಸಾರ ಯೋಗೀ
ಶ್ವರರ ತತ್ತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ"

ಎಂದು ಹೇಳಿರುವ ಈ ಎಲ್ಲ ಅಂಶಗಳೂ ಭಾರತಸಾರವಾದ ಈ ಉದ್ಯೋಗ ಪರ್ವದಲ್ಲೇ ಅಡಕವಾಗಿವೆ ಎಂದರೆ ಉತ್ಪ್ರೇಕ್ಷೆಯಾಗಲಾರದು

## ಪರಿಷ್ಕರಣ

ಈ ಪರ್ವದ ಪರಿಷ್ಕರಣಕಾರ್ಯವನ್ನು ಒಟ್ಟು ೧೮ ಪ್ರತಿಗಳ ಸಹಾಯದಿಂದ ಮಾಡಿದೆ ಮೊದಲನೆಯ ಮುದ್ರಣದಲ್ಲಿ ಕೆ ೭೦ನೆಯ ನಂಬರಿನ ಪ್ರತಿಯನ್ನೇ (ಕಾಲ ಶಾ ಶ ೧೭೬೪) ಮುಖ್ಯವಾಗಿ ಅನುಸರಿಸಿರುತ್ತಾರೆ ಅಲ್ಲದೆ ಅದರಲ್ಲಿ ನಮ್ಮಲ್ಲಿರುವ ಓಲೆ ಪ್ರತಿಗಳಲ್ಲಿ ದೊರೆಯದ ಕೆಲವು ಪಾಠಗಳೂ ಇರುವಂತೆ ತಿಳಿದುಬರುತ್ತದೆ ಈ ಮುದ್ರಣದಲ್ಲಿ, ನಮ್ಮಲ್ಲಿರುವ ಭಾರತದ ಪ್ರತಿಗಳಲ್ಲಿ ಪ್ರಾಚೀನವಾದ ಕ್ರಿ ಶ 1554ರಲ್ಲಿ ಪ್ರತಿಯಾದ ಕೆ ೨೦೫ನೇ ನಂಬರಿನ ಪ್ರತಿಯನ್ನೇ ಮುಖ್ಯಪ್ರತಿಯನ್ನಾಗಿ ಸ್ವೀಕರಿಸಿದೆ ಈ ಪ್ರತಿಯಲ್ಲಿ ಕೆಲವು ಕಡೆ ಗ್ರಂಥಪಾತವಿದೆ ಈ ಪ್ರತಿಯ ಪಾಠಕ್ಕೂ ಉಳಿದ ಪ್ರತಿಗಳ ಪಾಠಕ್ಕೂ ಅನೇಕ ಕಡೆಗಳಲ್ಲಿ ಬಹಳ ವ್ಯತ್ಯಾಸವಿದೆ ಈ ಪ್ರತಿಯಲ್ಲಿ ಶಕಟರೇಫವಿದೆ ಇದರ ಪ್ರಯೋಗವೂ ಸರಿಯಾಗಿದೆ ಆದುದರಿಂದಲೇ ಪ್ರಾಚೀನವಾದ ಇದನ್ನೇ ಮೂಲಪ್ರತಿಯನ್ನಾಗಿ ಸ್ವೀಕರಿಸಿದೆ ಈ ಪ್ರತಿಗೆ (ಕ) ಎಂದು ಅಂಕಿತಮಾಡಿದೆ

## 'ಕ' ಪ್ರತಿಯ ವಿವರ

ಓಲೆಯ ಆಕಾರ --ಉದ್ದ ೧ ಅಡಿ, ಅಗಲ ೨ ಅಂಗುಲ

ಪ್ರತಿ ಓಲೆಯಲ್ಲೂ ೧೬ ರಿಂದ ೧೯ರವರೆಗೆ ಪಙ್ಕ್ತಿಗಳಿವೆ ಅಕ್ಷರಗಳು ಸಣ್ಣಗಿದ್ದರೂ ಸ್ಫುಟವಾಗಿವೆ ಆರಂಭದಿಂದ ಕೊನೆಯವರೆಗೆ ಪುಟ

ಸಂಖ್ಯೆಯನ್ನು ಹಾಕದೆ ಪ್ರತಿಪರ್ವದ ಪುಟಸಂಖ್ಯೆಯೇ ಬೇರೆಬೇರೆ ಯಾಗಿದೆ ಪರ್ವಾರಂಭ ಮತ್ತು ಪರ್ವಾಂತ್ಯಗಳಲ್ಲಿ ಕೆಲವು ಚಿತ್ರಗಳನ್ನು ಬರೆದಿದೆ ಗ್ರಂಥವನ್ನು ಪ್ರತಿಮಾಡಲು ಆರಂಭಿಸಿದ ಕಾಲ ತಿಳಿದು ಬರುವುದಿಲ್ಲ ಕೊನೆಯಲ್ಲಿರುವ ಒಂದು ಶಿಥಿಲವಾದ ಓಲೆಯಲ್ಲಿ ಗ್ರಂಥ ವನ್ನು ಪ್ರತಿಮಾಡಿ ಮುಗಿಸಿದ ಕಾಲ, ಪರ್ವಗಳ ಹೆಸರು, ಸಂಧಿ ಮತ್ತು ಪದ್ಯಗಳ ಸಂಖ್ಯೆ ಈ ವಿಷಯಗಳಿವೆ ಅದರ ವಿವರವು ಈ ರೀತಿ ಇದೆ

"ಅಂತು ಸಂಧಿ ೧೩ ಪದ ೬೨೧೧ ಕಂ ಗದಾಪರ್ವ ಸಮಾಪ್ತ ಮಂಗಳ ಮಹಾ ಶ್ರೀ॥ ತು ವರ್ತಮಾನ ಆನಂದ ಸಂವತ್ಸರದ ಶ್ರಾವಣ ಬ ೩ ಸೌಮ್ಯವಾರದಲ್ಲೂ ಸಾಲಿಗ್ರಾಮದ ಚಿಕ್ಕ ದೇವರಸರ ಮಕ್ಕಳು ಬೋಧಾಯನ ಸೂತ್ರ ಶ್ರೀವತ್ಸಗೋತ್ರ ಹೆರಗಿನ ನಂಜಯ್ಯ । ಪರ್ವ ೧ಕೆ ಸಂಧಿ ೧೯ಕೆ ಪದ ೯೪೦, ಸಭಾಪರ್ವ ೧ಕಂ ಸಂಧಿ ೧೬ಕೆ ಪದಸಾ ೧೧೫೫, ಅರಣ್ಯ ಪರ್ವ ೧ಕಂ ಸಂಧಿ ೨೧ಕಂ ಪದಸಾ ೧೧೪೨, ವಿರಾಟಪರ್ವ । ಭೀಷ್ಮಪರ್ವ ೧ಕಂ ಸಂಧಿ ೧೦ಕೆ ಪದ ೫೪೦, ದ್ರೋಣಪರ್ವ ೧ಕೆ ಸಂಧಿ ೧೯ಕೆ ಪದ ೧೧೭೫ ಕಂ, ಕರ್ಣ ಪ ೧ಕೆ ಸಂಧಿ ೨೭ಕೆ ಪದ ೧೧೫೨, ಶಲ್ಯಪರ್ವವು ೧ಕೆ ಸಂಧಿ ೩ಕೆ ದಶಪರ್ವವು ೧ಕ್ಕೆ ಸಂಧಿ ೧೪೭ಕಂ ಪದಸಾ ೭೯೭೧ಕಂ ಶುಭಮಸ್ತು ಶ್ರೀನಾರಾಯಣಾರ್ಪಿತಮಸ್ತು ಮಂಗಳ ಮಹಾ ಶ್ರೀ ಬರದನೆಂದು ಬಯ್ಯಲ್ವೇಡಂ ತಪ್ಪಕ್ಕು ಶುದ್ಧವಕ್ಕು ಪ್ರತಿಸಮಾನಂ ಬರದೆಂ ಬರೆದೆಂ" ಶ್ರೀ ಶ್ರೀ ಶ್ರೀ॥

ಇದು ಶಾ ಶ ೧೪೭೬ರಲ್ಲಿ ಪ್ರತಿಯಾದುದು ಕ್ರಿ ಶ 1554ನೇ ಆಗಸ್ಟ್‌ಮಾಹೆ 16ನೇ ತಾ॥ ಬುಧವಾರ ಇದರ ಬರವಣಿಗೆ ಮುಗಿದಿದೆ ಓಲೆಗಳನ್ನು ಒಟ್ಟಿಗೆ ಸೇರಿಸಿ ಕಟ್ಟುವುದಕ್ಕಾಗಿ ಪ್ರತಿ ಓಲೆಯಲ್ಲೂ ಮಾಡಿರುವ ರಂಧ್ರಗಳಿಗೆ ಸಣ್ಣ ಸಣ್ಣ ಬೆಳ್ಳಿಯ ಕಟ್ಟುಗಳನ್ನು ಹಾಕಿದೆ ಇದು ಈ ಪ್ರತಿಯನ್ನು ಶಿಥಿಲವಾಗದಂತೆ ಕಾಪಾಡಲು ಮಾಡಿರುವ ಒಂದು ವೈಶಿಷ್ಟ್ಯ ಓಲೆಯನ್ನು ನೋಡಿದರೆ ಹೆಚ್ಚು ಬಳಸಿರುವಂತೆ ತಿಳಿದು ಬರುತ್ತದೆ 'ಥ' ಅಕ್ಷರಕ್ಕೆ 'ಥ' ಒತ್ತನ್ನು (ಥ್ಥ) ಕೊಡುವುದಕ್ಕೆ ಪ್ರತಿ ಯಾಗಿ 'ಆ' ಎಂದು ಬರೆದಿರುವುದು (ಥ್ರ), ಈ ಪ್ರತಿಯಲ್ಲಿ ಕಂಡುಬರುವ ಅಕ್ಷರವೈಚಿತ್ರ್ಯ ಇದರಲ್ಲಿ ಹಚ್ಚು ಪದ್ಯಗಳಿಲ್ಲ

ಒಟ್ಟು ೧೮ ಪ್ರತಿಗಳಲ್ಲಿ ಕೆ ಎ ೨೨೮ ನಂ ಮಾತ್ರ ಕಾಗದದ ಪ್ರತಿ ಉಳಿದ ಪ್ರತಿಗಳೆಲ್ಲಾ ಓಲೆಗಳೇ ಇವುಗಳಲ್ಲಿ (ಬ ಮ. ಯ ರ) ಈ ನಾಲ್ಕು ಪ್ರತಿಗಳು ಅರಮನೆ ಸರಸ್ವತೀ ಭಂಡಾರದಲ್ಲಿರುವುವು ಉಳಿದ ಹದಿನಾಲ್ಕು ಪ್ರತಿಗಳು ನಮ್ಮ ಕೋಶಾಗಾರದಲ್ಲಿವೆ ಪ್ರತಿಗಳ ಕೆಲವು ಮುಖ್ಯವಿಚಾರಗಳನ್ನು ಪಟ್ಟಿಮಾಡಿ ಮುಂದೆ ಕೊಟ್ಟಿದೆ -

| ಪ್ರತಿಸಂಖ್ಯೆ | ನಂಬರು | ಹೆಸರು | ಕಾಲ | ಶಕಟರೇಫ | ಸಂಧಿ | ಒಟ್ಟು ಪದ್ಯಗಳು | ಸ್ಥಿತಿ |
|---|---|---|---|---|---|---|---|
| ೧ | ಕ ೨೦೫ | ಕ | ಕ್ರಿ ಶ ೧೫೫೪ | ಇದೆ | ೧೧ | ೬೪೨ | ಸಾಮಾನ್ಯ |
| ೨ | ಕೆ ೫೪೧ | ಖ | ಕ್ರಿ ಶ ಸು ೧೮೧೦ | ಇಲ್ಲ | ೧೧ | ೭೭೮ | ಉತ್ತಮ |
| ೩ | ಕೆ ೭೦ | ಗ | ಕ್ರಿ, ಶ ೧೮೪೧ | ,, | ೧೨ | ೭೮೮ | ,, |
| ೪ | ಇಲ್ಲ | ಚ | ಕ್ರಿ ಶ ೧೮೪೨ | ,, | ೧೨ | ೮೧೦ | ,, |
| ೫ | ಕೆ ೨೬೬ | ಜ | ಕ್ರಿ ಶ ಸು ೧೮೭೬ | ,, | ಅಪೂರ್ಣ | ? | ,, |
| ೬ | ಕೆ ೧೩೮ | ಝ | ಕ್ರಿ ಶ ಸು ೧೮೦೯ | ,, | ೧೧ | ೬೨೧ | ಶಿಥಿಲ |
| ೭ | ಕೆ ೨೫೧ | ಟ | ಕ್ರಿ ಶ ಸು ೧೮೪೬ | ,, | ೧೨ | ೬೭೪ | ಉತ್ತಮ |
| ೮ | ಕೆ ೩೭೫ | ರ | ? | ಇದೆ | ೧೧ | ೬೭೭ | ಶಿಥಿಲ |
| ೯ | ಕೆ ೫೪೦ | ಡ | ಕ್ರಿ ಶ ಸು ೧೮೨೦ | ಇಲ್ಲ | ೧೨ | ೭೪೫ | ಉತ್ತಮ |
| ೧೦ | ಕೆ ೩೦೫ | ಣ | ಕ್ರಿ ಶ ಸು ೧೭೬೭ | ,, | ೧೩ | ೭೬೯ | ,, |
| ೧೧ | ಕೆ ಎ ೨೨೮ | ತ | ? | ,, | ೧೧ | ೬೪೭ | ,, |
| ೧೨ | ಕೆ ೧೬೩ | ದ | ? | ,, | ೧೨ | ೬೪೪ | ,, |
| ೧೩ | ಕೆ ೨ | ನ | ? | ಇದೆ | ೧೨ | ೭೨೭ | ಸಾಮಾನ್ಯ |
| ೧೪ | ಇಲ್ಲ | ಪ | ? | ಇಲ್ಲ | ೧೨ | ೭೪೪ | ಉತ್ತಮ |
| ೧೫ | ಸ್ವ. ಧಂ ೧೨೮೬ | ಬ | ? | ಇದೆ | ೧೧ | ೬೫೩ | ,, |
| ೧೬ | ಸ ಧಂ ೪೬೬ | ಮ | ಕ್ರಿ ಶ ಸು ೧೮೦೦ | ಇಲ್ಲ | ೧೧ | ೬೪೨ | ,, |
| ೧೭ | ಸ ಧಂ ೧೬೮೯ | ಯ | ಕ್ರಿ ಶ ೧೮೧೭–೩೦ | ,, | ೧೨ | ೭೬೦ | ,, |
| ೧೮ | ಸ ಧಂ ೧೬೯೦ | ರ | ಕ್ರಿ ಶ ೧೭೨೮ | ,, | ೧೨ | ೬೯೭ | ,, |

# ಪ್ರತಿಗಳ ವಿಶೇಷ ವಿಚಾರ

ಖ —ಗ್ರಂಥವು ಪೂರ್ಣವಾಗಿದೆ ಇದನ್ನು ಸೋಮನಪಲ್ಲಿ ನಾರಣಪ್ಪನು ಘೋರಬಲಿ ಕಾಳಯ್ಯನಾಯ್ಯರ್‌ಗೆ ಬರೆದುಕೊಟ್ಟಿರುತ್ತಾನೆ ಈ ಪ್ರತಿಕಾರನು 'ನಕುಲ' ಎನ್ನುವುದಕ್ಕೆ 'ಲಕುಳ' ಎಂದೂ, 'ದವು' ಎನ್ನುವುದಕ್ಕೆ 'ದೂ' ಎಂದೂ, 'ಯ' ಕಾರಕ್ಕೆ ಒತ್ತಕ್ಷರವನ್ನು ಬರೆಯುವುದಕ್ಕೆ ಪ್ರತಿಯಾಗಿ ಅದರ ಹಿಂದಿರುವ ಅಕ್ಷರಕ್ಕೆ '್ಯ' ಒತ್ತನ್ನು ಕೊಟ್ಟು ಒತ್ತಕ್ಷರವನ್ನು ಪೂರ್ಣಾಕ್ಷರವನ್ನಾಗಿಯೂ ಬರೆದಿರುತ್ತಾನೆ ಈ ಪ್ರತಿಯಲ್ಲಿ ಸಾಮಾನ್ಯವಾಗಿ ಶುದ್ಧಪಾಠಗಳೇ ದೊರೆಯುತ್ತವೆ

ಗ —ಗ್ರಂಥವು ಪೂರ್ಣವಾಗಿದೆ ಇದನ್ನು ಪ್ರತಿಮಾಡಲು ಪ್ರಾರಂಭಿಸಿದುದು ಶಾಲಿವಾಹನಶಕವರ್ಷಗಳು ೧೭೬೩ನೇ ಸಂದ ವರ್ತಮಾನ ಶಾರ್ವರಿ ಸಂವತ್ಸರದ ಪುಷ್ಯ ಶುದ್ಧ ತೃತೀಯಾ ಮುಗಿಸಿದ ಕಾಲ–ಶುಭಕೃತ್‌ಸಂವತ್ಸರದ ಕಾರ್ತಿಕ ಶುದ್ಧ ಪ್ರಥಮಾ ಶುಕ್ರವಾರ ಪುಷ್ಪಾಲ ವೆಂಕಟರಾಜುವಿನ ಮಗ ಮೈಯ್ಯರು ವೆಂಕಟರಾಜುವು ಹೊನ್ನಶೆಟ್ಟಿಮಗ ಕಟ್ಟಿಗೆ ಸೇರುಗಾರ ತಿಮ್ಮಪ್ಪನವರ ಅಳಿಯ ಕಟ್ಟಿಗೆ ಲಕ್ಷುಮ್ಮೈಯನಿಗಾಗಿ ಬರೆದಿರುತ್ತಾನೆ ಪ್ರತಿಕಾರನು 'ಹ' ಎಂದು ಬರೆಯುವ ಕಡೆಯಲ್ಲೆಲ್ಲಾ 'ಅ' ಎಂದೇ ಬರೆದಿರುತ್ತಾನೆ ಉದ್ಯೋಗಪರ್ವದ ೩ನೇ ಸಂಧಿಯಲ್ಲಿ ೧೧ ಪದ್ಯಗಳಿಗೆ ಮೂಲಭೂತವಾದ ೧೧ ಸಂಸ್ಕೃತ ಶ್ಲೋಕಗಳನ್ನೂ, ಅಂತೆಯೇ ನಾಲ್ಕನೇ ಸಂಧಿಯಲ್ಲಿ ೧೩ ಶ್ಲೋಕಗಳು ಹೀಗೆ ಒಟ್ಟು ೨೪ ಶ್ಲೋಕಗಳನ್ನು ಆಯಾ ಪದ್ಯಗಳಿಗ ಮೊದಲಿನಲ್ಲಿ ಬರೆದಿರುತ್ತಾನೆ ಶ್ಲೋಕಗಳು ಸರಿಯಾಗಿಲ್ಲ ಈ ಪ್ರತಿಯಲ್ಲಿ ಹೆಚ್ಚು ಪದ್ಯಗಳಿವೆ ಹೆಚ್ಚು ಪ್ರತಿಗಳ ಪಾಠಗಳು ಈ ಪ್ರತಿಯನ್ನು ಹೋಲುತ್ತವೆ.

ಚ —ಈ ಪ್ರತಿಯಲ್ಲಿ ಆರಂಭದಿಂದ ೧೮೯ ಓಲೆಗಳಿಲ್ಲ ೧೯೦ನೇ ಓಲೆಯಿಂದ ಗ್ರಂಥವು ಪ್ರಾರಂಭವಾಗಿದೆ ಉದ್ಯೋಗಪರ್ವದಿಂದ ಗದಾಪರ್ವಪೂರ್ತಿ ಗ್ರಂಥವಿದೆ ಓದಲು ಸೌಕರ್ಯಕ್ಕಾಗಿ ಆದಿಪರ್ವದಿಂದ ವಿರಾಟಪರ್ವಪೂರ್ತಿ ನಾಲ್ಕು ಪರ್ವಗಳನ್ನು ಬೇರೆ ಪ್ರತಿಯನ್ನಾಗಿ ವಿಭಾಗಿಸಿರುವಂತೆ ತಿಳಿದುಬರುತ್ತದೆ ಈ ಓಲೆಯನ್ನು "ಮಹಿಶೂರಲ್ಲಿ ಇರುವ ಶ್ರೀಮತ್ ಚೌಬೀನೆ ಚಿಕ್ಕಣ್ಣನವರಿಗಾಗಿ ಮಹಿಶೂರಲ್ಲಿ ಇರುವ ಶ್ರೀಮತ್ ಪುಸ್ತಕ ನಾರಣಪ್ಪನವರು ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕಾಬ್ದಾಃ ೧೭೬೪ ಸಂದು ವರ್ತಮಾನವಾದ ಶುಭಕೃತ್ ಸಂವತ್ಸರದ ವೈಶಾಖ ಶುದ್ಧ ೧೦ ಗುರುವಾರ ಉತ್ತರಾ ನಕ್ಷತ್ರ ೩೪॥ ಶುಭಯೋಗ, ಈ ಶುಭದಿವಸ ಸೂರ್ಯೋದಯವಾದ ೭ ಘಳಿಗೆಗೆ ಸಲ್ಲುವ

ವೃಷಭಲಗ್ನದಲ್ಲಿ'' ಪ್ರತಿಮಾಡಿ ಮುಗಿಸಿರುತ್ತಾರೆ ಈ ಪ್ರತಿಯಲ್ಲಿ ಹೆಚ್ಚು ಪಾಠಾಂತರಗಳಿವೆ

**ಜ**—ಈ ಪ್ರತಿಯಲ್ಲಿ ಗ್ರಂಥವು ಪೂರ್ಣವಾಗಿಲ್ಲ ಪ್ರಾರಂಭದಿಂದ ಉದ್ಯೋಗಪರ್ವ ಸಂಧಿ ೪ರಲ್ಲಿ ೪೩ ಪದ್ಯಗಳಿವೆ ಈ ಪ್ರತಿಯನ್ನು ಮುದ್ದುಮಲ್ಲನವರಿಗಾಗಿ ಗುರುಕಾರ ಬಸವಲಿಂಗಪ್ಪನ ಭಾವಮೈದ ನಂಜಪ್ಪನು ಧಾತುನಾಮ ಸಂವತ್ಸರದ ಭಾದ್ರಪದ ಬಹುಳ ತೃತೀಯಾ ಬುಧವಾರ ಬರೆಯಲು ಪ್ರಾರಂಭಿಸಿರುತ್ತಾನೆ

**ಝ**—ಈ ಪ್ರತಿಯಲ್ಲಿ ಉದ್ಯೋಗಪರ್ವ ಮಾತ್ರ ಇದೆ ಪ್ರತಿಮಾಡಿ ಮುಗಿಸಿದ ಕಾಲ ವಿಭವನಾಮ ಸಂವತ್ಸರದ ಫಾಲ್ಗುಣ ಬಹುಳ ೧೦ ಸ್ಥಿರ ವಾರ ಪ್ರತಿಕಾರನ ವಿಚಾರವಾಗಿ ಏನೂ ತಿಳಿದುಬರುವುದಿಲ್ಲ ಇದರಲ್ಲಿ ಮಧ್ಯೆಮಧ್ಯೆ ಗ್ರಂಥಪಾತವಿದೆ ಅಶುದ್ಧ ಹೆಚ್ಚು

**ಟ**—ಈ ಪ್ರತಿಯಲ್ಲಿ ಉದ್ಯೋಗಪರ್ವದಿಂದ ಗದಾಪರ್ವ ಪೂರ್ತಿ ಗ್ರಂಥವಿದೆ ಪ್ರತಿಕಾರನು ಇದನ್ನು ಪರಾಭವಸಂವತ್ಸರದ ಚೈತ್ರ ಶುದ್ಧ ಪೂರ್ಣಿಮಾ ಶನಿವಾರ ಬರೆದು ಮುಗಿಸಿರುತ್ತಾನೆ ಪ್ರತಿ ಕಾರನ ವಿಚಾರವೇನೂ ತಿಳಿದುಬರುವುದಿಲ್ಲ 'ಚ್ಚ' ಎಂದು ಬರೆಯುವ ಕಡೆಗಳ ಲ್ಲೆಲ್ಲಾ 'ತ್ಸ' ಎಂದು ಬರೆದಿರುವುದನ್ನು ಈ ಪ್ರತಿಯಲ್ಲಿ ಕಾಣಬಹುದು

**ದ**—ಈ ಪ್ರತಿಯು ವಿರಾಟಪರ್ವದಿಂದ ಆರಂಭವಾಗಿ ಗದಾಪರ್ವ ಪೂರ್ತಿ ಇದೆ ಪ್ರತಿಮಾಡಿದ ಕಾಲವಾಗಲೀ ಪ್ರತಿಕಾರನ ವಿಚಾರವಾಗಲೀ ಏನೂ ತಿಳಿದು ಬರುವುದಿಲ್ಲ

**ರ**—ಈ ಪ್ರತಿಯು ಹುಳುಹಿಡಿದು ಅತ್ಯಂತ ಶಿಥಿಲವಾಗಿದೆ ಉದ್ಯೋಗ ಪರ್ವದಿಂದ ಗ್ರಂಥವು ಪ್ರಾರಂಭವಾಗಿ ಕರ್ಣಪರ್ವ ೨೫ನೇ ಸಂಧಿ ೧೫ನೇ ಪದ್ಯ ಪೂರ್ತಿ ಇದೆ ಪ್ರತಿಮಾಡಿದ ಕಾಲವಾಗಲೀ ಪ್ರತಿಕಾರನ ವಿಚಾರವಾಗಲೀ ಏನೂ ತಿಳಿದು ಬರುವುದಿಲ್ಲ ಈ ಪ್ರತಿಯಲ್ಲಿ ಶಕಟರೇಫ ಪ್ರಯೋಗವಿದ್ದರೂ ಸರಿಯಾಗಿಲ್ಲ

**ಡ**—ಈ ಪ್ರತಿಯಲ್ಲಿ ಆದಿಪರ್ವದಿಂದ ಉದ್ಯೋಗಪರ್ವ ಪೂರ್ತಿ ಗ್ರಂಥವಿದೆ ಪ್ರತಿಕಾರನ ಹೆಸರು ಹುಲುಕೋಡ ಮಂಜಯ್ಯ ಪ್ರತಿಮಾಡಲು ಪ್ರಾರಂಭಿಸಿದುದು ವಿಕ್ರಮ ಸಂವತ್ಸರದ ಕಾರ್ತಿಕ ಶುದ್ಧ ತೃತೀಯಾ ಬುಧವಾರ ಮುಗಿಸಿದುದು ವಿಷು ಸಂವತ್ಸರದ ಆಷಾಢ ಶುದ್ಧ ದ್ವಾದಶೀ ಬರವಣಿಗೆಯು ಸ್ಫುಟವಾಗಿದೆ

ಣ —ಈ ಪ್ರತಿಯಲ್ಲಿ ಆದಿಪರ್ವದಿಂದ ಉದ್ಯೋಗಪರ್ವ ಪೂರ್ತಿ ಗ್ರಂಥವಿದೆ ಇದನ್ನು ಕಮ್ಮರವಾಡಿ ದೇವಣ್ಣಯ್ಯನ ಮಗ ಹೊನ್ನಯ್ಯನು ಬರೆದು ಮಂಗಲದ ನಂಜಯ್ಯನವರ ಕುಮಾರರು ದೇವಯ್ಯನವರಿಗೆ ಕೊಟ್ಟಿರುತ್ತಾನೆ ಪ್ರತಿಕಾರನು ಸರ್ವಜಿತ್ ಸಂವತ್ಸರದ ಚೈತ್ರಶುದ್ಧ ೧೪ ಚಂದ್ರವಾರ ಹಸ್ತನಕ್ಷತ್ರ ಕರ್ಕಾಟಕಲಗ್ನದಲ್ಲಿ ಇದನ್ನು ಬರೆದು ಮುಗಿಸಿರುತ್ತಾನೆ ಅಕ್ಷರಗಳು ಗುಂಡಗಿದ್ದು ಬರವಣಿಗೆಯು ಸ್ಫುಟ ವಾಗಿದೆ

ತ —ಈ ಪ್ರತಿಯಲ್ಲಿ ಆದಿಪರ್ವದಿಂದ ಕರ್ಣಪರ್ವ ೮ ಸಂಧಿ ಪೂರ್ತಿ ಗ್ರಂಥವಿದೆ ಅಕ್ಷರಗಳು ಸ್ಫುಟವಾಗಿವೆ ಇದನ್ನು ಬರೆದ ಕಾಲವು ತಿಳಿದುಬರುವುದಿಲ್ಲ ಇದನ್ನು ಬಳ್ಳಾರಿಯಲ್ಲಿದ್ದ ಪ್ರತಿಯಿಂದ ಬರೆದಿರು ತ್ತಾರೆ. ಈ ಬಳ್ಳಾರಿ ಪ್ರತಿಯನ್ನು ಕ್ರಿ ಶ 1820ನೇ ಅಕ್ಟೋಬರ್ ಮಾಹೆ 17ನೇ ತಾ॥ ಬರೆದು ಮುಗಿಸಿರುವಂತೆ ನಮ್ಮಲ್ಲಿರುವ ಪ್ರತಿಯ ಆರಂಭದಲ್ಲಿ ಬರೆದಿರುತ್ತಾರೆ

ದ —ಈಪ್ರತಿಯಲ್ಲಿ ವಿರಾಟಪರ್ವದಿಂದ ಪ್ರಾರಂಭವಾಗಿ ಗದಾಪರ್ವ ಪೂರ್ತಿ ಗ್ರಂಥವಿದೆ ಅಕ್ಷರಗಳು ವಿರಳವಾಗಿಯೂ ಸ್ಫುಟವಾಗಿಯೂ ಇವೆ ಇದನ್ನು ಪ್ರತಿಮಾಡಿದ ಕಾಲವಾಗಲೀ, ಪ್ರತಿಕಾರನ ವಿಚಾರವಾಗಲೀ ತಿಳಿದುಬರುವುದಿಲ್ಲ

ನ —ಈ ಪ್ರತಿಯಲ್ಲಿ ಆದಿಪರ್ವದಿಂದ ಗದಾಪರ್ವ ೬ನೇ ಸಂಧಿ ೪೦ನೇ ಪದ್ಯ ಪೂರ್ತಿ ಗ್ರಂಥವಿದೆ ಓಲೆಯು ಪ್ರಾಚೀನವಾಗಿ ಕಂಡುಬರು ತ್ತದೆ ಕೆಲವುಕಡೆ ಗ್ರಂಥಪಾತವಿದೆ ಆದಿಪರ್ವ ಪೂರ್ತಿ ಪ್ರತಿಸಂಧಿಯ ಆರಂಭದಲ್ಲೂ ಈ ಪದ್ಯಗಳನ್ನು ಹಾಡಲು ರಾಗಗಳನ್ನು ಬರೆದಿರುವುದು ಈ ಪ್ರತಿಯ ಒಂದು ವೈಶಿಷ್ಟ್ಯ ಪ್ರತಿಮಾಡಿದ ಕಾಲವಾಗಲೀ, ಪ್ರತಿ ಕಾರನ ವಿಚಾರವಾಗಲೀ ತಿಳಿದುಬರುವುದಿಲ್ಲ ಪರ್ವಾರಂಭದಲ್ಲಿ 'ಶ್ರೀಮತೇ ರಾಮಾನುಜಾಯ ನಮಃ' ಎಂದು ಬರೆದಿರುವುದರಿಂದ ಈ ಪ್ರತಿಕಾರನು ಶ್ರೀವೈಷ್ಣವ ಮತದವನಿರಬಹುದು ಶಕಟರೇಫವನ್ನು ಬರೆದಿದ್ದರೂ ಪ್ರಯೋಗವು ಸರಿಯಾಗಿಲ್ಲ ಅಕ್ಷರಗಳು ಅತ್ಯಂತ ಸಣ್ಣಗೂ ಸ್ಫುಟ ವಾಗಿಯೂ ಇವೆ

ಪ —ಈ ಪ್ರತಿಯಲ್ಲಿ ಆದಿಪರ್ವದಿಂದ ಕರ್ಣಪರ್ವ ೨ನೇ ಸಂಧಿ ಪೂರ್ತಿ ಗ್ರಂಥವಿದೆ ಪ್ರತಿಮಾಡಿದ ಕಾಲವಾಗಲೀ, ಪ್ರತಿಕಾರನ ವಿಚಾರ ವಾಗಲೀ ತಿಳಿದುಬರುವುದಿಲ್ಲ ಪ್ರತಿಪರ್ವದ ಕೊನೆಯಲ್ಲೂ 'ಪ್ರತಿಸಮಾನಂ

ಬರೆದೆಂ' ಎಂದಿರುವುದರಿಂದ ಇದನ್ನು ಪ್ರತಿಕಾರನು ಮತ್ತೊಂದು ಪ್ರತಿ ಯಲ್ಲಿರುವಂತೆ ಬರೆದಿರುತ್ತಾನೆ

**ಬ** —ಈ ಪ್ರತಿಯು ಪ್ರಾರಂಭದಲ್ಲಿ ೨ ಓಲೆಗಳಿಲ್ಲ ಆದಿಪರ್ವದಿಂದ ದ್ರೋಣಪರ್ವ ೨೪ ಸಂಧಿ ಪೂರ್ತಿ ಗ್ರಂಥವಿದೆ ಅಕ್ಷರಗಳು ಸ್ಫುಟ ವಾಗಿದ್ದು ಓದಲು ಅನುಕೂಲವಾಗಿದೆ ಪ್ರತಿಯನ್ನು ನೋಡಿದರೆ ಪ್ರಾಚೀ ನವೆಂದೇ ಹೇಳಬಹುದು ಇದರಲ್ಲಿ ಶಕಟರೇಫವನ್ನು ಬಳಸಿರುತ್ತಾರೆ ಪ್ರತಿಯನ್ನು ಬರೆದ ಕಾಲವಾಗಲೀ ಪ್ರತಿಕಾರನ ವಿಚಾರವಾಗಲೀ ತಿಳಿದು ಬರುವುದಿಲ್ಲ

**ಮ** —ಈ ಪ್ರತಿಯಲ್ಲಿ ಆದಿಪರ್ವದಿಂದ ಕರ್ಣಪರ್ವದಲ್ಲಿ ೨೪ನೇ ಸಂಧಿ ಪೂರ್ತಿ ಗ್ರಂಥವಿದೆ ಇದನ್ನು ಪ್ರತಿಮಾಡಿ ಮುಗಿಸಿದುದು ರೌದ್ರಿ ನಾಮ ಸಂವತ್ಸರದ ಆಷಾಢ ಬಹುಳ ೪ ಗುರುವಾರ ಪ್ರತಿಮಾಡಿದವರು ನಾಗಮಂಗಲದ ಅಗ್ರಹಾರದ ತಿಮ್ಮಪ್ಪಣ್ಣನವರ ಪೌತ್ರರಾದ ವೆಂಗಟಾಚಾ ರ್ಯರ ಪುತ್ರರಾದ ನಾಗಮಂಗಲದ ದೀಕ್ಷಿತ ತಿರುಮಲೆಂಗಾರರು ಅಕ್ಷರ ಗಳು ಸ್ಫುಟವಾಗಿದ್ದರೂ ಸಣ್ಣಗಿರುವುದರಿಂದ ಓದುವುದು ಕಷ್ಟ ಇದು 'ಕ ಪ್ರತಿಯನ್ನು ಅಕ್ಷರಶಃ ಹೋಲುತ್ತದೆ ಆದರೆ 'ಕ' ಪ್ರತಿಯಲ್ಲಿರು ವಂತೆ ಇದರಲ್ಲಿ ಶಕಟರೇಫವಿಲ್ಲ

**ಯ** —ಗ್ರಂಥವು ಪೂರ್ಣವಾಗಿದ ಅಕ್ಷರಗಳು ಸ್ಫುಟವಾಗಿವೆ ವಿಕೃತಿನಾಮ ಸಂವತ್ಸರದ ಭಾದ್ರಪದ ಶುದ್ಧ ೭ ಶುಕ್ರವಾರ ಇದನ್ನು ಬರೆದು ಮುಗಿಸಿರುತ್ತಾರೆ ಪ್ರತಿಕಾರನ ಹೆಸರು ತಿಳಿದುಬರುವುದಿಲ್ಲ ಪ್ರತಿ ಮಾಡಿಸಿದವರು ಅರಕಲಗೂಡು ಸುಬೇದಾರ್ರು ಚನ್ನಬಸವಯ್ಯನವರು

**ರ** — ಗ್ರಂಥವು ಪೂರ್ಣವಾಗಿದೆ ಅಕ್ಷರಗಳು ಸ್ಫುಟವಾಗಿವೆ ಶಕಟ ರೇಫವನ್ನು ಬಳಸಿದೆ ಇದನ್ನು ಪ್ರತಿಮಾಡಿದವನು ಹಿರಿಸಾವೆ ಸ್ಥಳದ ಭೈರಾಪುರದ ಲಕ್ಷುಮೈನವರ ಕೊಮಾರ ವೆಂಕಣ್ಣನವರ ಮಗ ಲಕ್ಷೀರಮ ಣಯ್ಯ ಈತನು ಈ ಪ್ರತಿಯನ್ನು ಬರೆದು ತಿಮ್ಮಪ್ಪನಾಯಕನ ಕುಮಾರ ತಿರುಮಲನಾಯಕನಿಗ ಕೊಟ್ಟಿರುತ್ತಾನೆ ಗ್ರಂಥವನ್ನು ಪ್ರತಿಮಾಡಿ ಮುಗಿ ಸಿದ ಕಾಲ–ಕೀಲಕ ಸಂವತ್ಸರದ ನಿಜವೈಶಾಖ ಶುದ್ಧ ೭ ಭಾನುವಾರ

ಈ ೧೮ ಪ್ರತಿಗಳಲ್ಲಿ "ಕ,ಖ,ಚ,ಝ,ರ,ಣ,ತ,ನ,ಬ,ಮ" ಪ್ರತಿ ಗಳನ್ನು ಬಿಟ್ಟು ಉಳಿದ ಪ್ರತಿಗಳ ಪಾಠಗಳು 'ಗ' ಪ್ರತಿಯನ್ನೇ ಸಾಮಾನ್ಯ ವಾಗಿ ಹೋಲುತ್ತವೆ ಈ ಎಲ್ಲ ಪ್ರತಿಗಳಲ್ಲೂ ಕಂಡುಬರುವ ಪಾಠಕ್ಕೆ **'ಗಾ'** ಎಂದು ಸಂಕೇತ ಕೊಟ್ಟಿದೆ 'ಗಾ' ಸಂಕೇತದ ಪ್ರತಿಗಳ ಗುಂಪಿ ನಲ್ಲಿ, ಯಾವ ಪ್ರತಿಯು ಪಾಠವು ಬೇರೆಯಾದರೂ 'ಗಾ ಎಂದು ಬರೆದು

ಅನಂತರ ಆ ಪ್ರತಿಯ ಅಕ್ಷರವನ್ನೂ ಪ್ರತ್ಯೇಕವಾಗಿ ಕೊಟ್ಟಿದೆ ನಮ್ಮ ಸಂಸ್ಥೆ ಯಿಂದಲೇ ಹಿಂದೆ ಪ್ರಕಟಿತವಾಗಿರುವ ಉದ್ಯೋಗಪರ್ವದ ಕೆಲವು ಕಡೆ ಗಳಲ್ಲಿ ಮುದ್ರಿತವಾಗಿರುವ ಪಾಠಗಳು ನಮ್ಮಲ್ಲಿರುವ ಓಲೆ ಪ್ರತಿಗಳಲ್ಲಿಲ್ಲ ಆದುದರಿಂದ ಆ ಪಾಠವನ್ನು 'ಮುದ್ರಿತಪಾಠ' ಎಂದು ಕೆಳಗಡೆ ಟಿಪ್ಪಣಿ ಯಲ್ಲಿ ಕೊಟ್ಟಿದೆ

## ಹೆಚ್ಚು ಪದ್ಯಗಳು

ಗಾ, ಚ ಪ್ರತಿಗಳಲ್ಲಿ ಹೆಚ್ಚು ಪದ್ಯಗಳಿವೆ 'ಗ' ಪ್ರತಿಯನ್ನು ಹೋಲುವ ಕೆಲವು ಪ್ರತಿಗಳಲ್ಲಿ 'ಗ' ಪ್ರತಿಯಲ್ಲಿರುವ ಎಲ್ಲ ಹೆಚ್ಚು ಪದ್ಯಗಳೂ ಇಲ್ಲ ಸಾಮಾನ್ಯವಾಗಿ ಹೆಚ್ಚು ಪದ್ಯಗಳನ್ನು ಮೂರನೆಯ ಸಂಧಿ, ನಾಲ್ಕನೆಯ ಸಂಧಿ, ಕೌರವನ ಆಸ್ಥಾನ ವರ್ಣನೆ, ಕೌರವನ ಸಭೆಗೆ ಕೃಷ್ಣನ ಆಗ ಮನ, ಕುಂತೀಕರ್ಣರ ಸಂಭಾಷಣೆ, ಮತ್ತು ಯುದ್ಧಸನ್ನಾಹ ಈ ಸನ್ನಿ ವೇಶಗಳಲ್ಲಿ ಸೇರಿಸಿರುತ್ತಾರೆ ನೀತಿಪ್ರಧಾನವಾದ ೩ ಮತ್ತು ೪ನೇ ಸಂಧಿಗಳಲ್ಲಿ ಹೆಚ್ಚು ಪದ್ಯಗಳನ್ನು ಸೇರಿಸಲು ಅವಕಾಶವು ಬಹುಮಟ್ಟಿಗೆ ಇದೆ ಈ ಸಂದರ್ಭಗಳಲ್ಲಿ ಹೊಸಪದ್ಯಗಳನ್ನು ಸೇರಿಸುವುದರಿಂದ ಕಥೆಗೆ ಯಾವ ವಿಚ್ಛೇದವೂ ಉಂಟಾಗುವುದಿಲ್ಲ ಆದುದರಿಂದ ಕೆಲವು ಪ್ರತಿಕಾರರು ತಮತಮಗೆ ತಿಳಿದ ಪ್ರಸಿದ್ಧವಾದ ಕೆಲವು ನೀತಿಗಳನ್ನು ಇಲ್ಲಿ ಸೇರಿಸಿರುತ್ತಾರೆ ಮತ್ತೆ ಕೆಲವರು ಸಂಸ್ಕೃತ ಭಾರತದಲ್ಲೇ ಈ ಪ್ರಕರಣದಲ್ಲಿ ವಿಸ್ತೃತವಾಗಿರುವ ನೀತಿಯ ಕೆಲವು ಭಾಗಗಳನ್ನು ಸಂಗ್ರಹಿಸಿ ಇಲ್ಲಿ ಸೇರಿಸಿರುತ್ತಾರೆ ಹೀಗೆಯೇ ಉಳಿದ ಸನ್ನಿವೇಶಗಳಲ್ಲೂ ಕಥೆಗೆ ಯಾವ ಮಾರ್ಪಾಡೂ ಆಗದಂತೆ ಪ್ರತಿಕಾರರು ತಮತಮಗೆ ತೋರಿದ ವಿಷಯಗಳನ್ನು ಸೇರಿಸಿರುತ್ತಾರೆ ಈ ಹೆಚ್ಚು ಪದ್ಯಗಳನ್ನು ಕುಮಾರವ್ಯಾಸಕೃತವೆಂದೇ ಹೇಳುವುದಾದರೆ ಈ ಪದ್ಯಗಳ ಶೈಲಿ ಉಳಿದ ತತ್ಕರ್ತೃಕ ಪದ್ಯಗಳಂತೆ ಇಲ್ಲ ಅಲ್ಲದೆ ಕೆಲವೇ ಪ್ರತಿ ಕಾರರು ಈ ಪದ್ಯಗಳನ್ನು ಬರೆಯುವ ಕಾರಣವೂ ಇಲ್ಲ ಈ ರೀತಿ ಹೆಚ್ಚೆಂದು ತಿಳಿದುಬಂದ ಪದ್ಯಗಳನ್ನು ಪರಿಶಿಷ್ಟ ೧ರಲ್ಲಿ ಸಂಗ್ರಹಿಸಿಕೊಟ್ಟಿದೆ

## ಸಂಧಿವಿಚಾರ

ಉದ್ಯೋಗಪರ್ವದಲ್ಲಿ ಕಂಡುಬರುವ ಸಂಧಿಸಂಖ್ಯಾದೃಷ್ಟಿಯಿಂದ ಪ್ರತಿಗಳನ್ನು ಮೂರು ಗುಂಪಾಗಿ ವಿಭಾಗಿಸಬಹುದು ೧ ಹನ್ನೊಂದು ಸಂಧಿಗಳಿರುವ ಪ್ರತಿಗಳು ೨ ಹನ್ನೆರಡು ಸಂಧಿಗಳಿರುವ ಪ್ರತಿಗಳು ೩ ಹದಿಮೂರು ಸಂಧಿಗಳಿರುವ ಪ್ರತಿ 'ಕ ಖ ಝ ತ ಥ ಬ ಮ' ಪ್ರತಿ

ಗಳಲ್ಲಿ ೧೧ ಸಂಧಿಗಳಿವೆ 'ಜ ಣ' ಪ್ರತಿಗಳನ್ನು ಬಿಟ್ಟು ಉಳಿದ ಪ್ರತಿಗಳಲ್ಲಿ ೧೨ ಸಂಧಿಗಳೂ 'ಣ' ಪ್ರತಿಯಲ್ಲಿ ೧೩ ಸಂಧಿಗಳೂ ಇವೆ ಮೊದಲನೆಯ ಮುದ್ರಣದಲ್ಲಿ ಈ ಪರ್ವವನ್ನು ೧೨ ಸಂಧಿಗಳನ್ನಾಗಿಯೇ ವಿಭಾಗಮಾಡಿ ಮುದ್ರಿಸಿರುತ್ತಾರೆ ಈ ಮುದ್ರಣದಲ್ಲಿರುವ ಸಂಧಿ ಸಂಖ್ಯೆ ೧೧

## ಸಂಧಿಸಂಖ್ಯೆಯನ್ನು ಹೆಚ್ಚುಮಾಡಲು ಕಾರಣಗಳು

೧ ಈ ಕನ್ನಡ ಭಾರತಕ್ಕೆ ಮೂಲವಾದ ಸಂಸ್ಕೃತ ಭಾರತದ ಉದ್ಯೋಗಪರ್ವವನ್ನು ೧೨ ಪರ್ವಗಳನ್ನಾಗಿ ವಿಭಾಗಿಸಿರುವುದು

೨ ಹನ್ನೊಂದು ವ್ಯವಹಾರದಲ್ಲಿ ಅಶುಭಸಂಖ್ಯೆಯಾಗಿರುವುದು

೩ '೯'ನೆಯ ಸಂಧಿಯ ಸೂಚನೆ ಪದ್ಯದಲ್ಲಿ 'ಅಸುರಾರಿ ದುರ್ಯೋಧನನ ಜರೆದ' ಎಂದು ಜರೆಯುವ ವಿಚಾರ ಮಾತ್ರವಿದ್ದು ಕೃಷ್ಣನು ವಿಶ್ವರೂಪವನ್ನು ತೋರಿಸುವ ಕಥಾಭಾಗವು ಸೂಚಿತವಾಗದಿರುವುದು

ಈ ಮೂರು ಕಾರಣಗಳಲ್ಲಿ ಕೊನೆಯದಾದ ಸೂಚನೆಪದ್ಯದ ಅಪೂರ್ಣತೆಯು ವಿಚಾರಾರ್ಹವಾದುದು ಸಂಧಿಯಲ್ಲಿ ಬರುವ ಎಲ್ಲ ಕಥಾಭಾಗವನ್ನೂ ತಿಳಿಸುವಂತೆ ಸೂಚನೆಪದ್ಯವನ್ನು ರಚಿಸಲು ಸಾಧ್ಯ ವಾಗುವುದಿಲ್ಲ ಅದು ಕೆಲವನ್ನು ಮಾತ್ರ ಸೂಚಿಸುತ್ತದೆ ಪ್ರಕೃತ ಸೂಚನೆ ಪದ್ಯದಲ್ಲಿ ಜರೆದನೆಂದು ಇದ್ದು ಈ ಸಂಧಿಯಲ್ಲಿ ಕೃಷ್ಣನು ದುರ್ಯೋಧನನನ್ನು ವಾಚ್ಯವಾಗಿ ಜರೆಯುವ ಪದ್ಯಗಳಿಲ್ಲದಿರುವ ಅಂಶ ವನ್ನು ತಿಳಿದು ಈ ಸಂದರ್ಭದಲ್ಲಿ, ಕೃಷ್ಣನು ದುರ್ಯೋಧನನನ್ನು ವಾಚ್ಯ ವಾಗಿ ಜರೆಯುವ ಕೆಲವು ಹೊಸ ಪದ್ಯಗಳನ್ನು ಮಾಡಿ ಕೆಲವು ಪ್ರತಿಕಾರರು ಸೇರಿಸಿರುವರಲ್ಲದೆ, ಕೃಷ್ಣನು ವಿಶ್ವರೂಪವನ್ನು ತೋರಿಸುವ ಕಥಾಭಾಗ ವನ್ನೂ ಬೇರೆ ಸಂಧಿಯನ್ನಾಗಿ ವಿಭಾಗಮಾಡಿರುತ್ತಾರೆ

ಈ ರೀತಿ ಪ್ರತಿಕಾರರು ಕಥಾಭಾಗದಲ್ಲಿ ತಮಗೆ ತೋರಿಬಂದ ನ್ಯೂನತೆ ಗಳನ್ನು ಸರಿಪಡಿಸಲು ಹೊಸದಾಗಿ ಪದ್ಯಗಳನ್ನು ಸೇರಿಸಿರುವುದು ಅನೇಕ ಸಂದರ್ಭಗಳಲ್ಲಿದೆ ಇಲ್ಲಿ ಜರೆಯುವುದೆಂದರೆ ವಾಚ್ಯವಾಗಿಯೇ ಜರೆಯ ಬೇಕೆಂದು ನಿಯಮವಿಲ್ಲ ಕಾರ್ಯತಃ ಅದನ್ನು ತೋರಿಸಬಹುದು ಕೃಷ್ಣನು, ತಾನು ಭಗವತ್ಸ್ವರೂಪನು ಎಂದು ತೋರಿಸುವುದರಿಂದಲೇ ತನ್ನ ಮಾತಿಗೆ ಬೆಲೆಕೊಡಬೇಕೆಂದೂ, ಬೆಲೆಕೊಡದೆ ಉಲ್ಲಂಘಿಸಿದರೆ ದುರ್ಯೋಧನನಿಗೆ ಕೇಡು ಖಂಡಿತವೆಂದೂ ತಿಳಿಸುವುದರ ಮೂಲಕ ದುರ್ಯೋಧನನ ಪರಾಕ್ರಮವು ಏತಕ್ಕೂ ಬಾರದು (ಪ್ರಯೋಜನ ಕಾರಿಯಲ್ಲ) ಎಂದು ತೋರ್ಪಡಿಸುವುದರಿಂದ ಆತನನ್ನು ಜರೆದಂತಾ ಗಲಿಲ್ಲವೇ? ಕೃಷ್ಣನನ್ನು ಕಟ್ಟಲು ಪ್ರಯತ್ನಪಟ್ಟಾಗ, ಕೃಷ್ಣನು ಕಟ್ಟಲು ಬಂದವರಿಗೆ ಸಿಕ್ಕದಿದ್ದುದು ಮತ್ತು ವಿಶ್ವರೂಪನ್ನು ಎಲ್ಲರಿಗೂ ತೋರಿಸಿ

ಕೌರವನಿಗೆ ಮಾತ್ರ ಕಾಣಿಸದಂತೆ ಮಾಡಿದಾದು ಆತನನ್ನು ಜರೆದಂತಾಗ ಲಿಲ್ಲವೇ? ಕೃಷ್ಣನು ಸಭೆಯಲ್ಲಿ ವಿಶ್ವರೂಪವನ್ನು ತೋರಿಸಿದುದು ದುರ್ಯೋಧನನನ್ನು ಜರೆಯುವುದಕ್ಕಾಗಿಯೇ ಹೀಗಿರುವಾಗ ಇಲ್ಲಿ ಹೆಚ್ಚು ಪದ್ಯಗಳ ಆವಶ್ಯಕತೆಯಾಗಲೀ ವಿಶ್ವರೂಪವನ್ನು ತೋರಿಸುವ ಕಥಾಭಾಗಕ್ಕಾಗಿ ಬೇರಸಂಧಿಯು ಆವಶ್ಯಕತೆಯಾಗಲೀ ಇರುವುದಿಲ್ಲ ಕುಮಾರವ್ಯಾಸನೇ ಉದ್ಯೋಗಪರ್ವವನ್ನು ೧೨ ಸಂಧಿಗಳನ್ನಾಗಿ ವಿಭಾಗ ಮಾಡಿದ್ದ ಪಕ್ಷಕ್ಕೆ ಪ್ರಾಚೀನಪ್ರತಿಗಳಲ್ಲಿ ೧೧ ಸಂಧಿ ಇದ್ದು ಉಳಿದ ಪ್ರತಿಗಳಲ್ಲಿ ೧೨ ಸಂಧಿಗಳಿರಲು ಕಾರಣವೇನು ? ಈ ರೀತಿ ಸಂಧಿಯನ್ನು ಹೆಚ್ಚಿಸಿದುದರಿಂದ ಕಥೆಗೆ ಯಾವ ಪುಷ್ಟಿಯೂ ದೊರೆತಂತಾಗುವುದಿಲ್ಲ ಹನ್ನೊಂದು ಸಂಧಿ ಇರುವುದರಿಂದ ಯಾವ ಕೊರತೆಯೂ ಇಲ್ಲ

ಈ ಸೂಚನೆಪದ್ಯದ ಅಪೂರ್ಣತೆಯನ್ನೇ ಕಾರಣವನ್ನಾಗಿಟ್ಟು ಕ್ಕೊಂಡು ಒಬ್ಬ ಪ್ರತಿಕಾರನು ೧೧ನೆಯ ಸಂಧಿಯನ್ನೂ ಎರಡು ಸಂಧಿಗಳನ್ನಾಗಿ ವಿಭಾಗಮಾಡಿರುತ್ತಾನೆ ಹನ್ನೊಂದನೇ ಸಂಧಿಯ ಸೂಚನೆಪದ್ಯದಲ್ಲಿ ದ್ರುಪದಸುತನನ್ನು ಸೇನಾನಾಯಕನನ್ನಾಗಿ ಮಾಡಿದ ಕಥಾಭಾಗವು ಸೂಚಿತವಾಗಿಲ್ಲ ಇದು ಮುಖ್ಯವಾಗಿ ಸೂಚನೆಪದ್ಯದಲ್ಲಿ ಸೂಚಿತವಾಗಬೇಕೆಂದು ತಿಳಿದು ಆ ಪ್ರತಿಕಾರನು

> "ರಾಯ ದ್ರುಪದನಸುತನ ಸೇನಾನಾಯಕನ ಮಾಡಿದರು ಪಾಂಡವ
> ರಾಯತಿಕೆಯಲಿ ಬಂದು ಬಿಟ್ಟರು ಸಮರಭೂಮಿಯಲಿ ‖ "

ಎಂದು ಒಂದು ಸೂಚನೆಪದ್ಯವನ್ನು ಹೊಸದಾಗಿ ಸೇರಿಸಿ ಆ ಕಥಾಭಾಗವನ್ನೇ ಬೇರೆ ಸಂಧಿಯನ್ನಾಗಿ ವಿಭಾಗಮಾಡಿರುತ್ತಾನೆ ಈ ಸೂಚನೆಪದ್ಯದ ಅಪೂರ್ಣತೆಯನ್ನೇ ಕಾರಣವನ್ನಾಗಿಟ್ಟುಕೊಂಡು ಐದನೆಯ ಸಂಧಿಗೆ ಬೇರೆ ಬೇರೆ ಸೂಚನೆಪದ್ಯವನ್ನು ಪ್ರತಿಕಾರರು ಬರೆದಿರುತ್ತಾರೆ ಐದನೆಯ ಸಂಧಿಗೆ ೬ ಸೂಚನೆಪದ್ಯಗಳಿವೆ ಇದರಿಂದ ಪ್ರತಿಕಾರರು ಯಾವರೀತಿ ಸೂಚನೆಪದ್ಯಗಳನ್ನು ಬದಲಾಯಿಸುತ್ತಾರೆ ಎನ್ನುವ ವಿಚಾರವು ಸ್ಪಷ್ಟಪಡುತ್ತದೆ

ಈ ಮುದ್ರಣದಲ್ಲಿ ಉದ್ಯೋಗಪರ್ವವನ್ನು (ಕ, ಖ, ಝ, ರ, ತ, ಬ, ಮ) ಪ್ರತಿಗಳಲ್ಲಿರುವಂತೆ ೧೧ ಸಂಧಿಗಳನ್ನಾಗಿ ವಿಭಾಗಮಾಡಿದೆ

ಪ್ರತಿಕಾರರು ಮೇಲೆ ತಿಳಿಸಿರುವಂತೆ ಬದಲಾವಣೆಗಳನ್ನು ಮಾತ್ರವಲ್ಲದೆ ಹೊಸ ಕಥಾಭಾಗಗಳನ್ನೂ ಸೇರಿಸಿರುತ್ತಾರೆ ಈ ವಿಧವಾದ ಪ್ರಕ್ಷಿಪ್ತಗಳನ್ನು ಸಂಸ್ಕೃತ ಭಾರತದಲ್ಲೂ ಕಾಣಬಹುದು ಆದರೆ ಈ ಕಥಾಮಂಜರಿಯಲ್ಲಿ ಸಂಸ್ಕೃತಭಾರತದಲ್ಲೂ ಇಲ್ಲದ ಕಥಾಭಾಗಗಳನ್ನು ಸೇರಿಸಿರುವುದು ಕಂಡುಬರುತ್ತದೆ ಈ ವಿಧವಾದ ಕಥಾಭಾಗಗಳಲ್ಲಿ ಐರಾವತಕಥೆಯೂ ಒಂದು ಐರಾವತಕಥೆಯು ಸಂಸ್ಕೃತ ಭಾರತದಲ್ಲಿ

ಇರುವಂತೆ ತಿಳಿದು ಬರುವುದಿಲ್ಲ ಭಾರತದಂತೆ ಪುರಾಣಗಳೂ ಅನೇಕ ಕಥೆಗಳು ಮತ್ತು ವ್ರತಗಳಿಗೆ ಆಕರವಾಗಿದೆ ಪುರಾಣಗಳಲ್ಲಿ ದೊರೆಯದ ವಿಷಯಗಳಿಲ್ಲ ಐರಾವತಕಥೆಯು ಭವಿಷ್ಯತ್ಪುರಾಣ ಮತ್ತು ಸ್ಕಾಂದೋಪಪುರಾಣಗಳಲ್ಲಿದೆ ಸ್ಕಾಂದೋಪಪುರಾಣಾಂತರ್ಗತ ಸನತ್ಕುಮಾರ ಸಂಹಿತೆಯಲ್ಲಿ ೧೫ನೆಯದು ಗೌರೀಖಂಡ ಈ ಗೌರೀಖಂಡದಲ್ಲಿರುವ ಗಜಗೌರೀವ್ರತದ ಕಥಾಭಾಗವು ಕನ್ನಡದಲ್ಲಿ ಐರಾವತ ಎಂಬ ಅಂಕಿತದಲ್ಲಿ ರಚಿತವಾಗಿದೆ ನಮ್ಮ ಸಂಸ್ಥೆಯಲ್ಲಿ ಈ ಕೃತಿಯು ಒಂದು ಓಲೆ ಪ್ರತಿ ಇದೆ ಇದರಲ್ಲಿ ೮ ಸಂಧಿಗಳಿವೆ ಒಟ್ಟು ೪೧೩ ಪದ್ಯಗಳಿವೆ ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯವರು ಈ ಐರಾವತ ಗ್ರಂಥವನ್ನು ಮುದ್ರಿಸಿ ಪ್ರಕಟಿಸಿರುತ್ತಾರೆ ಇದರಲ್ಲಿ ೩೦೫ ಪದ್ಯಗಳು ಮಾತ್ರ ಇವೆ ನಮ್ಮ ಸಂಸ್ಥೆಯಲ್ಲಿರುವ ಪ್ರತಿಗೂ ಇದಕ್ಕೂ ಹೆಚ್ಚು ಪಾಠಾಂತರಗಳಿವೆ ಈ ಗ್ರಂಥದ ಕೊನೆಯ ಪದ್ಯದಲ್ಲಿ *'ಗದುಗಿನ ವೀರನಾರಾಯಣ'ಎಂಬ ಅಂಕಿತ ವಿರುವುದರಿಂದ ಈ ಕೃತಿಯನ್ನು ಕುಮಾರವ್ಯಾಸಕೃತವೆಂದೇ ಕವಿಚರಿತೆಕಾರರು ಊಹಿಸಿರುತ್ತಾರೆ ಆದರೆ ಈ ಒಂದೇ ಕಾರಣದಿಂದ ಈರೀತಿ ಸಿದ್ಧಾಂತ ಮಾಡಲು ಸಾಧ್ಯವಾಗುವುದಿಲ್ಲ ಈ ವ್ರತಾನುಷ್ಠಾನಮಾಡುವ ಕನ್ನಡಿಗರಲ್ಲಾರೋ ಈ ಕೃತಿಯನ್ನು ರಚಿಸಿ ಭಾರತಕ್ಕೆ ಸಂಬಂಧಪಟ್ಟ ಕಥಯಾದುದರಿಂದ ಕನ್ನಡ ಭಾರತವನ್ನು ರಚಿಸಿರುವ ಕುಮಾರವ್ಯಾಸನೇ ಇದರ ಕರ್ತೃವೆಂದು ತಿಳಿಸುವುದಕ್ಕಾಗಿ ಭಾರತದಲ್ಲಿರುವಂತೆ ಈ ಕಥೆಯ ಕೊನೆಯಲ್ಲೂ 'ಗದುಗಿನ ವೀರನಾರಯಣ' ಎಂದು ಸೇರಿಸಿರಬಹುದು ಕುಮಾರವ್ಯಾಸಭಾರತದಂತೆ ಈ ಕೃತಿಯೂ ಪ್ರಸಿದ್ಧಿಗೆ ಬರಲೆಂಬ ಆಶಯದಿಂದ ಗ್ರಂಥಕರ್ತೃವು ಈರೀತಿ ಮಾಡಿರಬಹುದು ಕಾಲಕ್ರಮದಲ್ಲಿ ಈ ಕಥೆಯನ್ನೇ ಸಂಗ್ರಹಿಸಿ ಒಂದು ಸಂಧಿಯನ್ನಾಗಿ ಕನ್ನಡಭಾರತದ ಆದಿ

---

*ನಮ್ಮ ಸಂಸ್ಥೆಯಲ್ಲಿ "ಭವನ ಭಿಕ್ಷಾಟನ"ವೆಂಬ ಕಾವ್ಯದ (ನಂ K 543) ಒಂದು ಓಲ ಪ್ರತಿ ಇದೆ ಇದರಲ್ಲಿ ಮೂರು ಸಂಧಿಗಳಿವೆ ಮೂರನೇ ಸಂಧಿಯ ಕೊನೆಯ ಪದ್ಯ ಈ ರೀತಿ ಇದೆ —

"ಕರಿಗೊರಳ ಶಶಿಯೆ ಸೆವ ಜೂಟದ<br>
ವರಧಸಿತ ಧೃತಧವಳಕಾಯನ<br>
ಪರಮಪಾವನ ಹರನ ಭಿಕ್ಷಾಟನದ ವಿವರವನು।<br>
ವಿರಚಿಸಿದೆನೆಂತೆನಲು ದುರಿತಾ<br>
ಕ್ಷರವ ಕೆಡಿಸುವ ಕಾರುಣಿಕ ಸಿರಿ<br>
ವರನು ಗದ ಗಿನ ವೀರನಾರಾಯಣನ ಕರುಣದಲಿ॥"

ಈ ಪದ್ಯದಲ್ಲೂ ವೀರನಾರಾಯಣನ ಅಂಕಿತವಿರುವುದರಿಂದ ಇದನ್ನೂ ಕುಮಾರವ್ಯಾಸಕೃತವಂದು ಹೇಳಬೇಕಾಗುತ್ತದೆ ಆದರೆ ಕಾವ್ಯಪರಿಶೀಲನೆಯಿಂದ ಇದು ಕುಮಾರವ್ಯಾಸಕೃತಿಯಲ್ಲವೆಂದು ತೋರುತ್ತದೆ

ಪರ್ವದಲ್ಲಿ ಕೆಲವು ಪ್ರತಿಕಾರರು ಸೇರಿಸಿರುತ್ತಾರೆ ಈ ಕಥಾಭಾಗವು ಕನ್ನಡಭಾರತದ ಎಲ್ಲ ಓಲೆಪ್ರತಿಗಳಲ್ಲೂ ದೊರೆಯುವುದಿಲ್ಲ ಕಥೆ ಇರುವ ಎಲ್ಲ ಪ್ರತಿಗಳಲ್ಲೂ ಒಂದೇ ಕ್ರಮದಲ್ಲಿಲ್ಲ ಪದ್ಯಸಂಖ್ಯೆಗಳೂ ಒಂದೇ ಸಮನಾಗಿಲ್ಲ ಈ ಕಥೆಯಿರುವ ಪ್ರತಿಯ ಹೆಸರು ಸಂಧಿ ಮತ್ತು ಪದ್ಯ ಸಂಖ್ಯೆ ಇವುಗಳನ್ನು ಪಟ್ಟಿಮಾಡಿ ಕೆಳಗೆ ಕೊಟ್ಟಿದೆ --

| ಪ್ರತಿಯ ಹೆಸರು | ಆದಿಪರ್ವದಲ್ಲಿ ಸಂಧಿಸಂಖ್ಯೆ | ಪದ್ಯಸಂಖ್ಯೆ | ಪ್ರತಿಯ ನಂಬರು | ಆದಿಪರ್ವದಲ್ಲಿ ಸಂಧಿಸಂಖ್ಯೆ | ಪದ್ಯಸಂಖ್ಯೆ |
|---|---|---|---|---|---|
| ಬ | ೮ | ೧೩೧ | ಕೆ ೨೫೦ | ೬ | ೧೪೫ |
| ಗ | ೩೮ | ೧೪೬ | ಕೆ ೨೧೮ | ೨೪ | ೧೯೦ |
| ಣ | ೮ | ೧೪೩ | ಕೆ ಎ ೨೨೬ | ೨೧ | ೪೬ |
| ನ | ೨೧ | ೪೬ | | | |
| ನ | ೨೨ | ೧೨೧ | | | |
| ಪ | ೬ | ೧೪೫ | | | |
| ಮ | ಪರ್ವಾರಂಭಕ್ಕೆ ಮೊದಲು | ೧೫೬ | | | |
| ಯ | ೮ | ೧೪೪ | | | |
| ರ | ೮ | ೧೫೧ | | | |

'ನ' ಪ್ರತಿಯಲ್ಲಿ ಈ ಕಥೆಯು ಎರಡು ಕಡೆ ಇದೆ ಇದರಲ್ಲಿ ೨೧ನೇ ಸಂಧಿಯಲ್ಲಿರುವ ಪದ್ಯಗಳೇ ಕೆ ಎ ೨೨೬ನೇ ನಂ ಪ್ರತಿಯಲ್ಲಿಯೂ ಇವೆ ಆದರೆ ಈ ಪದ್ಯಗಳು ಉಳಿದ ಪ್ರತಿಗಳಲ್ಲಾಗಲೀ ಐರಾವತಕೃತಿಯಲ್ಲಾಗಲೀ ಇಲ್ಲ ಈ ಕಥೆಯಲ್ಲೂ ವ್ಯತ್ಯಾಸವಿದೆ ಪುನಃ 'ನ'ಪ್ರತಿಯಲ್ಲಿ ೨೨ನೇ ಸಂಧಿಯಲ್ಲಿ ಈ ಕಥೆಯಿದೆ ಇದು ಉಳಿದ ಪ್ರತಿಗಳಲ್ಲಿದೆ ಈ ಕಥಾಭಾಗವು ಐರಾವತಕೃತಿಯ ಸಂಗ್ರಹ 'ನ' ಪ್ರತಿಯ ೨೧ನೆಯ ಸಂಧಿ ಮತ್ತು ಕೆ ಎ ೨೨೬ನೆಯ ನಂ ಪ್ರತಿಯಲ್ಲಿರುವ ಕಥೆಯು, ಸಂಸ್ಕೃತದಲ್ಲಿ 'ವ್ರತ ರಾಜ' ಎಂಬ ವ್ರತಗ್ರಂಥದಲ್ಲಿ ತಿಳಿಸಿರುವಂತೆ ಭವಿಷ್ಯತ್ಪುರಾಣದಲ್ಲಿರುವ ಗಜಗೌರೀವ್ರತದ ಕಥೆಯನ್ನು ಹೋಲುತ್ತದೆ ಈ ಕನ್ನಡ ಅನುವಾದದ ಕೊನೆಯ ಪದ್ಯದಲ್ಲಿ,

"ಎಲೆ ಮಹೀಪತಿ ಕೇಳು ನಿಮ್ಮಯ ಕುಲಪಿತಾಮಹರವರನೆಲ್ಲರ
ನೊಲಿದು ಪಾಲಿಸುತಿರ್ದ ಗದುಗಿನ ವೀರನಾರಯಣ" ಎಂದಿದೆ

ಐರಾವತ ಕೃತಿಯ ಕೊನೆಯಲ್ಲಿ 'ಗದುಗಿನ ವೀರನಾರಾಯಣ' ಎಂದಿರುವಂತೆ ಈ ಕಥಾಭಾಗದ ಕೊನೆಯಲ್ಲೂ ಗದುಗಿನ ವೀರನಾರ ಯಣ' ಎಂದಿರುವುದರಿಂದ ಇದನ್ನು ಐರಾವತ ಕೃತಿಯಂತೆ ಕುಮಾರ

ವ್ಯಾಸಕೃತವೆಂದೇ ಹೇಳಬೇಕಾಗುತ್ತದೆ. ಆದರೆ ಕುಮಾರವ್ಯಾಸನೇ ಒಂದು ಕೃತಿಯನ್ನು ಎರಡುವಿಧವಾಗಿ ರಚಿಸಿರುವನೆಂದು ಹೇಳುವುದು ಯುಕ್ತಿಯುಕ್ತವಾದುದಲ್ಲ ಇದರಿಂದ ಈ ಕಥಾಭಾಗವು ಪ್ರಕ್ಷಿಪ್ತವೆಂದು ತಿಳಿಯುವುದೇ ಸಾಧುವಾಗಿ ತೋರುತ್ತದೆ ಈ ವಿಧವಾಗಿ ಹೊಸಕಥಾ ಭಾಗವನ್ನೇ ರಚಿಸಿ ಒಂದು ಸಂಧಿಯನ್ನಾಗಿ ಪ್ರತಿಕಾರರು ಸೇರಿಸಿರುವ ಈ ಸನ್ನಿವೇಶವನ್ನು ನೋಡಿದರೆ, ಕೆಲವು ಪದ್ಯಗಳನ್ನು ಹೊಸದಾಗಿ ಸೇರಿಸಿ, ಒಂದೇ ಸಂಧಿಯನ್ನು ಎರಡಾಗಿ ವಿಭಾಗಿಸಿರುವುದು ಅತಿಶಯವಾಗ ಲಾರದು ಹೀಗೆಯೇ ಪ್ರತಿಕಾರರು ತಮಾತಮಗೆ ತೋರಿದಂತೆ ಅನೇಕ ಕಡೆಗಳಲ್ಲಿ ಹೊಸಪದ್ಯಗಳನ್ನು ಸೇರಿಸಿರುತ್ತಾರೆ. ಇದನ್ನು ಸ್ಪಷ್ಟಪಡಿಸು ವುದಕ್ಕಾಗಿಯೇ 'ಐರಾವತ' ಕಥೆಯ ಪ್ರಕ್ಷಿಪ್ತವಿಚಾರವನ್ನು ಇಲ್ಲಿ ವಿಮ ರ್ಶಿಸಿದೆ

ಪರಿಶಿಷ್ಟ ೨ರಲ್ಲಿ ಭಾರತನಿಘಂಟನ್ನು ಕೊಟ್ಟಿದೆ ಇದನ್ನು ನಮ್ಮಲ್ಲಿರುವ ಮೂರುಪ್ರತಿಗಳು ಮತ್ತು ರೆ ಕಿಟ್ಟಲ್ ಅವರ ನಿಘಂಟುವಿನ ಆಧಾರದ ಮೇಲೆ ಸಿದ್ಧಗೊಳಿಸಿದೆ *

ಇದರಲ್ಲಿ ೬೭ ಕಂದಪದ್ಯಗಳಿವೆ ಇದರ ಕರ್ತೃವಿಚಾರವಾಗಲೀ, ಗ್ರಂಥದ ಕಾಲವಿಚಾರವಾಗಲೀ ಏನೂ ತಿಳಿದುಬರುವುದಿಲ್ಲ ಈ ನಿಘಂಟಿ ನಲ್ಲಿ ಬರುವ ಪದಗಳನ್ನು ಸುಲಭವಾಗಿ ತಿಳಿದುಕೊಳ್ಳುವಂತೆ ಪದಗಳ ಅಕಾರಾದಿ ಮತ್ತು ಅರ್ಥವನ್ನೂ ಕೊಟ್ಟಿದೆ

ಕುಮಾರವ್ಯಾಸ ಭಾರತವನ್ನು ಓದುವವರಿಗೆ ಅನುಕೂಲವಾಗಲೆಂಬ ಉದ್ದೇಶದಿಂದ ಈ ನಿಘಂಟನ್ನು ಇದರೊಡನೆ ಮುದ್ರಿಸಿದೆ

**ಎಸ್ ಎನ್ ಕೃಷ್ಣಜೋಯಿಸ್**

---

*೧ ಕ ೩೬೬ (ಕ) ೨ ಕೆ ಎ ೨೫೩ (ಖ) ೩ ಕೆ ಬಿ ೨೯೦ (ಗ) ೪ ಕಿಟೆಲ್ ನಿಘಂಟು (ಘ)

॥ ಶ್ರೀಃ ॥

# ಕನ್ನಡ ಮಹಾಭಾರತ

## ಉದ್ಯೋಗಪರ್ವ

### ಒಂದನೆಯ ಸಂಧಿ

ಸೂಚನೆ ॥ ನಂಬಿದವರಿಗೆ [1]ತನ್ನ[1] ತೆತ್ತಿಹ
ನೆಂಬ ಬಿರುದನು ಮೆಱೆದು ಭಕ್ತ ಕು
ಟುಂಬಿ ಸಾರಥಿಯಾದನೊಲಿದರ್ಜುನಗೆ ಮುರವೈರಿ ॥

ಕೇಳು ಜನಮೇಜಯಧರಿತ್ರೀ
ಪಾಲ [2]ಕುಂತೀತನಯ[2]ರುನ್ನತ
ದೇಳಿಗೆಯನೇನೆಂಬೆನೈ ಕಾರುಣ್ಯಸಿಂಧುವಲ ।
ಶ್ರೀಲತಾಂಗಿಯ ರಮಣ[3]ನೈವರೊ[3]
ಳಾಳೊಡೆಯರಾರೆಂ[4]ಬ ಭೇದವ[4]
ಬೀಳುಕೊಟ್ಟೇ ನಡಸುತಿರ್ದನು ತನ್ನ ಮೈದುನರ ॥೧॥

[5]ಹೇಳಿಕೆಗೆ[5] ಬಾಯ್ಬಿಡುವ ವೇದದ
ತಾಳಿಗೆಗಳೊಣಗಿದವು ಘನತೆಯ
ಮೇಲೆ ತನ್ನದು ಘನತೆಯೆಂಬುದನತ್ತ ಬೇಱಿರಿಸಿ ।
ಕಾಲಿಗೆಱಗುವನಾ ಯುಧಿಷ್ಠಿರ
ನೇಳಲೊಡನೇಳುವನು ಕೃಷ್ಣನ
ಲೀಲೆಯನುಪಮವೆಂದು ವೈಶಂಪಾಯಮುನಿ ನುಡಿದ ॥೨॥

ಒಂದುದಿನವೊಡ್ಡೋಲಗ[6]ಕೆ ನಡೆ[6]
ತಂ[7]ದು[7] ನಿಖಿಳಾವನಿಯ ರಾಯರ
ಮಂದಿಯಲಿ ಮುರವೈರಿ ನುಡಿದನು ರಾಜಕಾರಿಯವ ।

---

[1] ತನುವ (ಪ) [2] ಪಾಂಡುಕುಮಾರ (ಕ ರ ಣ ಮ) [3] ನನಿಬರೊ (ಜ ಯ) [4] ಬುದನು ಮಿಗೆ (ರ) [5] ಹೋಲಿಕೆಗೆ (ಕ ರ ಮ), ಹೇಳಿಗೆಗೆ (ಗ) [6] ಕ್ಕೈತ (ಚ ಜ ಡ ದ ಪ), ದೊಳೈ (ಬ ಯ) [7] ದ (ಖ ಜ ಟ ದ ರ)

ಹಿಂದೆ ಜೂಜಿನ ವಿಲಗದಲಿ ಮನ
ನೊಂದರಿವರಡವಿಯಲಿ ಧರೆ[1]ಗ[1]
ನ್ನೆಂದು ಸೇರು[2]ವರೇನು[2] ಹದನೀ ಪಾಂಡುತನಯರಿಗೆ ||೩||

ದೇವ ನೀನೇ ಬಲ್ಲೆ ನಿನ್ನಯ
ಭಾವ[3]ವನು[3] ಧರ್ಮಜನ ಬಹುಮಾ
ನಾವಮಾನದ ಹೊಱಗೆ ನಿನ್ನದು ಹರಣಭರಣ[4]ವನು[4] ।
ನೀವು ಬಲ್ಲಿರಿ ಕಾಲಲೊದೆದುದ
ನೋವಿ ತಲೆಯಲಿ ಹೊತ್ತು ನಡಸುವ
ಡಾವು ಬಲ್ಲೆವು ಜೀಯ ಎಂದನು ದ್ರುಪದಭೂಪಾಲ ||೪||

ಕಳುಹುವುದು ಶಿಷ್ಟರನು ಧರಣೀ
ತಳವ ಬೇಡಿಸು[5]ವಲ್ಲಿ[5] ಸಾಮವ
ಬಳಸುವುದು ಭೀಷ್ಮಾದಿಗಳಿಗಟ್ಟುವುದು ವಿನಯದಲಿ ।
ತಿಳಿವುದಾತನ [6]ಮತವ[6]ನಲ್ಲಂ
ಬಳಿಕ ನಯವಿಲ್ಲೆಂದಡಾಹವ
ದೊಳಗೆ ಕೈದೋಱುವುದು ಮತವೆಂದನು ಮುರಧ್ವಂಸಿ ||೫||

ಎಲೆ ಮರುಳೆ ಮುರವೈರಿ ಕೌರವ
ರೊಲಿಯರೀ ಹದನನು ಯುಧಿಷ್ಠಿರ
ನಿಳೆಯ ಸೋತನು ಜೂಜುಗಾಱರ [7]ಮೇರೆ[7] ಮಾರ್ಗದಲಿ ।
ನೆಲನ[8]ನೊಡ್ಡಲಿ[8] ಮತ್ತೆ ಗೆಲಿದೇ
ಕೊಳಲಿ ಮೇಣ್ ಕಾದಲಿ ಸುಯೋಧನ
ನೊಳಗೆ ತಪ್ಪಿಲ್ಲೆಂದು ನುಡಿದನು ನಗುತ ಬಲರಾಮ ||೬||

ಲೇಸನಾಡಿದೆ ರಾಮ [9]ಬಳಿಕಿ
ನ್ನಾ[9] ಸುಯೋಧನನಧಮನೇ ನೀ
[10]ನೇ[10]ಸನೇಱಿಸಿಕೊಂಡು ನುಡಿ[11]ವಾ[11] ಮತ್ತೆ ಕೆಲಬರಲಿ ।

---

[1] ಯಿ (ಚ ಬ ಯ) [2] ವುದೇನು (ಚ ಬ) [3] ನೀ (ಬ ಪ್ರತಿಯನ್ನು ಬಿಟ್ಟು ಉಳಿದ ಪ್ರತಿಗಳಲ್ಲಿದೆ) [4] ದಲಿ (ಕ ಚ ರ ತ ಮ) [5] ವುದು (ಕ ಟ ರ ಮ) [6] ನೆಲೆಯ (ಖ ಗಾ ಬ), ಹದನ (ಪ) [7] ಮೇಲೆ (ಕ ಡ ಮ) [8] ನಾಳಲ (ಗ ಜ ಟ ಡ ದ ನ ಪ) ನಾಳ್ವಡೆ (ಚ ಣ ಬ ರ) [9] ಬಳಿಕೇನಾ (ಖ ಗಾ ಚ) [10] ನೀ (ಖ ಜ ಣ ಬ), ವೇ (ಗ ಟ), ಏ (ಚ ಡ ದ ನ ಪ) [11] ವಿರಿ (ಗ ಡ ನ) ವೈ (ಚ), ದರೆ (ಜ ಟ ದ ಪ).

ಆಸುರದ [1]ಕತ್ತಲೆಯು ಬೀಡು[1] ಮ
ಹಾಸಹಾಯುವು ಗೂಗೆಗಳ[2]ಗುಪ[2]
ಹಾಸವೇ ದಿಟವೆಂದು ಸಾತ್ಯಕಿ ನಗುತ ಖತಿಗೊಂಡ ॥೭॥

ಬಲನ ಮಾತೇ[3]ನಿವನ[3] ಭಾಗ್ಯದ
ನೆಲೆ[4]ಯೆ[4] ಘಡ ಕೌರವರ ಶತಕದ
ತಲೆಗೆ ತಾ ವೀಳೆಯುವನೆಲೆ ಕುಂತೀಕುಮಾರಕನೆ ।
ನೆಲನನಲಗಿನ ಮೊನೆಯೊಳಲ್ಲದೆ
ಮೆಲುನುಡಿಯು ಸಾಮುದಲಿ [5]ನಿಮಗಿ
ನ್ನಳುಕಿ ಕೊಡುವರೆ[5] ಧರೆಯೊಳಧಿಕಕ್ಷತ್ರಿ[6]ಯಾತ್ಮಜರು[6] ॥೮॥

ಕಾದಿ ಸಾವುದು ಮೇಣು ರಿಪುಭಟ
ನಾದವನ ನೆತ್ತಿಯಲಿ ಸಬಳವ
ಕೋದು ಕೊಂಬುದು ನೆಲನ[7]ನಿದು[7] ಕ್ಷತ್ರಿಯರ ಮಕ್ಕಳಿಗೆ ।
ಮೇದಿನಿಯು ಬೇಡುವರೆ ಮುಟ್ಟಿಯು
ತೇದು ಹಣೆಯಲಿ ಬಡಿದು ದರ್ಭೆಯು
ಕೋದು ಸ್ವಸ್ತಿಯ ಹಾಯ್ಕುವುದು ಹಾರುವರ ಮತವೆಂದ ॥೯॥

ಎನಲು ನಕ್ಕನು ದ್ರುಪದನಿದು ನ
ಮ್ಮನುಮತವು ಕಾಳಗದೊಳಲಗಿನ
ಮೊನೆಯೊಳಲ್ಲದೆ ಮಹಿಯ [8]ಕೊಡುವನೆ ಕೌರವೇಶ್ವರನು ।
ವಿನುತಸಾತ್ಯಕಿ ಕೇಳು [9]ಮತವನು[9]
ಜನಪ[10]ನಲ್ಲಿಗೆವೊಬ್ಬ[10] ದೂತನ
ವಿನಯದಲಿ ಕಳುಹುವುದು [11]ಸಾಮವ ಬಳಸ[11]ಬಹುದೆಂದ ॥೧೦॥

ವಿಹಿತವಿದು ಪಾಂಚಾಲಕನ ಮತ
ವಹುದು ರಾಯರಿಗಟ್ಟುವುದು ವಿ
ಗ್ರಹವ ಸೂಚಿಸಿ ಕರಸಿಕೊಂಬುದು ಬೇಹ ಭೂಭುಜರ ।

---

[1] ಬಲು ಕತ್ತಲೆಗಳು (ಟ ಡ ದ ನ) ಕತ್ತಲೆಯ ಕಟಕ (ಬ ಯ) [2] ಗಪ (ಗಾ ಚ) [3] ಕಿವನ (ಕ ರ ಮ) ನವರ (ಗ ಟ ಡ ದ ನ ಪ) [4] ಯ (ಕ ಗ ಮ) [5] ನಿಮಗಿನ್ನಿಳೆಯ ಕೊಡುವರೆ (ಕ ಮ), ನೇಮದಲಳೆಯಕೊಂಬರೆ (ಠ ಬ ಯ) [6] ಯೋತ್ತಮರು (ಚ ರ ಣ ಬ ಯ ರ) [7] ನೀ (ಕ ಮ) [8] ಬಿ (ಖ ಗಾ ಚ ನ) [9] ನೆಲೆಯನು (ಗಾ ಚ ನ) [10] ರನ್ನಬರೊಬ್ಬ (ಕ ಖ ರ ಡ ಮ) [11] ಭೇದವನಱಿಯ (ಖ ಗಾ ರ ನ)

ಬಹಳಬಲಸಂವರಣೆಯಲಿ ಸ
ನ್ನಿಹಿತರಾಗಿಹುದಿತ್ತಲತ್ತಲು
ಮಹಿಯ ಬೇಡಿಸಿ ಕಳು[1]ಹು ದೂತರ[1]ನೆಂದನಸುರಾರಿ ||೧೧||

ಮದುವೆಗೋಸುಗ ಬಂದೆವಾವಿಂ
[2]ಇದಱ ಮೇಲಣ ರಾಜ[2]ಕಾರ್ಯದ
ಹದನ[3]ನೆಲ್ಲವನಱಿದು ಕರಸಿದಡಾವು ಬಹೆವೀಗ[3] ।
ಹದುಳವಿಹುದೆಂದಸುರರಿಪು ಕರು
ಣದಲಿ ಕುಂತೀಸುತರನಾ ದ್ರೌ
ಪದಿಯನಭಿಮನ್ಯುವ ಸುಭದ್ರೆಯ [4]ಹರಸಿ[4] ಬೀಳ್ಕೊಂಡ ||೧೨||

ಕೂಡಿಕೊಂಡಿ[5]ಹುದಿವರು ಮಕ್ಕಳು[5]
ನೋಡಲಾಗದು ಹೆಚ್ಚುಕುಂದನು
ನಾಡ ಬೇಡಲು ಬುದ್ಧಿವಂತರನಲ್ಲಿಗಟ್ಟುವುದು ।
[6]ಕೂಡಿ ಸೋದಿಸಿ[6] ಸೆಜ್ಜೆಯಲಿ ಮೈ
ಗೂಡಿಯಾರೋಗಣೆ[7]ಗಳಲಿ ಮನ
ಗೂಡಿ ಬೆರಸಿಹು[7]ದೆಂದು ದ್ರುಪದವಿರಾಟರಿಗೆ ನುಡಿದ ||೧೩||

ಎಂದು ಕಳುಹಿಸಿಕೊಂಡು ನಾರೀ
ವೃಂದಯದುಬಲಸಹಿತ ದೇವ ಮು
ಕುಂದ ಬಿಜಯಂಗೈದನತ್ತಲು ದ್ವಾರಕಾಪುರಿಗೆ ॥
ಒಂದುದಿನ[8]ವಾ[8]ಳೋಚನೆಯ[9]ಲೈ
ತಂದು[9] ಕರೆದು ಪುರೋಹಿತನ ನಲ
ವಿಂದ ಕಳುಹಿದ ದ್ರುಪದನಾ ಕೌರವನ ಪಟ್ಟಣಕೆ ||೧೪||

ಓಲೆವುಡುಗೊಱೆಸಹಿತ ಧರಣೀ
ಪಾಲರಿಗೆ ಪಾಂಡವರ ಶಿಷ್ಟರು
ಕಾಳಗಕೆ [10]ನೆರ[10]ವಾಗಲೋಸುಗ ಕರೆದರಲ್ಲಲ್ಲಿ ।

---

[1] ಹು ಶಿಷ್ಟರ (ಗಾ) ಹಿ ಶಿಷ್ಟರ (ಚ ಜ), [2] ಇದರ ಮೇಲೇನಾದ (ಗ), ಇದರಮೇಲನ್ನಾದ (ಝ ಟ ದ ಪ ರ) [3] ನಱಿದಟ್ಟಿದರೆ ಬಹೆವಾವು ಕರಸಿದರೆ (ಕ ಮ), (?) ನಱಿದಟ್ಟುವುದು ಬಹೆವಾವ್ ಸಾಕದನ್ನಬರ (ಗ), ನಱುಹುವುದಟ್ಟಿದರೆ ಬಹೆವಾವು ವಹಿಲದಲಿ (ಟ ಡ ದ ಪ ಯ) [4] ಕರಸಿ (ಕ ರ ನ ಮ) [5] ಹರಿವರು ಮಕ್ಕಳು (ಕ ರ ಮ) ಹುದಿವರ ಮಕ್ಕಳ (ಜ) [6] ಕೂಡೆ ಸೋದಿಸಿ (ಖ ಗಾ), ಕೂಡೆ ಸಂಧಿಸಿ (ಜ) [7] ಯಲೆಚ್ಚರಮಾಡಿಕೊಂಡಿಹು (ಝ ಣ ತ ರ) [8] ದಾ (ಕ ಗ ಚ ರ ಮ) [9] ನೆಲೆಯಿಂದ (ಖ ಗಾ.ರ). [10] ಬಲ (ಕ ಖ ಗ ಟ ಪ ಯ)

ಆಳುಕುದುರೆಯ ನೆರಹಿ [1]ದಿಕ್ಕಿನ[1]
ಮೂಲೆಯರಸುಗಳೆಲ್ಲ ಕುರುಭೂ
ಪಾಲನಲ್ಲಿಗೆ ಕೆಲರು ಕೆಲಬರು ಪಾಂಡುತನಯರಿಗೆ ॥೧೫॥

ಧರಣಿ[2]ಯೆಡೆಗೆಡೆ[2] ರಾಯಮೋಹರ
ತೆರಳಿತಿಬ್ಬರು ರಾಯರಿಗೆ ಕೈ
ನೆರ[3]ಹು[3]ದೋಱಲು ಕವಿದು ಬಂದುದು ಕಾಣೆನಳತೆಗಳ ।
ಅರಿಗಳತಿಹೆಚ್ಚಿದರು ಮೈಮಱೆ
ದಿರಲು[4]ಬಾರದು ಮಹಿಗೆ ನಾವಿ[4]
ನ್ನುರವಣಿಸಬೇಕೆಂದು [5]ದುರ್ಯೋಧನನು[5] ಚಿಂತಿಸಿದ ॥೧೬॥

ಹದನನಾಪ್ತರಿಗಱುಹಿದನು ಗು
ಪ್ತದಲಿ ಕೃಷ್ಣನನೊಳಗುಮಾಡುವ
ಮುದದಿ ಬಂದನು ಕೌರವೇಶ್ವರ ದ್ವಾರಕಾಪುರಿಗೆ ।
[6]ಇದನು[6] ಭೇದಿಸಿ ಬೇಹಿನವರಱು
ಹಿದರು ಕುಂತೀಸುತರಿಗತಿವೇ
ಗದಲಿ ಧರ್ಮಜನಳುಕಿ ಕಳುಹಿದನಿಂದ್ರನಂದನನ ॥೧೭॥

ಬೀಳುಕೊಂಡರ್ಜುನನು ಲಕ್ಷ್ಮೀ
ಲೋಲನಲ್ಲಿಗೆ ಬರುತ ಕಂಡನು
ಲೀಲೆಯಲಿ ನರ್ತಿಸುವ ನವಿಲನು ಬಲದೊಳಡಹಾಯ್ದು ।
ಮೇಲೆ ಹಂಗನ [7]ಬಲನ[7] ಹರಿಣೀ
ಜಾಲ[8]ದೆಡನನು[8] ತಿದ್ದಿ[9]ವಳಿಯ[9] ವಿ
ಶಾಲಶಕುನವನಾಲಿಸುತ ಹರುಷದಲಿ [10]ನಡೆತಂದ[10] ॥೧೮॥

ಮೊರೆದು ಮಿಗೆ ತಲೆಯೊತ್ತಿ ತೆರೆಮೈ
ಮುರಿದು ಗುಳುಗುಳುಗುಳಿ[11]ಸೆ[11] ಘನನಿ
ಷ್ಠುರನಿನಾದದ ಗಜಱು [12]ಗಾ[12]ಡಿಸೆ ಬಹಳಲಹರಿಯಲಿ ।

---

[1] ದೆಸೆಗಳ (ಖ ಗಾ ರ ತ) [ಬಂದರು]? ನಮಗೆ ದೊರೆತಿರುವ ಪ್ರತಿಗಳಲ್ಲಿಲ್ಲ [2] ಪತಿ ಕೇಳ್ (ರ ತ ಬ) [3] ವ (ಖ ಗ) ವು (ಚ ರ ಬ) [4] ಮಹಿಮೆಗ ಮಾನ್ಯವಹುದಿ (ಝ ರ ಣ ರ) [5] ಕೌರವರಾಯ (ಗಾ ರ ಬ) [6] ಅದನು (ಗಾ) [7] ಬಲವ (ಟ ದ), ನಡದ (ಣ) ನೆಡನ (ರ), [8] ವೆಡದಲ (ಚ ಬ) ದೆಡರನು (ಟ ದ) [9] ಬಳಿಯ (ಕ.ಚ ಬ), ವಲ್ಲಿ (ಜ ಟ ದ), [10] ಹೊಱವಂಟ (ಕ ರ.ಮ) [11] ತ (ಖ.ಚ ಡ ಪ), ನ (ಗ). [12] ಭಾ (ಗ).

ತೆರೆ ತೆರೆಯ ತಿವಿದೆದ್ದು ಗಗನ[1]ಕೆ
*ಪರಿದು* ವಿತಳಕೆ ಹಾಯ್ದು ಸುಳಿ ಭೋಂ
ಕರಿಸೆ[1] ಸಾಗರನುಬ್ಬುಗವಳವ ಕೊಂಡವೊಲ್ [2]ಕುಣಿದ[2] ॥೧೯॥

ಪೂತು ಪುರುಷ ಸಾಗರನ ಬಲುಹು ಮ
ಹಾತಿಶಯವೈ ಇವನನಂಜಿಸ
ಲಾತ [3]ನಳ ಮರ್ಮಿಗನು[3] ಬೆಟ್ಟವನೊಟ್ಟಿ ನೆತ್ತಿಯಲಿ।
ಈತನೆಮಗಂಜುವನೆ ಎನುತ ವಿ
ಧೂತರಿಪುಬಲ [4]ಮುಂದ[4] ಕಂಡನು
ಘಾತಕದ ಹೆಡತಲೆಯ ದಡಿಯನು ದ್ವಾರಕಾಪುರಿಯ ॥೨೦॥

ಅಟ್ಟಿ ಬಳ[5]ಲಿದ[5] ಶ್ರುತಿಗೆ ಹರಿ ಮೈ
ಗೊಟ್ಟ ಠಾವಿದು ತಾಪಸರು ಜಪ
ಗುಟ್ಟಿ[6]ಜಿನುಗಿ[6]ದಡವರನುಜ್ಜೀವಿಸಿದ [7]ತಾಣವಿದು[7]।
ಹುಟ್ಟುಸಾವಿನ ವಿಲಗ[8]ದವರನು[8]
ಬಿಟ್ಟ ಠಾವಿದು [9]ಕಾಲಕರ್ಮದ[9]
ಥಟ್ಟು ಮುರಿವಡೆದೋಡಿದೆಡೆಯಿದು ಶಿವಶಿವಾಯೆಂದ ॥೨೧॥

ಪರ[10]ಮ[10]ನಾರಾಯಣಪರಾಯಣ
ನಿರವೆ ಪರತರವೆಂದು ಮುರಹರ
ಬರೆದ ಠಾವಿದು ಮುಕುತಿಯಿದಱೊಳು ಕರತಳಾಮಳಕ।
ಭರಿತಬೊಮ್ಮದ ಸುತ್ತುಗೊಣಸನು
ಸರಿದ ಠಾವಿದು ತರ್ಕತಂತ್ರದ
ತರದ [11]ಯುಕುತಿಗೆ[11] ತೊಳಸುಗೊಳ್ಳದ ಠಾವಲಾ ಎಂದ ॥೨೨॥

ಹೊಗಳುತರ್ಜುನನಸುರರಿಪುವಿನ
ನ್ನಗರಿಗೈತಂದರಮನೆ[12]ಗೆ ಬರ[12]
ಲಗಧರನು ಮಂಚದಲಿ ನಿದ್ರಾಂಗನೆಯ ಕೇಳಿಯಲಿ।

ಅಗಧರ - ಬೆಟ್ಟ ಧರಿಸಿದವ

---

*[ಪರಿಯೆ] ? [1] ಕೆ ಪರಿದು ವಿತಳಕೆ ಸ ರಿದು ಸುಳಿಯಂತರಿಸೆ (ಗ), ಪನಿರ ದೊದದು ವಿತಳಕ್ಕೆ ಸುಳಿಭೋಂಕರಿಸೆ(ಜ ಝ ಣ ರ), ಪನೆರೆದು ವಿತಳಕೆ ಸುರಿದಿಳಿದು ಭೋಂಕರಿಸಿ(ದ ರ ಬ) [2] ಮೆಱೆದ(ಗ), ನಲಿದ (ಚ) [3] ಗಳು ವರ್ಮಿಗಳು (ಖ ಟ ಣ ಪ ಮ,) ಗಳು ಪರ್ವಿಗರು (ದ ನ ಬ), ಗಳು ಗರ್ವಿತರು (ಯ) ಗಳು ಮರ್ಪಿಗಳು (ಡ) [4] ಬಂದು (ಗ) [5] ಲ ವ (ಕ ರ ಡ ನ ಬ ಯ) [6] ಜರುಗಿ (ಕ ಖ ಬ ಮ) [7] ಠಾವಿದಲ (ಕ ಚ ರ ಮ) [8] ಜೀವರ (ಖ ಗಾ ಚ ರ) [9] ತರ್ಕತಂತ್ರದ (ಕ ರ ಮ, [10] ವು (ಕ ಖ ಚ ಪ), ವೆ (ರ ನ ಬ) [11] ಬಳಕೆಯ (ರ ಬ) [12] ಯ ಹೊಗ (ಜ)

ಸೊಗಸು ಮಿಗಲರೆದೆಱೆದ ಲೋಚನ
ಯುಗಳ ಸಮತಳಿಸಿದ ಸುಷುಪ್ತಿಯ
ಬಿಗುಹಿನಲಿ ಪರಮಾತ್ಮನೆಸೆದನು ಭ್ರಾಂತಿಯೋಗದಲಿ ॥೨೩॥

ಮುಕುಳಕರಪುಟನಾಗಿ [1]ಭಯಭರ[1]
ಚಕಿತಚಿತ್ತ ಶರೀರನಬುಜಾಂ-
ಬಕನನೆಟ್ಟಿಸಲಮ್ಮದೊಯ್ಯನೆ ಚರಣಸೀಮೆಯಲಿ।
ಅಕುಟಿಲನು ಸಾರಿದನು ಬಳಿಕೀ
ವಿಕಳದುರ್ಯೋಧನನು ನಿಗಮ
ಪ್ರಕ[2]ರ[2]ವಾಳಿಯ [3]ವಾಳಿಯು[3]ತ್ತಲು ಸಾದುರ್[4]ಮಂಡಿಸಿದ[4] ॥೨೪॥

ಇರಲು ನಿಮಿಷದೊಳಸುರರಿಪು ಮೈ
ಮುರಿ[5]ದನುಪ್ಪವಡಿಸಿದನಿದಿರಲಿ[5]
ಸುರಪತಿಯ ಸೂನುವನು ಕಂಡನು ನಗೆಯ ಮೊಳೆ ಮಿನುಗೆ
ತಿರುಗಿನೋಡಿದ ತಲೆ[6]ಯ ದೆಸೆಯಲಿ[6]
ಕುರುಕುಲೇ[7]ಶ್ವರನಲ್ಲಿ ವಿಕಾರದ[7]
ಯಿರವ ಕಂಡನಿದೇನಿದೇನೆಂದಸುರರಿಪು ನುಡಿದ ॥೨೫॥

ವೀಳಯವ ತಾ ಕೊಂಡು ಕುರುಭೂ-
-ಪಾಲಪಾರ್ಥರಿಗಿತ್ತು ಲಕ್ಷ್ಮೀ
ಲೋಲ ನುಡಿಸಿದನುಭಯರಾಯರಿಗಿತ್ತ ಬರವೇನು।
ಹೇಳಿರೈ ಬರವಘಟಿತವಲಾ
ಮೇಳವೇ [8]ಕದು[8]ಮಾನ್ಯರೆಮ್ಮಾ
ಯಾಲಯಕೆ ಬರವೇನೆನಲು ಕುರುರಾಯನಿಂತೆಂದ ॥೨೬॥

ಯಾದವರು ಕೌರವರೊಳೆಂಟೇ
ಭೇದ ನಾವ್ಮೈತೆಂದ[9]ಡೀ ಪರಿ
ಯಾದ ಲಾಘವವೇನು ನಿಮ್ಮೊಳಾರು ಸಖರೆಮಗೆ।

---

[1] ಭವಭಯ (ಗ) [2] ಟ (ನ) [3] ಮುಕುಟದ (ಕ ಣ ಮ) [4] ಕುಳ್ಳಿರ್ದ (ಖ), ರಂಜಿಸಿದ (ಜ) [5] ದು ಕುಳ್ಳಿರ್ದಿದಿರಿನಲ (ಕ ಮ) ದು ಪುಪ್ಪವಡಿಸಿದನಿದಿರಲ (ಗ) [6] ದೆಸೆಯಲಿಹ (ಕ್ರ ರ ಬ ಮ) [7] ಶನ ರೀವಿಕಾರತೆ (ಟ ರ ದ ನ ಯ) [8] ಕಿದು (ಟ ರ ಙ ಬ ಯ) [9] ರೆಮ್ಮೊಳಗಾದ ಲಘುತನ (ಗಾ ಚ ರ ಣ)

ಸೋದರರ[1]ರ[1] ಮನ ಕದಡಿದವು ದಾ
ಯಾದವಿಷಯದೊ[2]ಳೆಂದು[2] ಧರಣಿಗೆ
ಕಾದುವೆವು [3]ನೀವಿ[3]ಬ್ಬರಿಗೆ ಬಲವಾಗಬೇಕೆಂದ ॥೨೭॥

ಕೌರವೇಶ್ವರ ಕೇಳು ಧರಣೀ
ನಾರಿ[4]ಯಾರೊಡನೊಕ್ಕತನವಿ
ದ್ದಾರ[4] ಮೆಚ್ಚಿ[5]ದ[5]ಳಾರಸಂಗಡವುರಿಯ [6]ಹಾಯಿದಳು[6] ।
ಭೂರಿಮುಮುಕ್ಕಾರದಲಿ ನೃಪರು ವಿ-
ಚಾರಿಸದೆ ಧರೆ ತಮ್ಮದೆಂದೇ
ನಾರಕದ ಸಾಮ್ರಾಜ್ಯಕೈದುವರೆಂದು ಹರಿ ನುಡಿದ ॥೨೮॥

ನಾಡಿಗೋಸುಗ ಸೋದರರು ಹೊ-
ಯ್ದಾಡಿ ಹಱಿಹಂಚಾದರೆಂಬುದ
ನಾಡದಿಹುದೇ ಲೋಕ ಕಮಲಜನು ಸುರಿಹನ್ನೆಬರ ।
ಬೇಡ ಖತಿ ನಿಮ್ಮೊಳಗೆ ನೀವ್ ಕೈ
ಗೂಡಿ ಬದುಕುವುದೊಳ್ಳಿತಾವ್ ನೆಱೆ
ನೋಡಿ ಸಂತಸಬಡುವೆವೆಂದನು [7]ದಾನವಧ್ವಂಸಿ[7] ॥೨೯॥

ತಗರೆರಡ [8]ಖತಿ[8]ಗೊಳಿಸಿ ಬಲುಗಾ
ಳಗವ [9]ನೋಡುವರಂತೆ[9] ನಿಮ್ಮನು
ತೆಗೆತೆಗೆದು [10]ಕಲಮಾಡಿ ಬಿಡು[10]ವರು ಖುಲ್ಲರಾದವರು ।
ನಗುತ ಹೆಱೆಹಿಂಗುವರು ಹಿಸುಣರು
ಬಗು[11]ಳದವದಿರು ಬಳಿಕ[11] ಕಡೆಯಲಿ
ಹೊಗುವಿರೈ ನೀವಿಬ್ಬರಪ[12]ಕೀರ್ತ್ಯಂಗನೆಯ ಮನೆಯ[12] ॥೩೦॥

ಅವಧರಿಸು ಮುರವೈರಿ ಧರ್ಮ
ಶ್ರವಣಕೋಸುಗ ಬಾರೆವಾವ್ ಪಾ
ರ್ಥಿವರ ಪಂಥದ ಕದನವಿದ್ಯಾಕಾಮುವೆಮಗಾಯ್ತು ।

---

[1] ದ(ಕ ರ ಣ ನ ಮ) [2]ಳಿನ್ನು (ಖ ಗ ಟ ಡ ಪ ಯ), ಳೆಮ್ಮ (ಣ ರ) [3]ನಮ್ಮಿ (ಗ ಟ ದ) [4]ನಾರಾಯಣನ ವಧು ಮತ್ತಾರ(ಕ ಮ ), ಯಾನಿಬರೊಳೊಕ್ಕತನವಿದ್ದಾರೆ (ಬ ರ) [5] ಪ (ಗ ಚ ರ ಬ) [6] ಹಾಯ್ದುಪಳೊ (ಕ ಗ ಚ ಟ ಬ ಮ) [7] ರುಕ್ಮಿಣೀರಮಣ (ಕ್ಷ.ರ ಮ) ನಗುತ ಮುರವೈರಿ (ಣ) [8] ಹುರಿ (ರ ಬ) ಜೊತೆ (ಯ) [9] ಮಾಡುವರಂತೆ (ಚ), ನೋಡ್ದುವರಂತೆ (ಜ ಝ), ಕಾದಿಸುವಂತೆ (ಮ) [10] ಹುರಿಮಾಡಿ ಮಸೆ (ಕ ಠ ಣ ಮ) [11] ಳುವವದಿರು ಮತ್ತೆ (ಕ ಮ) [12] ಕೀರಿತಿಯ ಹಾದರಕೆ (ಗ ಚ ಟ ದ ನ.ಬ), ಕೀರಿತಿಯ ಸಾಗರವ (ಝ), ಕೀರಿತಿಯ ಪರಿಣಯಕೆ (ರ)

ನಿವಗೆ ನಾವಿತ್ತಂಡ ಸರಿ ಪಾಂ
ಡವರಿಗೆಯು ಮನದೊಲವಿನಲಿ ಕೌ -
ರವರಿಗೆಯು ಬಲವಾಗಬೇಕೆಂದನು ಸುಯೋಧನನು ॥೩೧॥

ಎನಲು ತಂಬುಲಸೂಸೆ ನಗುತ
ರ್ಜುನನ ನೋಡಿದನಸುರರಿಪು ನಿ -
ನ್ನನುವ ಹೇಳೈ ಪಾರ್ಥಯೆನೆ ತಲೆವಾಗಿ [1]ಕೈಮುಗಿದು[1] ।
ಎನಗೆ ಮತ ಬೇ[2]ಱೇನು[2] ದುರ್ಯೋ -
ಧನನ ಮತವೇ [3]ತನ್ನ[3] ಮತ ನಿ -
ಮ್ಮನುನಯುವೆ ನಯವೆನ್ನೊಳೀ ಸ್ವಾತಂತ್ರ್ಯವಿಲ್ಲೆಂದ ॥೩೨॥

ಆದಡಾವಿಹೆವೊಂದು [4]ಕಡೆ[4]ಯಲಿ
ಕಾದುವವರಾವಲ್ಲ ಬಲ[5]ಸಹ[5]
ಯಾದವರು ಕೃತವರ್ಮ ನಾರಾಯಣಮಹಾಸೇನೆ ।
ಕಾದುವವರಿವರೊಂದು [4]ಕಡೆ[4]ಯೆರ -
ಡಾದು[6]ದಿದ[6]ಱೊಳು ಮೆಚ್ಚಿದುದ ನೀ
ನಾದರಿಸಿ ವರಿಸೆಂದು ಪಾರ್ಥಂಗಸುರರಿಪು ನುಡಿದ ॥೩೩॥

ಮುರಹರನೆ ಬಿನ್ನಹವು ಕೌರವ
ರರಸನತಿಸಿರಿವಂತನಿದ ಸಂ -
[7]ವ[7]ರಿಸಲಾಪನು ಬಹಳಯಾದವಸೈನ್ಯಸಾಗರವ ।
ಧರೆಯಸಂಪದವಿಲ್ಲದಡವಿಯು
[8]ತಿರುಕರಾವಿನಿಬರನು ಸಲೆ[8] ಸಂ
[7]ವ[7]ರಿಸಲಾಪೆವೆ ಕೃಷ್ಣ [9]ನೀ ಸಾಕೆಂದನಾ ಪಾರ್ಥ[9]

ನಾವು ಬಡವರು ಬಡವರಿಗೆ ದಿಟ
ನೀವು ಬೆಂಬಲ[10]ವೆಂಬ[10] ಬಿರುದನು
ದೇವ ಕೇಳಿದು ಬಲ್ಲೆನೆಂದನು ಪಾರ್ಥ ಕೈಮುಗಿದು ।

---

[1] ವಿನಯುದಲಿ (ಯ)　[2] ಱಿಲ್ಲ (ಚ)　[3] ನಮ್ಮ (ಟ ದ ನ ಯ ರ)　[4] ದೆಸೆ (ಕ ರ ಮ)　[5] ನೂ (ಕ), ನೀ (ರ ಬ)　[6] ದಿವ (ಗಾ ನ)　[7] ಹ (ಕ ರ) ತ (ಗಾ)　[8] ತಿರುಕರಾವೆಮಗಿನಿಬರನು (ಖ ಗ ಟ ನ ಪ ಯ), ತಿರುಕುಳಿಗರಾವಿನಿಬರನು (ಚ ರ ಬ)　[9] ನೀನೇ ಸಾಕು ನಮಗೆಂದ (ಗ).　[10] ನಿಮ್ಮ (ಝ).

ನೀವು ಸುಖದಲಿ ಪಾಂಡವರ[1]ನು
ಜ್ಜೀ[1]ವಿಸುವುದೆಮಗುಳಿದ ಯದುಭೂ
ಪಾವಳಿಯು ಕೃಪೆಮಾಡಿಯೆಂದನು ಕೌರವರರಾಯ ॥೩೫॥

[2]ಮಱೆಯ[2] ಮಾತುಗಳೇಕೆ ಪಾಂಡವ
ರೆಱಿಕ ನಿಮ್ಮಲಿ ಹಿರಿದು ಪಾರ್ಥಗೆ
ಮಱುಗುವಿರಿ [3]ಹಿರಿದಾಗಿ[3] ಮನಮೆಚ್ಚುಂಟು ನಿಮ್ಮೊಳಗೆ ।
ಊಱುವ ಕಾರ್ಯಕೆ ಕಡೆಯಲಾವೇ
ಹೊಱಗು ಸಾಕಂತಿರಲಿ ನೀವ್ ಹೊ
ಕ್ಕಱಿಯಲಾಗದು [4]ಮತ್ತೆಯಿದನೇ ಬೇಡಿಕೊಂಡವನು[4] ॥೩೬॥

ಮೊಲೆಯ[5]ನುಂಬಂದೊಬ್ಬ[5] ದನುಜೆಯ
ಹಿಳಿ[6]ದೆವೊದೆದೆವು[6] ಶಕಟನನು [7]ತರು
ಗಳನು[7] ಧೇನುಕ ವತ್ಸ ನಗ ಹಯ ವೃಷಭ ಭುಜಗರನು ।
ಬಲುಗಜವ ಮಲ್ಲರನು ಮಾವನ
[8]ಸೆಳದು[8] ಮಗಧನ ಬಲವ ಬಱಿಕೈ
[9]ದಳಿಸಿ[9]ದೆವು ದಾನವರ[10]ಹೆಂಡಿರನಾ[10]ಹವಾಗ್ರದಲಿ ॥೩೭॥

ಕಾಲಯವನನ ದಂತವಕ್ತ್ರನ
ಸೀಳಿದೆವು ಮುರನರಕ[11]ಕುಂಭನ[11]
ಸಾಲುವನ ಪೌಂಡ್ರಕನ [12]ಡಿಬಿಕನ ಹಂಸಬಕರುಗಳ[12] ।
ಕಾಳಗದೊ[13]ಳಿಟ್ಟರೆದು[13] ಬಾಣನ
ತೋಳ [14]ತ[14]ಱಿವಂದಾಯ್ತು ಧಾಳಾ
ಧೂಳಿಯಾಹವವಿಂದು[15]ವೌಳಿಗೆ ನಮಗೆ[15] ಮುನಿಸಿನಲಿ ॥೩೮॥

---

[1] ನೇ ಜೀ (ಕ ಚ ರ ಮ) [2] ಬಱಿಯ (ಬ) [3] ಮಿಗಿಲಾಗಿ (ಡ ಪ ಯ) [4] ಕೃಷ್ಣಯಿದನೇ ಬೇಡಿಕೊಂಡವನು (ಗ) ಸಲಸಬೇಹುದು ಬಿನ್ನಹವನೆಂದ (ಚ), ಕೃಷ್ಣಯೆಂದನು ಕೌರವರರಾಯ (ಜ ಟ ದ ಪ) [5] ನುಣಿಸಲು ಬಂದ (ಮ). [6] ದು ಕೊಂಡವು (ಕ ಮ) ದೆ ಕೊಂಡೆವು (ಚ ರ ದ ಬ) [7] ತನುಗಳದೆ (ಗ ಚ ಜ ಟ ಡ ದ್ವ ಪ) [8] ನೆಳದು (ಖ ಗ ಚ ಪ ಬ) [9] ದಲಸಿ (ಕ ಮ) ದೆಳಸಿ (ಖ ಗ ಜ ಣ ದ ಪ ರ), ದಿಳುಹಿ (ಚ ಝ ರ ಬ) [10] ಹಿಂಡಿದೆವಾ (ಚ ಝ ಠ ಬ). [11] ಶುಂಭರ (ಗ ಟ ಡ ಪ) [12] ಹಂಸನ ಡಿಬಿಕವೋಹರವ (ಗ ಡ ಣ ಪ ಯ) [13] ಳಿಟ್ಟಣಿಸಿ (ಗ), ಳಿಟ್ಟೊರಸಿ (ಚ ಜ ಡ ಪ ಯ) [ಳೊರಸಿದೆವು] ? [14] ಮು (ಜ ಟ ಡ ಪ ಯ) [15] ವ್ರಾಳಿಗಳೊಡನೆ (ಕ ಮ) ಮೌಳಿಯೊಳೆಮಗೆ (ಗ ಜ ಟ ಯ)

ಹಸುಳೆತನ ಮೊದಲಾಗಿ ಬಲುರ
ಕ್ಕಸರೊಡನೆ ತಲೆಯೊತ್ತಿ ರಣದಾ
ಯಸವ ಸೈರಿಸಿ ಹೊಯ್ದು ಕೊಂದೆವು ಕೋಟಿದಾನವರ ।
ಮಿಸುಕಲಾಜೆವು ಚಕ್ರ ಭಂಡಾ
ರಿಸಿತು ಮುನ್ನಿನ ಜವ್ವನದ [1]ಭರ[1]
ಮಸುಳಿತಾವುಂಡಾಡಿಭಟ್ಟರು ನೃಪತಿ ಕೇಳೆಂದ ॥೪೯॥

ಎನಲು ಕರಲೇಸೆಂದು ಕೌರವ
ಜನಪ ಕಳುಹಿಸಿಕೊಂಡು ಬಲರಾ
ಮನನು ಕೃತವರ್ಮನನು [2]ಕಂ[2]ಡನು ನಿಖಿಳಯಾದವರ ।
[3]ಅನಿತು[3]ಬಲಸಹಿತೊಲವಿನಲಿ ಹ
ಸ್ತಿನಪುರಕೆ [4]ಹಾಯಿದನು ಬಳಿಕಾ[4]
ದನುಜರಿಪು ನಸುನಗುತಲಂತೆಂದನು ಧನಂಜಯ[5]ನ[5] ॥೫೦॥

ಸುರಗಿಯನು ಬಿಸುಟೊಜೆಯನಂಗೀ
ಕರಿಸಿದವೊಲಿಂದಾಹವದ ಧರ
ಧುರದ ಯಾದವಬಲವನೊಲ್ಲದೆ ಮಂದಮತಿಯಾಗಿ ।
ಮರುಳೆ ಕಾದದ ಕಟ್ಟದೆ[6]ಮ್ಮನು[6]
ಬಜಿದೆ ಬಯಸಿದೆಯಿದನು ಕೇಳ್ದರೆ
ಮರುಳುಗುಟ್ಟದೆ [7]ಮಾಣರೇ ನಿನ್ನಣ್ಣ ತಮ್ಮದಿರು[7] ॥೫೧॥

ಎನಲು ಗಹಗಹಿಸಿದನಿದಾರಿಗೆ
ಮನವ ಕದ್ದಾಡುವಿರಿ ನಿಜಶಿ
ಷ್ಯನಲಿ [8]ನಾಟಕದಿಂ[8]ದ್ರಜಾಲವೆ ನಿಮ್ಮ ಗರುಡಿಯಲಿ ।
ಎನಗೆ ಶ್ರಮವುಂಟದು ನಿಲಲಿಯೆ
ನ್ನನುಜರಗ್ರಜರಜಿಯರೇ ನಿ
ಮ್ಮನುಪಮಿತ ಮಹಿಮಾವಲಂಬವನೆಂದನಾ ಪಾರ್ಥ ॥೫೨॥

---

[1] ಬಲ (ಖ ಗಾ ಶ ರ) [2] ಕೊಂ (ಕ ಜ ರ ಣ ಮ ರ) [3] ಎನುತ (ಕ ರ ಮ) ಇನಿತು (ಖ ಗಾ) [4] ಮರಳಿದನು ಬಳಿಕೀ (ಗ ಜ ಟ ಯ) ನಡೆತಂದ ಬಳಿಕೀ (ಪ) [5] ಗೆ (ಗಾ ಚ ರ ಮ) [6] ನ್ನನು (ಕ ಮ) [7] ಮಾಣ್ದರೇ ನಿನ್ನಗ್ರಜಾನುಜರು (ಣ ರ) [8] ನೋಟ ಮಹೇಂ (ಕ ಮ) ನೋಟಕದಿಂ (ಗ ಚ ಡ ಣ ರ)

ನಾವು ಬಱಿಗೈಯವರು ಬರಲೆಮ
ಗಾವುದಲ್ಲಿಯು ಕೆಲಸವುಂಡುಂ
ಡಾವು [1]ಕುಳಿತಿ[1]ಹರಲ್ಲ(ಹಂಗಾಗಿರ್ದೆವು ಕಟಕದಲಿ।
ದೇವರೆಂದೇ ನೀವು ಬಗೆವಿರಿ
ದೇವತನ[2]ವೆಮಗಿಲ್ಲವೆಂಬುದ
ನಾವು ಬಲ್ಲೆವು[2] ಬಂದು ಮಾಡುವುದೇನು ಹೇಳೆಂದ ॥೪೩॥

ದೇವಮಾತ್ರವೆ ನೀವು ದೇವರ
ದೇವರೊಡೆಯರು ಹೊಗಳುವೊಡೆ ವೇ
ದಾವಳಿಗಳಳವಲ್ಲ ಸಾಕಾವಮಾತದಂತಿರಲಿ।
ನಾವು ಭಕ್ತ[3]ರು[3] (ಭಕ್ತಭೃತ್ಯರು )
ನೀವು (ಸಾರಥಿಯಾಗಿ)[4]ನಮ್ಮನು[4]
ಕಾವುದೆಂ[5]ದರ್ಜುನನು (ಹಣೆಚಾಚಿದನು ಹರಿಪದಕೆ[5] ॥೪೪॥

ಎನಲು ನಗುತೆತ್ತಿದನು ಸಾರಥಿ
ತನವ ಕೈಕೊಂ[6]ಡನು[6] ಕೃಪಾಳುವಿ
ನನುನಯವ ನಾವೆತ್ತ ಬಲ್ಲೆವು [7]ಭೃತ್ಯವರ್ಗದಲಿ[7]।
ತನಗಹಂಕೃತಿಯಿಲ್ಲ ವೈರೋ
ಚನಿಯ ಪಡಿಹಾಱಿಕೆ ಕಿರೀಟಿಯು
ಮನೆಯ ಬಂಡಿಯ ಬೋವ[8]ತನವೆಲೆ ನೃಪತಿ ಕೇಳೆಂದ[8] ॥೪೫॥*

ಒಂದನೆಯ ಸಂಧಿ ಮುಗಿದುದು

---

[1] ಕುಳ್ಳಿ(ಖ ಗ ಣ ಬ) [2] ನಮ್ಮಲ್ಲಿ ಸಲ್ಲದು ನಾವು ಬಾರೆವು(ಕ ಮ ) ನಮಗಿಲ್ಲವೆಂಬುದ ನಾವು ಬಲ್ಲೆವು (ಗ ಚ ಜ ಪ ಯ), ನಮ್ಮಲ್ಲಿ ಲವವಿಲ್ಲಾವು ಬಲ್ಲೆವು (ಣ ಬ ರ) [3] ರ (ಕ ಚ ಬ ಮ) [4] ಭೃತ್ಯರ (ಗಾ ಜ), [5] ದೆಱಗಿದನು ಫಲುಗುಣ ಹರಿಯ ಚರಣದಲಿ (ಗ) [6] ಡೆನು (ಕ ಚ ರ ಮ) [7] ನೃಪತಿಮಾರ್ಗದಲ (ಕ ಮ) [8] ನಾದನು ವೀರನಾರಯಣ (ಖ ಚ ಟ ದ), ನಾದನು ಭೂಪ ಕೇಳೆಂದ (ಬ)

*(ಜ ಯ ಪ ) ಪ್ರತಿಗಳಲ್ಲಿ ಮುಂದಿನ ಪದ್ಯವಾದಮೇಲೆ ಸಂಧಿಯು ಮುಗಿದಿದೆ —

ಫಲುಗುಣನು ಹರುಷದಲಿ ಹೆಚ್ಚಿಯೆ
ಬಲವಡೆದು ನಲಿನಲಿದು ಮನದಲಿ
ಛಲಮಿಗಿಲು ಕೌರವನ ಗೆಲದಹೆನೆಂಬ ಹರುಷದಲ ।

---

ತಳಿತು ಪುಳಕದ ಗುಡಿ ನೆಗೆಯೆ ಕಂ
ಗಳಲಿ ಸುರಿವಾನಂದಜಲದಲ
ಚಳೆಯ ಮಿಗಿಲೆಂದಪ್ಪಿ ಹರಸಿದ ವೀರನಾರಯಣ ||

ಎಂದು ಮುರರಿಪುವರ್ಜುನನ ನಲ
ವಿಂದಲಾರೋಗಣೆಯ ಮಾಡಿ[ಸಿ]
[ಯಂದು] ಬೇಗದಲಿ ಹೊಱವಂಟನು ದ್ವಾರಕಾಪುರಿಯ |
ಮುಂದೆ ದೂತರು ಬೇಗದಿಂದೈ
ತಂದು ಧರ್ಮಜನೊಡನೆ ಹರಿ[ತಾ]
ಬಂದನೆಂಬುದನು[ಸುರಿದರು] ಜನಮೇಜಯಕ್ಷಿತಿಪ ||

(ಗ) ಪ್ರತಿಯಲ್ಲಿ ೪೫ನೇ ಪದ್ಯದ ಮುಂದೆ ಈ ಹೆಚ್ಚಿನ ಪದ್ಯವಿದೆ.

---

# ಎರಡನೆಯ ಸಂಧಿ

---

ಸೂಚನೆ॥ ಬಂದು ಕಂಡನು ಸಂಜಯನು ಯಮ
ನಂದನನನಲ್ಲಿಂದ ಮರಳಿದು
ಬಂದು ಕೌರವನೃಪತಿಗಱುಹಿದನವರ ಮಾತುಗಳ ॥

ಎಲೆ ಪರೀಕ್ಷಿತತನಯ ಕೇಳು
ಮ್ಮೆಳಿಸಿದನು ಯಮಸೂನು ಮುರರಿಪು
ಫಲುಗುಣಗೆ [1]ಮೈ[1]ಗೊಡುವನೋ ಕೌರವನಿಗೊಳಗಹನೊ ।
ತಿಳಿಯಲರಿದೆನುತಿರಲು ಬಲಗ
ಣ್ಣಲುಗಿತಿದಿರಲಿ ಕೈಯಗುಡಿಯಲಿ
ಸುಳಿದನೊಬ್ಬನು [2]ಬಹಳ[2]ಮಾರ್ಗಶ್ರಮದ ಭಾರದಲಿ ॥೧॥

ಇದಿರುಗೊಳ್ಳೇಳರಸ ನಡೆ ಕಟ
ಕದಲಿ ಕಟ್ಟಿಸು ಗುಡಿಯನಹಿತರ
ಸದದೆ ಹೋಗಿನ್ನೇನು ಸರಿಯೇ ನಿನಗೆ ಸುರಗಿರರು ।
ಪದವನಱಿಸಿದಡಾಳಿಗೊಂ[3]ಬನು[3]
ಸದಮಳಶ್ರುತಿ[4]ತ[4]ತಿಯನೆಂಬ
ಗ್ಗದ ಮಹಾಪರದೈವ ಬಿಜಯಂಗೈ[5]ದನಿದೆಯೆಂದ[5] ॥೨॥

[6]ಕಥೆಯೆ[6] ನಿನ್ನೊಡಹುಟ್ಟಿದನ ಸಾ
ರಥಿತನವ ಕೈಕೊಂಡನಿನ್ನೀ
ಪೃಥಿವಿ ನಿನ್ನಯ ರಾಣಿವಾಸವು ಚಿಂತೆ ಬೇಡಿದಕೆ ।
ವ್ಯಥಿತವಾಯಿತು ವೈರಿಬಲ [7]ಸಂ[7]
ಪ್ರಥಿತಸಾಹ[8]ಸಿಯಾ[8]ದೆ ನೀನೆನೆ
ಶಿಥಿಲಸಂಶಯನಂಗಚಿತ್ತವನಿತ್ತನಾತಂಗೆ ॥೩॥

---

[1] ಕೈ (ಕ ಖ ಬ) [2] ದೂತ (ಯ) [3] ಡನು (ಗಾ) [4] ಮ (ಕ ಮ)
[5] ದ.ದಿದೆಯೆಂದ (ಕ ಮ), ದನೇಳೆಂದ (ಗಾ) [6] ಕಥೆಯು (ಕ ಖ ಝ ರ ಮ),
ಕಥೆಗೆ (ತ), ಪತಿಯೆ (ಯ ರ) [7] ಸು (ಖ ಗ ದ ಪ) [8] ಸನಾ (ಖ ಗಾ ಚ ರ)

ಉಕ್ಕಿ ವಿಸಟಂಬರಿವ ಹರುಷದ
ತೆಕ್ಕೆಯಲಿ ಕೈಗೊಡುವ ನೃಪ[1]ತಿಗ
ಳಿಕ್ಕೆಲದಿ[1] ಹೊಱವಂಟನರಸನು ಸಕಲದಳಸಹಿತ ।
ಮಿಕ್ಕು ಬರೆ ಬರೆ ಕೃಷ್ಣನನು ಕಂ
ಡೊಕ್ಕನೊಡಲನು ಚರಣದಲಿ ಸಾ
[2]ಕಕ್ಕಜ[2]ವಿದೇಕೆನುತ [3]ಹರಿ ನೆಗಹಿ[3]ದನು ಧರ್ಮಜನ ॥೪॥

ಪರಕೆ ಪರತರವಸ್ತುವನು ಗೋ
ಚರಿಸಿದೆವಲೈ ಮುನಿಜನಂಗಳ
ವರಸಮಾಧಿಗೆ ಸಮಯವಿಲ್ಲದ ದೇವ [4]ನಮಗೊಲಿದೈ[4] ।
ಕರುಣಿ ಬಿಜಯಂಗೈ[5]ದೆಯೆನೆ[5] ಮುರ
ಹರನು ನಗುತಿಂತೆಂದ ನಾವೀ
ನರನ ಸಾರಥಿಯಲ್ಲದೆಲ್ಲಿಯು ವಸ್ತು [6]ಹೇಳೆಂದ[6] ॥೫॥

ಬ್ಬಯಲಿಗೆಮ್ಮನು ನಾಚಿಸದೆ ಪಾ
ಳಿಯಕೆ ನಡೆಯೆಂದಸುರರಿಪು ಸೇ
ನೆಯನು ಕೈವೀಸಿದನು ಬಂದನು ರಾಜಮಂದಿರಕೆ ।
ನಿಯತವಿತ್ತಲು ಕೇಳು ಜನಮೇ
ಜಯಮಹೀಪತಿ ಧರ್ಮಸುತನೋ
ಲೆಯ ಹದನನಱದಂತೆ ಶಲ್ಯನೃಪಾಲ [7]ಹೊಱವಂಟ[7] ॥೬॥

ಮೇಳವಿಸಿ ಹೊಱವಂಟನಗಣಿತ
ದಾಳುಕುದುರೆಯ ಕೂಡಿ ಬರುತಿರೆ
ಕೇಳಿದನು ಕುರುರಾಯನಾ ಮದ್ರಾಧಿಪನ ಬರವ ।
ಆಳೊಳಗ್ಗಳನದಟಶಲ್ಯನೃ
ಪಾಲ[8]ಕನ[8] ತಿರುಹಿದರೆ ಗೆಲುವುದು
ಕಾಳೆಗವು [9]ತನ[9]ಗೆಂದು ನಿಶ್ಚೈಸಿದನು [10]ಮನದೊಳಗೆ[10] ॥೭॥

---

[1] ತಿಗಳಿಕ್ಕಲಿಸೆ (ಖ ಚ ರ ಬ), ಜನವಿಕ್ಕಲಿಸೆ (ಗ ಟ ಡ ದ ಪ ಯ) [2] ರಕ್ಕಜ (ಕ ಮ) [3] ತೆಗದಪ್ಪಿ (ಗ) [4] ವೆಮಗಾದ್ಯೆ (ಣ ಬ ರ) [5] ವುದೆನೆ (ಕ ಮ), ದಿರೆನೆ (ಜ ಪ) [6] ತಾನೆಂದ (ಕ ಖ ಚ ರ ಪ ಮ) [7] ನೈತಂದ (ಚ ಣ ಬ) [8] ನನು (ಗ) [9] ನಮ (ಖ ಚ ಟ ದ ಬ) [10] ಚಿತ್ತದಲಿ (ಗ ಚ ಜ ಡ, ರ) ಮಂತ್ರದಲಿ (ಬ ರ), ನಿಜಮತವ (ಯ)

[1]ಎಂದ[1]ಖಿಳವಸ್ತು[2]ಗಳ ಜೋ[2]ಡಿಸಿ
[3]ಮುಂದೆ[3] ಪಾಳೆಯ ಬಿಡುವ ರಾವಿನೊ
ಳಂ[4]ದು[4] ಮಿಗೆ ಮಾಡಿಸಿದ ಗುಡಿಮಂಡವಿಗೆಚೌಕಿಗೆಯ ।
ಒಂದುಯೋಜನದಗಲದಲಿ ಹಯ
ವೃಂದ ಗಜಶಾಲೆ[5]ಗಳ ಪರುರವ
ದಿಂದ ರಚಿಸಿದ ಕೂಳು[5]*ಖಾ*ಣವನಖಿಳವೋಹರಕೆ ॥೮॥

ಬಂದು ಬಿಡುವನ್ನೆಬರ ಮುನ್ನಿನ
ಮಂದಿರವ ಹೊಗುವಂತೆ ಶಲ್ಯನ
ಮಂದಿ ಸಂತೋಷದ [6]ಸಮುದ್ರದಿ ಮೂಡಿ ಮುಳುಗಾಡಿ[6] ।
ಮುಂದೆ ನಡೆಯಲು ಮತ್ತೆ ಮುನ್ನಿನ
ಚಂದದಲಿ ಮನೆಮನೆಗಳ[7]ನು ಮುದ
ದಿಂ[7]ದಿರಲು ರಚಿಸಿದನು [8]ಕುರುಪತಿ ಪಯಣ[8]ಪಯಣದಲಿ ॥೯॥

ಆರು ನಯದಲಿ ನಮ್ಮ ಖಿಳಡಳ
ಭಾರವನು ಸಂತೈಸಿದವ ಕುರು
ವೀರನೋ ಯಮನಂದನನೊ [9]ಹಿರಿದಾಗಿ[9] ಮೆಚ್ಚಿದೆನು ।
ಆರು ಮಾಡಿ[10]ದರ[10]ವರು ಬಂದರೆ
ಹಾರ[11]ಲೇಕೆನ್ನೊಡಲ ತೆಱು[11]ವೆನು
ಧೀರ ಮೈದೋ[12]ಱಲಿಯೆ[12]ನುತ ಹೊಯ್ಸಿದನು ಡಂಗುರವ ॥೧೦॥

ನಗುತ ಕೌರವರಾಯನವನೋ
ಲಗಕೆ ಬರಲಿದಿರೆದ್ದು ಮುದದಲಿ
ತೆಗೆದು ಬಿಗಿಯಪ್ಪಿದನು ಕುಶಲವನ್ನೆದೆ [13]ಬೆಸಗೊಂಡ[13] ।
ಮಗನೆ ನೀನೇ ರಚಿಸಿದಾತನು
ಬಗೆ ದಣಿಯೆ[14]ನೀ ಬೇಡು[14]ತಾ ಹಂ
ಗಿಗನು ನಿನಗೆನೆ ಮಾವ ಬಿನ್ನಹ ಮರಳಿ ನೀವೆಂದ ॥೧೧॥

---

[1] ಅಂದ (ರ) [2] ವನು ಜೋ (ಟ ದ), ವನು ಹೊ (ಬ ರ) [3] ಮಂದಿ (ಖ), ಬಂದು (ಗ ಚ ಟ ಪ ಯ) [4] ದ (ಣ ರ) [5] ಯನು ಕೌರವನಂದು ಪರುರವಿಸಿದನು (ಣ, ರ) * ಬಾ (ಗ ಮ), ರಾ (ಜ) [6] ಸಮುದ್ರದ ಮೂಡಿ ಮುಳುಗಾಡೆ (ಕ ಮ), ಲ ಹೊಕ್ಕುದು ನಿಳಯವನು ಬಳಿಕ (ಯ) [7] ಲಿ ಮುದದಿಂ (ಕ ಮ), ಲಿ ಸುಖದಿಂ (ಖ), ನು ನಲವಿಂ (ಗಾ ರ ನ) [8] ಕೌರವ ಹಲವು (ಚ ರ ಬ) [9] ಲೇಸಾಗಿ (ಗ), ಮಿಗಿಲಾಗಿ (ಟ ರ ದ ಪ ಯ) [10] ಸಿದ (ಗ ಡ ಣ ಪ ರ) [11] ದೆನ್ನನು ತೆಱುವೆಮಾಡಿದ (ಗ ಟ ಣ ಯ ರ) [12] ಱುವುದೆ (ಚ ರ ಬ) [13] ವಿಸ್ತರಿಸಿ (ಗಾ, ಚ) [14] ಬೇಡುವುದು (ಖ ಗಾ ರ)

ಎನಗೆ ಬೆಂಬಲವಾಗಿ ಕುಂತೀ
ತನಯರನು ಬಿಡಿ ಮರಳಿ ನೀವ್ ಹ
ಸ್ತಿನಪುರಕೆ [1]ನೀವಿತ್ತ[1]ವರವೆನೆ ಶಲ್ಯ ಮನವಳುಕಿ ।
ತನುಜ ಕೈಕೊಂಡೆನು ಯುಧಿಷ್ಠಿರ
ಜನಪನಳಿಯನು ನೀನು ಲೋಗನೆ
ಎನಗೆ ನೀವಿತ್ತಂಡ ಸರಿ ನಿಮ್ಮತ್ತ ಬಹೆನೆಂದ ॥೧೨॥

ಅಗಲಿದೆನು ಹಲಕಾಲವೈವರ
ಮೊಗವನೀಕ್ಷಿಸಿ ಮರಳುವೆನು ಬಂ
ಧುಗಳ ದರುಶನ ಫಲವಲಾ ಸಂಸಾರತರುವಿಂಗೆ ।
ಮಗನೆ ಸೇನೆಯ ಕೊಂಡು ವಾರಣ
ನಗರಿಗೈದುವುದೆಂದು ಭೂಪನ
ಮಗುಳಿಚಿದನಾ ಶಲ್ಯ ಬಂದನು ಪಾಂಡವರ [2]ಹೊರೆಗೆ[2] ॥೧೩॥

ಇದಿರುಗೊಂಡರು ಕಾಣಿಕೆಯನಿ
ಕ್ಕಿದ[3]ರು[3] ತೆಗೆದಪ್ಪಿದ[4]ರು[4] ಹಲಕಾ
ಲದಲಿ ಹೊಳಿದ ಹರುಷವನು [5]ಕೈಗಾಗುಮಾಡಿದರು[5]।
ಮುದದಿ[6]ನೆಲ್ಲರ[6] ಕುಶಲವನು ಕೇ
ಳಿದನು ದುರ್ಯೋಧನಗೆ ಸಿಲುಕಿದ
ಹದನನೆಲ್ಲವ ಹೇಳಿದನು [7]ನಿರ್ವಿಣ್ಣ[7]ಮನನಾಗಿ ॥೧೪॥

ಆದಡೇನೆಲೆ ಕಂದ ತಪ್ಪದು
ಮೇದಿನಿಯು ಸಿರಿ ನಿ[8]ಮ್ಮ[8]ಗೆ ಸತ್ಯವ
ಕಾದು ಹದಿಮೂಱುಬುದ [9]ನವೆದಿರಿ ಮುಂದೆ ಲೇಸಹುದು[9]।
ಕಾದಿ ವೃತ್ರಾಸುರನ ಮುಱಿದಪ
ವಾದದಲಿ ಸಿರಿ ಹೋಗಿ ದುಃಖಿತ
ನಾದನಿಂದ್ರನು ಮತ್ತೆ ಬದುಕಿದ ಶಚಿಯ ದೆಸೆಯಿಂದ ॥೧೫॥

ನಹುಷನನು ಕೆಡೆನೂಕಿ [10]ಋಷಿ[10]ಗಳ
ಮಹಿಮೆಯಲಿ ಸಾಮ್ರಾಜ್ಯದಲಿ ಸ
ನ್ನಿಹಿತನಾದನು ಮತ್ತೆ ದಿವಿಜರರಾಯ[11]ರೊಳಗಾಗಿ[11]।

---

[1] ನಮಗಿತ್ತ(ಕ ಮ), ತನಗಿತ್ತ (ಣ ರ) [2] ಮನೆಗೆ (ಜ) [3] ರೆ (ಚ ಟ, ರ ದ) [4] ನು (ಚ ಜ ಟ ಣ ಬ, ಯ) [5] ತೆಗೆದಾಗುಮಾಡಿದನು (ಚ ರ ಬ) [6] ನೈವರ (ಜ) [7] ನಿರ್ಭಿನ್ನ (ಖ ರ ಬ) [8] ನ (ಗ ಚ ರ ಪ ಬ) [9] ವನದಲಿ ಹಿಂದೆ ನವೆದಿರಲ (ಟ ದ ಯ) [10] ಮುನಿ (ಗ, ಡ ಣ ಪ). [11] ಮೊದಲಾಗಿ (ಗಾ).

ಕೇಳಿ ಬೀಡಾರವನು ಬೀಯುವ
ಹೇಳಿಸಿದನಾ ಮಱುದಿವಸವೊ
ಡ್ಡೋಲಗವ ರಚಿಸಿದನು ಕುಂತೀಸೂನು [1]ರೀವಿ[1]ಯಲಿ ॥೨೪॥

ಹರಿ ವಿರಾಟ ದ್ರುಪದ ಕೈಕೆಯ
ರಿರಲು ಬಲವಂಕದಲಿ ವಾಮದೊ
ಳಿರೆ ವೃಕೋದರಫಲುಗುಣಾದಿಗಳಖಿಳಮಂತ್ರಿಗಳು ।
ತರುಣಿಯರು ಪರಿಮಳದ ಜಂಗಮ
ಧರಣಿಯರು ಮನ್ಮಥವಿರಿಂಚನ
ತರುಣಿಯರು [2]ಕುಳ್ಳಿ[2]ರ್ದರರಸನ ಹಿಂದೆ ಸಂದಣಿಸಿ ॥೨೫॥

ಕರಣಿಕರು [3]ಮಂತ್ರಿಗಳು ವೈದ್ಯರು[3]
ಸರಸಕವಿಗಳು [4]ತಾರ್ಕಿಕರು ವರ
ಭರತ[4]ನಿಪುಣರು ಗಾಯಕರು ಪಾಠಕರು ವಾದಿಗಳು ।
ಕರಿತುರಗ[5]ಶಿ[5]ಕ್ಷಕರು ಲಕ್ಷಣ
ಪರಿಣತರು [6]ಕೋವಿದರು[6] ಸಾವಂ
ತರುಗಳುಪಹಾಸಕರು [7]ವೈತಾಳಿಕರು ರಂಜಿಸಿತು[7] ॥೨೬॥

ಮಾವತರು ಚಿತ್ರಿಗರು ಮಲ್ಲರು
ರಾವುತರು ಶಿಲ್ಪಿಗರು ಮಾಯಾ
ಕೋವಿದರು ಕರ್ಣಾಂಘ್ರಿವಿಕಳರು ಮೂಕವಾಮನರು ।
ದ್ರಾವಕರು ಜೂಜಾಳಿಗಳು [8]ವರ
ದಾವಣಿಯರು ವಿದೇಶಿಗಳು ಮೃಗ[8]
ಜೀವಿಗಳು ಶಕುನಜ್ಞರೆಸೆದರು ರಾಜಸಭೆಯೊಳಗೆ ॥೨೭॥

ಸಾಲಮುಕುಟದ [9]ರತ್ನ[9]ರಶ್ಮಿಯ
ಧಾಳಿ [10]ಕೊಂಡುದು[10] ತಮವನಿನ್ನೀ
ಮೇ[11]ಲು[11]ತೆಕ್ಕೆಯ [12]ಕಿತ್ತ ಒಡ್ಡಗೆ[12] ಪ್ರಭೆಯ ಹಂಗೇಕ ।

---

[1]ವಾದಿ (ಗ ದ), ಪ್ರೀತಿ (ಜ) [2] ನಿಂದಿ (ಯ) [3] ಮಾಂತ್ರಿಕರು ವೈದ್ಯರು (ರ), ಮಂತ್ರಿಗಳು ವೃದ್ಧರು(ತ) [4] ತರ್ಕಿಗಳು ಮುಕ್ತಾಭರಣ (ಕ ರ ಮ), ಕೀರ್ತಿಗಳ ನೃಪಚರಿತ (ತ) [5] ರ (ಕ ಮ) [6] ಮಾಂತ್ರಿಕರು (ಗ ಟ ಡ ಪ ಬ) [7] ರಂಜಿಸಿತು ಸಭೆಯೊಳಗೆ(ಕ ಝ ರ ಮ) [8] ಪರಿದಾವಣಿಗರು ವಿದೇಶಿಗಳು ಮೃಗ(ಗ ಝ ಡ ಪ), ಬಿರುದಾವಳಿಯ ವಂದಿಗಳು ಖಗ (ಣ ರ) [9] ಮಣಿಯ (ರ ತ) [10]ಗೆಲಿದುದು (ಗಾ.ಟ). [11] ರೆ (ಕ ಮ). [12] ತರಣಿತೇಜದ (ಗಾ ತ)

ಮೇಲೆ ಕೈದೀವಿಗೆಗಳಧಿಕ
ಜ್ವಾಲೆಯುದು ಪುನರುಕ್ತವೆನೆ ಭೂ
ಪಾಲನೋಲಗವೆಸೆ[1]ದು[1]ದಿಂದ್ರನ ಸಭೆಗೆ ವೆಗ್ಗಳಿಸಿ ‖೨೮‖

ಕಳಕಳವೆ ಘಡ ಮಾಣುಮಾಣೆಂ
ದುಲಿಯೆ ಕಂಚುಕಿನಿಕರವಂಗೈ
ತಳದ ಬಾಯಲಿ ರಾಯರಿ[2]ದ್ದುದು[2] ಮಣಿ[3]ದ[3] ಮಕುಟದಲಿ ।
ನಳಿನನಾಭನು ನಗುತ ಪರಮಂ
ಡಲದ ಶಿಷ್ಟ[4]ನು ಬರಲಿಯೆನೆ[4] ಬಾ
ಗಿಲಲಿ ಕೈದುವ ಕೊಂಡು ಹೊಗಿಸಿದರಂದು ಸಂಜಯನ ‖೨೯‖

ಬಂದು ಕಾಣಿಕೆಗೊಟ್ಟು [5]ಹರುಷದೊ
ಳಂದು[5] ಮೆಯ್ಯಿಕ್ಕಿದನು ಭಯದಲಿ
ನಿಂದು ನೋಡಿದನೆಡ[6]ದ ಬಲದ ಮಹಾಮಹೀಶ್ವರರ[6] ।
ಸಂದ ಯಮನೋ ನಿರುತಿಯೋ ಪು
ರಂದರನೊ ಪಾವಕನೊ ವರುಣನೊ
ಮಂದಿಯಿದು [7]ಮಾನುಷ್ಯರೇ[7] ಹಾ ಎನುತ ಬೆಱಗಾದ ‖೩೦‖

ಸುಳಿದಲೆಯ ಕೆಮ್ಮೀಸೆಗಳ ಮಿಗೆ
ಬಳೆದ ಮುಡುಹುಗಳೊ[8]ಡ್ಡಿ[8]ದುರದು
ಚ್ಚಳಿಪ ರೋಮದ ನೊಸಲ ಡೋರಿಯ ತಲೆಯ ಕಲಿಮುಖದ ।
ಬಲಿದ ಹುಬ್ಬಿನ [9]ತೋರತೋಳಿನ[9]
ಹೊಳೆವ[10]ಡಾಯ್ದ ಧ[10] ಹೆಗಲ ಹೊಗರಿನ
ಕಲಿಮನದ ಕದನಪ್ರಚಂಡರ ಕಂಡು ಬೆಱಗಾದ ‖೩೧‖

ಹಳುವದಲಿ ಹನ್ನೆರಡು ವರುಷವು
ತೊಳಲಿದರು ಸಿರಿ ಹೋಗಿ ನಿಮಿಷಕೆ
ನೆಲನ ರಾಯರು ನೆರೆದು ಜೀಯೆನುತಿದೆ ಮಹಾದೇವ ।

---

[1] ಯ (ಕ ಜ ಮ) [2] ದ್ದರು (ಗಾ ಚ ಬ) [3] ಯ (ಕ ಖ ಗ ಝ ರ ಬ ಮ) [4] ನ ಕರೆಯೆನಲು (ಜ ಟ ದ ಯ) [5] ಸಂಜಯನಂದು (ರ ತ) [6] ಬಲದ ಮಂಡಳಿಕ ಮನ್ನೆಯರ (ಗಾ ಚ), ಬಲದಲಹ ಮಂಡಲೇಶ್ವರರ (ತ) [7] ತಾ ಮರ್ತ್ಯರೇ (ಗ ಚ ಜ ಡ ಯ) [8] ಟ್ಟಿ (ಕ ಖ ಗ ಚ ಟ ಣ ಪ ಬ ಮ ಯ) [9] ಬಿಟ್ಟಕಂಗಳ (ಗಾ ಚ) [10] ದಾಡೆಯ (ತ)

ನಳಿನನಾಭನ ಕರುಣದಳತೆಗೆ
[1]ನಿ[1]ಲುಕದಿಹುದೇನುಂಟು ಮುರರಿಪು
ಮುಳಿದಡಾವನು [2]ಮುಱಿಯ[3]ನೆಂದನು ತನ್ನ ಮನದೊಳಗೆ ||೩೨||

ಇಳುಹಿದನು ಹೊರೆಯಲಿ ಮಹೀಪತಿ
ಕಳುಹಿದುಡುಗೊಱೆಗಳನು ಭೂಪತಿ
ತಿಲಕ ಧರ್ಮಜನೊಪ್ಪುಗೊಂಡನು ನೃಪನ ಪಾವುಡವ।
ಒಲವು ಬೊಪ್ಪನಲುಂಟಲಾ ಮ
ಕ್ಕಳನು ಮಱೆಯನು ಲೇಸು ಸಂಜಯ
ತಿಳುಹು ತಾತನ ಕುಶಲವನು ಗಾಂಧಾರಿ[3]ದೇವಿ[3]ಯರ ||೩೩||

ಗುರು ಪಿತಾಮಹ ಗೌತಮರ ಸ
ಚ್ಚರಣಕಮಲಂಗಳಿಗೆ ಕುಶಲವೆ
ಗುರುಸುತನು ಸುಕ್ಷೇಮಿಯೇ ಕುರುರಾಯನಿರವೆಂತು।
ಕುರುಪತಿಯ ಸೋದರರು ಮಕ್ಕಳು
ಸರಸಿಜಾನನೆ ಭಾನುಮತಿ ಮಿ
ಕ್ಕರಸಿಯರು ಕರ್ಣಾದಿಗ[4]ಳಯಿರವೆಂತು[4] ಹೇಳೆಂದ ||೩೪||

ಸುಖಿಗಳನಿಬರು ಜೀಯ ನಿಮ್ಮಯ
ನಿಖಿಳಬಾಂಧವರನು ಸಹೋದರ
[5]ಸಖ[5]ಸುತಾದಿಗಳನು ಪುರೋಹಿತ ಪೌರ ಪರಿಜನವ।
ಮುಖ[6]ಸಮುದ್ಭವೆ[6]ಮೊದಲು ಪಂಕಜ
ಮುಖಿಯರನು ಬೆಸಗೊಂಡು ಕಳುಹಿದ
ರಖಿಳ[7]ಕುರು[7]ನಂದನರು ಭೀಷ್ಮದ್ರೋಣಗೌತಮರು ||೩೫||

ಮುನ್ನ ಭೀಷ್ಮ ದ್ರೋಣ ಗೌತಮ
ರುನ್ನತದ ಕಾರುಣ್ಯದಲಿ ಸಂ
ಪನ್ನಸಾಹಸರಾದೆವಾಚರಿಸಿದೆವು [8]ಧರ್ಮವನು[8] ।
ಇನ್ನು ಧೃತರಾಷ್ಟ್ರಾವನೀಶ[9]ನು[9]
ತನ್ನ ಮಕ್ಕಳ ಬಾಂಧವಪ್ರತಿ
ಪನ್ನತೆಯ ನೆಱೆ ಕಾ[10]ಬನೆಂ[10]ದನು ಧರ್ಮ[11]ಸುತ ನಗುತ[11] ||೩೬||

---

[1] ಸಿ (ಗ ಚ ಡ ಬ ಮ) [2] ಉಳಿವ (ಮ) [3] ಮಾತೆ (ರ) [4] ಳು ನಿರ್ವೃತರೆ (ಗ ಝ ಡ ತ ಪ)ಳು ಕುಶಲಿಗಳೆ (ಚ) ಳು ವಿಶ್ರುತರೆ (ಟ ದ ಬ ಯ) [5] ಸಖಿ (ಗ ಟ ಡ ಣ) [6]ಸುಸಂಭವೆ (ಕ ಖ ರ ಬ ಮ) [7] ಗುರು (ಕ ಗಾ ಮ) [8] ಸತ್ಯವನು (ಕ ಮ) [9]ನ (ಗ ಡ ಣ ಪ ರ). [10]ಬೆಪೆಂ (ಕ ಗ ದ ಪ ಮ) [11]ನಂದನನು (ಚ ಟ ದ ಬ ಯ)

ಏನು ಬಂದ್ಯೆ ಹದನು [1]ಕೌರವ
ರೇನನೆಂದರು ಕುರುಕುಲೇಶ್ವರ[1]
ನೇನನೆಕ್ಕಟಿ[2]ಬುದ್ಧಿಗಲಿಸಿದನವರ ಮಾತುಗಳ[2] ।
ಏನುವನು ನೀನುಳುಹದಿರು ವಿನ
ಯಾನು[3]ಗ[3]ತವಾಗಿರಲಿ ಮೇಣ್ ಶೌ
ರ್ಯಾನು[3]ಗ[3]ತವಾಗಿರಲಿ ಬಿನ್ನೈಸೆಂದನಸುರಾರಿ ॥೩೭॥

ನಾಡ ಬಯಸುವರೆಮ್ಮೊಡನೆ ಹೊ
ಯ್ದಾಡುವುದು ಸಂಪ್ರತಿಗೆ ಚಿತ್ತವ
ಮಾಡಲಾಗದು ಸಂಧಿ ವೀರಕ್ಷತ್ರಿಯರ ಮತವೆ ।
ಬೇಡುವ[4]ರು[4] ಪಾರ್ಥಿವ[5]ರೆ[5] ನಾವದ
ನಾಡಬಾರದು ತಮ್ಮ ಜನನವ
ನೋಡಿ [6]ನುಡಿಯಲ[6] ಪಾಂಡುಸುತರಲ್ಲೆಂದು ಹೇಳೆಂದ ॥೩೮॥

ಮೊದಲಲಮಳಬ್ರಹ್ಮಚರ್ಯವು
ಮದುವೆಯಾಯಿತು ಬಳಿಕ ವನವಾ
ಸದಲಿ ವಾನಪ್ರಸ್ಥವೆಂಬಾಶ್ರಮವನಳವಡಿಸಿ ।
ತುದಿಗೆ ತಾ ಸನ್ಯಾಸವನು ಮಾ
ಡಿದನು ಮಗುಳಳು[7]ಪಿದರೆ[7] ರಾಜ್ಯದ
ಪದವಿ[8]ಯು[8]ನುಚಿತವಾಯ್ತು ಯಮಜಂಗೆಂದು ಹೇಳೆಂದ ॥೩೯॥

ತಳಿತ ಜವ್ವನ[9]ದು[9]ಬ್ಬುಗಳ ಕಳ
ವಳಿಗರರ್ಜುನ ಭೀಮರೆಂಬವ
ರೊಳಗೆ ವೈರವ ಬಿತ್ತಿ [10]ಬೆಳಸುವ[10] ಕೃಷ್ಣ ಹಗೆ ತನಗೆ ।
ಉಳಿದ ದ್ರುಪದವಿರಾಟರೆಂಬೀ
ಹುಳು[11]ಗಳವರಂ[11]ತೋರೆಗೆಡ[12]ವರು[12]
ತಿಳಿಯೆ ತಾನೇ ಕಡೆಗೆ [13]ಕೆಡದಿರ[13]ನೆಂದು ಹೇಳೆಂದ ॥೪೦॥

---

[1] ಕೌರವನೇನನೆಂದನು ಅವನಿಪಾಲಕ (ಗ ಝ ಡ ಪ.ಯ ರ), ಕಾರಿಯ ವೇನನೆಂದನು ಕೌರವೇಶ್ವರ (ಟ ದ ಬ) [2] ಗರೆದು ಬುದ್ಧಿಯಗಲಿಸಿ ಕಳುಹಿದನು (ಗ) ಬುದ್ಧಿಗಲಿಸಿದನಿವರ ಕಾರಿಯವ (ಚ ಝ ರ ಡ ಣ ಪ ಯ) [3] ಮ (ಕ ಮ) [4] ರೆ (ಕ ಖ ಗ ಚ ಬ ಮ) [5] ರು (ಖ ಗ ಟ ಣ ಪ ಬ) [6] ನುಡಿಯರು (ಕ ಟ ಬ ಮ), ನುಡಿವುದು (ಖ), ನಡೆಯರು (ಗ ಣ ಯ), ನಡೆಯುಲ (ಚ ರ) ನಡೆಯರು (ಗ ಣ ಯ) ನುಡಿಯರು (ಕ ಟ ಬ ಮ) ನುಡಿವುದು (ಖ) [7] ಪುವರೆ (ಗ ಚ ಟ ಯ ರ) [8] ಗ (ಕ,ಮ) [9] ಗೊ (ಖ,ಟ ರ ಬ ರ) [10] ಸುಡುವನು (ಕ ಮ) [11] ಗಳೊಲದಂ (ಖ ರ) ಕರೊಲದಂ (ಗಾ ಚ) [12] ದಳೆ (ಟ ದ ಯ) [13] ಕೆಡುವವ (ತ)

ಸಾಕು ಕೌರವನಾಯ ಮಾತನ
ದೇಕೆ ಚಿತ್ತೈಸುವಿರಿ ದೂತನ
ನೂಕು ನೂಕು ಕುರಾರದುರ್ಯೋಧನನನೊಡೆಹೊಯ್ದು ।
ಶಾಕಿನಿಯರಿಗೆ ರಕುತ[1]ವಾರಿಯ
ಲೋ[1]ಕುಳಿಯನಾಡಿಸುವೆ ನಿಲು ತಡ
ವೇಕೆನುತ ಘುಡುಘುಡಿಸಿ ಕಿಡಿಕಿಡಿಯಾದನಾ ಭೀಮ ॥೪೧॥

ಬೆಸಸುವುದು ಹಿಂದಾದ ಜೂಜಿನೊ
ಳೆಸೆದ ಜಾಡ್ಯವೆ ಸಾಕು ಧರ್ಮದ
ದೆಸೆಗೆ [2]ನೀ[2]ವಿನ್ನುತ್ತರಾಯಿ ಸುಯೋಧನನ [3]ಕುಲವ[3] ।
ದೆಸೆದೆಸೆಯ ದೈವಂಗಳಿಗೆ [4]ಪಸ
ರಿಸುವೆವೆಮ್ಮನು ಕಳುಹೆ[4]ನುತ ಗ
ರ್ಜಿಸಿದರಂದಭಿಮನ್ಯು ಸಾತ್ಯಕಿ ಭೀಮನಂದನರು ॥೪೨॥

ಕದಡಿತಾಯಾಸ್ಥಾನ ಕಲ್ಪಾಂ
ತದ ಮಹಾ[5]ಸಿಡಿಲಂತೆ[5] ವೀರರು
ಕೆದರಿ ತಮತಮಗೆದ್ದು ನುಡಿದರು ಕಂಡೆಯವ ಜಡಿದು ।
ಉದುರಹೊಯ್ವೆವು ಹಲ್ಲುಗಳ ಕಿ
ಬ್ಬದಿಯಲುಗಿವೆವು ಕರುಳನಹಿತರ
ತಿದಿಯ ಸುಲಿವೆವು [6]ಬೆಸಸು[6] ನೇಮವನೆಂದರತಿ[7]ರಥರು[7] ॥೪೩॥

[8]ಆ[8]ತನಿಂದೇನಹುದು ಲೇಸಾಗ
[9]ಳಾ[9]ತನಿಂ[10]ದೇನಹುದು[10] ಹೊಲ್ಲೆಹ
ವಾತನಿಂ[11]ದೇ[11] ಬರಲಿ ಹಿಂದಣ ಕಾನನಾಲಯ[12]ವು[12] ।
[13]ಯಾತನೆಯ ಸೈರಿಸಿದ ನಮಗಿ[13]
[14]ನ್ನಾತ[14] ನುಡಿದಡೆ ಹಾನಿಯೇ [15]ನೀವ್[15]
ಕಾತರಿಸ[16]ದಿರಿಯೆಂದು[16] ಸಂತೈಸಿದನು ಯಮಸೂನು ॥೪೪॥

---

1 ವಾರಿಧಿಯೋ (ಕ ಖ ಮ), ಧಾರೆಯೊಳೋ (ಗ ರ) 2 ನಾ (ಕ ಮ) 3 ಕಡಿದು (ಗ ಜ ಟ ಪ ಯ) 4 ಸರಿಹಸುಗೆಗೆಮ್ಮನು ಬೆಸಸೆ (ಕ ಮ) 5 ಧ್ವನಿಯಂತೆ (ಕ ಖ ರ ಪ ಮ) 6 ಬಿಸುಡು (ಗ ಚ ಟ ಡ ಪ) 7 ಬಲರು (ಗಾ ಚ) 8 ಈ (ಗ ಚ ಜ ಟ ಪ) 9 ಳೀ (ಗ ಜ ಟ ಡ ಪ) 10 ದಲ ಸುಟ್ಟು (ಕ ಖ ಮ) ದವೆ ಬರಲಿ (ಣ ರ) 11 ದವೆ (ಗಾ) 12 ದ (ಕ ಖ), ವ (ರ ಬ ಮ) 13 ಆತನೇ ಸೈರಿಸಿದ ನಮಗಿಂ (ಗಾ), ಆತನಿಂದತಿಹಿತವರಾರಿ (ಣ ರ) ಆತನೇ ಸೇರಿಸಿದ ನಮಗಿ (ಬ) 14 ದೀತ (ಗಾ) 15 ನಿಲ (ಕ ಮ) 16 ಬೇಡೆಂದು (ಕ ಮ), ರೇಕೆಂದು (ಣ ರ).

ಕಳುಹಿದನು ಬೀಡಾರಕವನಿಪ
ತಿಲಕನಾ ಸಂಜಯುನನಲ್ಲಿಂ
ಬಳಿಕ ಮಱುದಿನ ಕೃಷ್ಣಪಾರ್ಥರು ಕರಸಿ ಸಂಜಯುನ।
ಬಲುಹು ಮೆಲು[1]ಹಿನ ನುಡಿಗಳಿಂದವೆ[1]
ತಿಳುಹಿದರು ಮಱುದಿವಸ[2]ವೋ[2]ಲಗ
ದೊಳಗೆ ದೂತನ ಕರಸಿ ಬೀಳ್ಕೊಟ್ಟನು ಯುಧಿಷ್ಠಿರನು ॥೪೫॥

ಜನ[3]ಕ[3]ನನು ಗಾಂಧಾರಿ ದುರ್ಯೋ
ಧನನನವ[4]ನೊಡವು[4]ಟ್ಟಿದರನಂ
ಗನೆಯುರನು ದುಶ್ಶಳೆಯು ಸೈಂಧವ ಕರ್ಣಶಕುನಿಗಳ।
ವಿನುತಬಾಹ್ಲಿಕ ಶಲ್ಯ ಭಗದ
ತ್ತನ ನದೀಸುತ [5]ಗುರುಕೃಪರ[5] ಗುರು
ತನು[6]ಜನನು ಮನ್ನಿಸಿದೆವುಚಿತದಲೆಂದು[6] ಹೇಳೆಂದ ॥೪೬॥

ವರಪುರೋಹಿತರನು ಸುಸಾವಂ
ತರನು ವೈದ್ಯರನವುಳವಿದುರನ
ನರಮನೆಯ ವಿಶ್ವಾಸಿಗಳನೋಲಗದ ಗಣಿಕೆಯುರ।
ಕರಿಹಯಾಧ್ಯಕ್ಷರನು ಪಡಿಹಾ
ಱರನು ಬಾಹತ್ತರ ನಿಯೋಗದ
ಪರಿಜನರ ಪುರಜನರ ಕುಶಲವ ಕೇಳ್ದೆ[7]ವಾವೆಂದ[7] ॥೪೭॥

ಹೊನ್ನಿನಲಿ ಮಧುರೋಕ್ತಿಯಲಿ [8]ವಿವಿ
ಧಾ[8]ನ್ನವುಡುಗೊಱೆಗಳಲಿ ಶಿಷ್ಟನ
ಮನ್ನಿಸಿದನವನೀಶನುಚಿತದಲವನ ಬೀಳ್ಕೊಟ್ಟ।
ಪನ್ನಗನ ಸಿರಿಮಂಚದಾತನು
ಬೆನ್ನಲಿರುತಿರೆ ಪಾಂಡು[9]ತನಯುರಿ[9]
ಗಿನ್ನು [10]ಮಂ[10]ಗಳವೆನುತ ಸಂಜಯ ಬಂದನಿಭಪುರಿಗೆ ॥೪೮॥

---

[1] ನುಡಿಯಿಂದಲಾತನ (ಕ ಮ) [2] ಡೋ (ಗಾ ರ) [3] ಪ (ಕ ಗ ಮ) [4] ರೊಡಹು (ಗ ಜ ಪ ಮ) [5] ವಿದುರ ಗುರು (ರ ಬ) [6] ಜ ಕೃಪರನು ಕೇಳ್ದೆನು ಚಿತದಲಂದು (ರ ಬ), ಭವರನುಚಿತದಲಿ ಕೇಳದರೆಂದ. (ಣ ರ) [7] ವೆನ್ನೆಂದ (ಝ ರ ದ), ವೆಂದೆನ್ನು (ಢ ಪ ಯ) [8] ವಿಮಳಾ (ಕ ರ ಮ) [9] ಪುತ್ರರಿಂ (ಗಾ ಚ) [10] ನವ (ಕ ರ ಮ)

ಬಂದನಾ ಧೃತರಾಷ್ಟ್ರರಾಯನ
ಮಂದಿರ[1]ವ ಹೊಕ್ಕನು[1] ಮಹೀಶ[2]ನೊ
ಳೊಂ[2]ದೆರಡು ಮಾತಿನಲಿ ಸೂಚಿಸಿ ಮರಳಿದನು ಮನೆಗೆ ।
ಅಂದಿನಿರುಳಲಿ ನಿದ್ರೆ ಬಾರದೆ
ನೊಂದು ವಿದುರನ ಕರಸಿ ರಾಯನ
ತಂದೆ ಬಿಸುಸುಯ್ಯುತ್ತ ನುಡಿದನು [3]ವಿದುರದೇವಂಗೆ[3] ॥೪೯॥

ಎರಡನೆಯ ಸಂಧಿ ಮುಗಿದುದು

---

[1] ಕೆ ಕಂಡನು (ಖ ಗಾ) [2] ನನೊಂ (ಗ ಟ.ಢ ಪ), ನಿಗೊಂ (ಝ)
[3] ರಾಜಕಾರಿಯುವ (ಖ ಠ ಣ ರ).

# ಮೂರನೆಯ ಸಂಧಿ

---

ಸೂಚನೆ॥ ತಿಳುಹಿದನು ವಿದುರನು ಮಹೀಪತಿ
ತಿಲಕನನು ನಯನೀತಿಧರ್ಮಂ
ಗಳ ಸುಸಂಗತಿಯಿಂದ ನೂಕಿದರವರು ಯಾಮಿನಿಯ ॥

ನಾಳೆ ಸಭೆಯಲಿ [1]ಬಂದ ಹದನನು[1]
ಹೇಳುವನು [2]ಸಂಜ[2]ಯನು ಸಂಧಿಯೊ
ಕಾಳೆಗವೊ ಮುಂದರಿಯಬಾರದು ದುಗುಡವಾಯ್ತೆಮಗೆ ।
ಹೇಳು ನಿರುತವನಿಂದಿನಿರುಳ[3]ನು[3]
ಬೀಳುಕೊಂಡುದು ನಿದ್ರೆಯೆನೆ ಭೂ
ಪಾಲಕನ ಸಂತೈಸಿ ಬಳಿಕಿಂತೆಂದನಾ ವಿದುರ ॥೧॥

ಬಲವಿಹೀನನು ಬಲ್ಲಿದನ ಕೂ
ಡೊಲಿದು [4]ತೊಡಕಿ[4]ದವಂಗೆ ಕಾಮದ
ಕಳವಳದಲಿರ್ದಂಗೆ ಧನದ[5]ಳಲಿ[5]ನಲಿ ಮರುಗುವಗೆ ।
ಕಳವಿನಲಿ ಕುದಿವಂಗೆ ದೈವದ
ನೆಲೆಯನರಿಯದವಂಗೆ ದಿಟವಿದು
ತಿಳಿ[6]ಯೆ[6] ಬಾರದು ನಿದ್ರೆಯೆಂದನು ಭೂಪತಿಗೆ ವಿದುರ ॥೨॥

ಒಂದರಿಂದರಡಹುದನರಿ ಮೂ
ರಿಂದವನು ತಿಳಿ ನಾಲ್ಕರಲಿ ಮನ
[7]ಸಂದಿಸದಿರ್ಕೈ[7]ದರಲಿ ವರ್ಜಿಪುದಾರನೇಳರಲಿ ।
ಒಂದಿಸದಿರೆಂಟನು ವಿಚಾರಿಸಿ
ಮುಂದುವರಿಯೊಂಬತ್ತರಲಿ ಮನ
[8]ಗುಂದದಿರುವೀ[8]ರೈದರಲಿ ಭೂಪಾಲ ಕೇಳೆಂದ ॥೩॥

---

[1] ಬಂದು ಸಂಜಯು (ಗ), ಬಂದು ಸುದ್ದಿಯ (ಟ ದ) [2] ಸುದ್ದಿ (ಗ)
[3] ಲಿ (ಜ ತ) [4] ಸೆಣಸಿ (ಚ ಜ ತ ಣ ಯ) [5] ಳವಿ (ಗ), ಳವಿ (ಜ ಝ ಯ)
[6] ಯ (ಗಾ ಚ) [7] ಗುಂದಿಸದಿರ್ಕೈ (ಖ ಮ) ಸಂದು ಬಳಸೈ (ತ ಬ)
[8] ಸಂದಿಸದಿರೀ (ಗ ಟ ತ ದ ನ)

ತನ್ನ ಚಿಂತೆಯದೊಂದು ದೈವದ
ಗನ್ನಗತಕವದೆರಡು ಭಾವದ
ಬನ್ನಣೆಯ ಬಗೆ ಮೂಱು ದೈವದ ಭಿನ್ನಮುಖ ನಾಲ್ಕು ।
ತನ್ನ ನೆ[1]ನಹಿನ ವೋಲು[1] ಕಾರ್ಯವು
ಚೆನ್ನಹಡೆ ಲೋಕಕ್ಕೆ ತಾ ಬೇ
ಱಿನ್ನು ದೈವವದೇಕೆ ತಾನೇ ದೈವರೂಪೆಂದ ॥೪॥

ಒಂದು ವರ್ಣವನಱುಹಿದವ ಗುರು
ವೊಂ[2]ದ[2]ಪಾಯುದಲುಳುಹಿದವ ಗುರು
ಬಂದ ವಿಗ್ರಹದೊಳಗೆ ರಕ್ಷಿಸಿದಾತ ಪರಮಗುರು ।
ಒಂದೆರಡುಮೂಱೈಸಲೇ [3]ಸಾ
ಕೆಂದು[3] ಗರ್ವೀಕರಿಸಿದವರುಗ
ಳೊಂದುವರು ಚಾಂಡಾಲಯೋನಿಯೊಳರಸ ಕೇಳೆಂದ ॥೫॥

ತನ್ನ [4]ಕಾರ್ಯದ[4] ಕಾರಣವನುಳಿ
ದನ್ಯಥಾಚಿಂತೆಯನು ಮಾಡುವು
ದುನ್ನತಿಕೆ ತಾನಲ್ಲ ನೀತಿಜ್ಞರಿಗೆ ಭಾವಿಸಲು ।
ಮನ್ನಿಸುವುದಾ[5]ತ್ಮ[5]ನನು ಮಿಕ್ಕದ
ನನ್ಯರಿಗೆ ಮಾಡುವು[6]ದಿ[6]ದಲ್ಲದೆ
ತನ್ನ ತಾ ಮಱೆದಿಹುದು [7]ಮತ[7]ವಲ್ಲೆಂದನಾ ವಿದುರ ॥೬॥

ಹಾವು ಹಲವನು ಹಡೆದು ಲೋಕಕೆ
ನಾವ ತಹವೊಲು ನೂಱುಮಕ್ಕಳ
ನಾವಪರಿಯಲಿ ಹಡೆದು ಕೆಡಿಸಿದೆ ಭೂಮಿಭಾರಕರ ।
ಭಾವಿಸಲು ಸರ್ವಜ್ಞಸರ್ವಗು
ಣಾವಲಂಬನನೊಬ್ಬನರ್ಜುನ
ದೇವ ಸಾಲದೆ ನಾಡನಾಯ್ಗಳಲೇನು ಫಲವೆಂದ ॥೭॥

ದೀಪದೀಪವ ತೊಳಲಿ ಕರ್ಮಕ
ಳಾಪದಲಿ ಕುದಿಕುದಿದು ನಾನಾ
ರೂಪಿನಿಂದಾರ್ಜಿಸಿದ [8]ಸುಕೃತ[8]ದಗೊಡವೆ ತಾನೇಕೆ ।

---

[1] ಹಿನ ಹಾಗೆ(ಕ ಖ ಗ ಮ), ಹೆಂತಂತೆ (ಚ ಡ). [2] ದು (ಟ ಡ ತ ದ ಮ ಯ)
[3] ತಾನೆಂದು (ಕ ಚ) [4] ಕಾರಿಯ (ಗ ಟ ಡ ಢ ಪ ರ) [5] ತ (ಗ ಢ ತ)
[6] ದ (ಗ ಟ.ಪ ಯ) [7] ಚಿತ (ಕ) [8] ಡರ್ಥ(ಕ), ಧರ್ಮ (ಟ ಣ ದ).

ಭೂಪ ಕೇಳ್ಶೈ ಸತ್ಯವೊಂದೇ
ಸೋಪನವು ಸಗ್ಗಕ್ಕೆ ಜನ್ಮದ
[1]ಕೂಪರಕ್ಕಿದು[1] ನಾವೆಯಾಗಿಹುದೆಂದನಾವಿದುರ ॥೮॥

ಪಾಪದಿಂದಾರ್ಜಿಸಿದಡರ್ಥವ
ನಾಫಲವನುಂಬವರಿಗಿಲ್ಲಾ
ಪಾಪವೊಬ್ಬಂ[2]ಗಪ್ಪುದಾರ್ಜಿಸಿದುರಗನಂದದಲ[2] ।
ಕಾಪಥವನಾಶ್ರೈಸಿ ಕೋಪಾ
ಟೋಪದಿಂದುತ್ತಮರ ಸರ್ವ
ಸ್ವಾಪಹಾರವ ಮಾಡಿ ಬದುಕುವುದಾವಗುಣವೆಂದ ॥೯॥

ಬವರಮುಖದಲಿ ವೈರಿರಾಯರ
ನವಗಡಿಸಿ ತಂದಾ ಧನವ ಭೂ
ದಿವಿಜ[3]ಸಂತತಿಗಿತ್ತ ಫಲವಿನಿತೆಂದು[3] ಗಣಿಸುವಡೆ ।
ದಿವಿಜಪತಿಗಾಗದು ಕಣಾ ಮಾ
ನವಪತಿಗೆ [4]ತಾ ಧರ್ಮವಿದು[4] ನಿ
ನ್ನವನು ನೀತಿಯನರಿಯನ್ಶೈ ಧೃತರಾಷ್ಟ್ರ ಕೇಳೆಂದ ॥೧೦॥

ಧರಣಿಯಮರರ ಧನದಿ [5]ನೆರ[5]ಹಿದ
ಕರಿತುರಗ ಮೊದಲಾದ ದಳವು
ಬ್ಬರದಿ ಹೆಚ್ಚಿಹುದರಿನೃಪಾಲರ ಯುದ್ಧಪರ್ಯಂತ ।
ಜರಿದು ನಸಿವುದು ವಾಹಿನಿಗೆ ಮಳೆ
ತುರುಮಳಲಕಟ್ಟೆಯವೊಲಿದನಱಿ
ದರಸುಗಳು ವರ್ಣೋತ್ತಮರ ದೆಸೆಗಂಜಬೇಕೆಂದ ॥೧೧॥

ಉರಗನವುಡಿದಡದಱ ವದನದೊ
ಳಿರದೆ ಮೇಣಾ [6]ದಷ್ಟ[6]ದೇಹದೊ
ಳಿರದೆ ರುಧಿರವು ಪೋಪವೊಲು ದುಷ್ಟಾಧಿಕಾರಿಗಳ ।
ಒರಸೊರಸಿನಿಂ ಜನಪದದ [7]ಧನ[7]
ಹರಿವುದರ[8]ಸಂಗಲಸಿ[8]ದಾ ಪ್ರಜೆ
ಗಿರದುಭಯ ಹಿಂಗುವುದನಱಿ ಭೂಪಾಲ ಕೇಳೆಂದ ॥೧೨॥

---

1 ಕೂಪಕಿದು ತಾ (ಚ ಣ), ಪಾಪನದಿಗಿದು (ಬ ಮ) 2 ಗಪ್ಪುದಾರ್ಜಿಸಿದ ದಂದುಗರನಂತೆ(ಟ ದ) ಗಿಹುದು ವಿಷವಾರ್ಜಿಸಿದ ಫಣಿಯಂತೆ(ಣ) 3 ತತಿಗಿತ್ತಾ ಫಲವನಿನಿತೆಂದು (ಖ ಗ ಟ ರ ಡ ದ ಪ) 4 ಸದ್ಧರ್ಮವದು (ಚ ಜ ಟ ಬ ಯ ರ) 5 ಸಲ (ಕ ಖ ಚ ತ ಬ ಮ) 6 ದುಷ್ಟ (ಕ ಗ ತ ಪ ಮ ಯ) 7 ಸಿರಿ (ಗ ಡ ಣ ಪ) 8 ಸಿಂಗಿಲ್ಲ (ಖ ಗ ಚ ಪ ಮ)

ಉರಗನನಗಿದಡೆ ಮೇಣು ಶಸ್ತ್ರದ
ಲಱಿದಡೊಬ್ಬನೆ [1]ಸಾವನದಱಿಂ
ದರಸು[1] ನೆಗಳಿದ ಮಂತ್ರ [2]ಭೇದಿಸಲಾ[2]ನೃಪಾಲಕರ ।
[3]ಧರೆ[3]ಸಹಿತ ತತ್ಸಕಲಬಲ ಸಂ
ಹರಣ[4]ವಹುದಿದನಱಿದು ಗುಪ್ತದ
ವರರಹಸ್ಯದ ಮಂತ್ರ[4]ವುಂಟೇ ರಾಯ ನಿನಗೆಂದ ॥೧೩॥

ಏಸು ಧರ್ಮದಲಾರ್ಜಿಸಿದ ಧನ
ವೈಸು ಸಿರಿ ವರ್ಧಿಸುವುದದಱಿಂ
ದೇಶಮಂಗಳ ಪುತ್ರಮಿತ್ರಕಳತ್ರ[5]ವರಿವಿಜಯ[5] ।
ಪೈಸರಿಸುವುದು ಬಂದ ಬಳಿವಿಡಿ
ದಾಸುರದ [6]ಪಥ[6]ವಿದನಱಿದು ಭೂ
ಮೀಶ ಧರ್ಮವ ಹಿಡಿಯಧರ್ಮವ ಬಿಟ್ಟುಕಳೆಯೆಂದ ॥೧೪॥

ಹರಿವ ನದಿ ತನ್ನಿಚ್ಛೆಯಲಿ ದಡ
ವೆರಡ [7]ಕೆಡಿಸುವ[7] ಪೋಲು ನಾರಿಯು
ರುರವಣಿಗೆ ಕೈಗೊಟ್ಟು ನಡಸಿದಡುಭಯವಂಶವನು ।
ನೆರಪುವರು ನೀರೊಳಗೆ ಪೋರೆಯ
ಮುಱಿಯಲೀಯದೆ ಮಾರ್ಗದಲಿ ಮ
ತ್ಸರಿಸದಾಳುವುದನುನಯವು ಭೂಪಾಲ ಕೇಳೆಂದ ॥೧೫॥

ಧರೆಯೊಳಗೆ ಕಡುಮೂರ್ಖರಿವರಿ
ಬ್ಬರು ಕರ್ಣ ದುರ್ಯೋಧನನು ದಶ
ಶಿರನು ಗೋಗ್ರಹಣದಲಿ ವನಭಂಗದಲಿ ಮುಂಕೊಂಡು ।
ಅರಿಭಟರ ಸತ್ವಾತಿಶಯದು
ಬ್ಬರದ [8]ಬಲುಹನು[8] ಕಂಡು ಕಂಡೆ
ಚ್ಚಱಿದೆ ಮರುಳಹುದುಚಿತವೇ ಹೇಳೆಂದನಾವಿದುರ ॥೧೬॥

---

[1] ಮಡಿವನಂತಲ್ಲರಸು (ಖ ಗ ಚ ಪ ಬ ಯ) [2] ಭಿನ್ನಿಸಲರಿ (ಕ ಖ ತ) ಭಂಗಿಸಲರಿ (ಟ ರ ದ) ಭಿನ್ನಿಸಲಾ (ಡ ಪ ರ) [3] ಸಿರಿ (ಗ ಡ ಣ ಪ ಯ ರ) [4] ವಹುದಿದನಱಿದು ಭೂಪೋತ್ತಮ ರಹಸ್ಯದ ಮಂತ್ರ (ಕ) ಬಹುದಿನದ ಗುಪ್ತದ ಪರಮಮಂತ್ರ ರಹಸ್ಯ (ಗ) ವೈದುವುದಿದನಱಿದು ಭೂಪರ ರಹಸ್ಯದ ಮಂತ್ರ (ಮ) [5] ಸಂದೋಹ (ಖ ಟ ದ) [6] ಮತ (ಟ ದ) [7] ಕೆಡಹುವ (ಕ ಡ ಪ ಮ) [8] ಯುದ್ಧವ (ಕ ಗ ಚ. ಪ ಯ), ಗರ್ವವ (ಟ ಣ ದ), ಭಂಗವ (ಬ ಮ)

ಕರಣಿಕನ ಹಗೆಗೊಂಡವಂಗೈ
ಶ್ವರಿಯಹಾನಿ ಚಿಕಿತ್ಸಕನನಾ
ದರಿಸದಾತಂಗಾಗದಾಯುಷ್ಯಾಭಿವೃದ್ಧಿಗಳು।
ಅರಸ ಕೇಳಾಯುಷ್ಯ[1]ಭಾಗ್ಯಗ[1]
ಳೆರಡು ಕೆಡುವು[2]ದು[2] ತಪ್ಪದವನೀ
ಸುರರ ಬದ್ಧದ್ವೇಷ ಲೇಸಲ್ಲೆಂದನಾ ವಿದುರ ॥೧೭॥

[3]ಧರೆಯೊಳಗೆ[3] ರವಿಮಂಡಲವನೊಡೆ
ದುರವಣಿಸಿ [4]ಹಾಯ್ವವರು ದಿಟವಿ[4]
ಬ್ಬರೆ ಕಣಾ ಸನ್ಯಾಸಿಯಾಗಿಯೆ ಯೋಗಮಾರ್ಗದಲಿ।
ಹರಣವನು ಬಿಟ್ಟವರು[5]ಗಳು[5] ಸಂ
ಗರದೊಳಭಿಮುಖರಾಗಿ ಮರಣಾಂ
ತರವ[6]ನೈದಿದವರುಗಳವನೀಪಾಲ[6] ಕೇಳೆಂದ ॥೧೮॥

ಮಾತೃಪಿತೃಗ[7]ಳು[7] ಶತ್ರುಭಾವವ
ನಾತು ನಿಜಸಂತಾನದಲಿ ಸಂ
ಪ್ರೀತಿಯನು ನೆಲೆಗೊಳಿಸಿ ಸರ್ವಜ್ಞಾ[8]ಧಿಕಾರದಲಿ[8]।
[9]ಖ್ಯಾ[9]ತರನು [10]ಮಾಡದಡೆ[10] ಹಂಸ
ವ್ರಾತಮಧ್ಯದ ಬಕನ ವೊಲು ವಿ
ಖ್ಯಾತಸಭೆಯೊಳು ಯೋಗ್ಯರಹ[11]ರೇ[11] ಭೂಪ ಕೇಳೆಂದ ॥೧೯॥

ಸುರರ ಮೇಳದಲಾಡುವವರಿ
ಬ್ಬರೆ ಕಣಾ ಪ್ರಭುವಾಗಿಯು ಕ್ಷಮೆ
ವೆರಸಿದವನು ದರಿದ್ರನಾಗಿಯು ದಾನಿಯೆನಿಸುವನು।
ಅರಿದೆ[12]ನಿಸದತಿಬಲನ[12] ಧರ್ಮೋ
ತ್ಕರುಷ ದುರ್ಬಲಯುತನ ಸೈರಣೆ
ಸರಿಸ[13]ವೆನಿಸದು[13] ರಾಯ ಚಿತ್ತೈಸೆಂದನಾ ವಿದುರ ॥೨೦॥

---

[1]ಧವುಶೆಗ (ಕ ಣ ಬ ರ) ಭಾಷೆಗ (ಗ ಟ ಡ) [2]ವು (ಗ ಡ ನ) [3]ಅರಸ ಕೇಳ್ (ಟ ರ ದ ನ) [4]ಹಾಯ್ದವರುಗಳಿ (ಕ ಮ) ಮಿಗೆ ಹಾಯ್ದರಿವರಿ (ಝ ಟ ದ್ಕ ಪ) [5]ಘನ (ಗ ಟ ಡ ದ ಯ ರ) [6]ನೈದುವ ನಾವನವ ಧೃತರಾಷ್ಟ್ರ (ಜ) ನೈದಿದ ನಾವನವ ಧೃತರಾಷ್ಟ್ರ (ಡ ಣ ಪ ಯ ರ) [7]ಳ (ಚ ಜ ಹ ಮ ಞ ರ), [8]ತಿಕಾರದಲಿ (ಜ ರ) ನಕಾಲದಲಿ (ಟ ದ) [9]ಜ್ಞಾ (ಖ) [10]ಮಾಡಿದರೆ (ಕ ಗ ಚ ಟ ಣ ರ) [11]ರೆಲೆ (ಕ) [12]ನಿಸದತಿಧನಿಕ (ಗ ಡ ಣ ಪ ಯ) ನಿಸಿದೈಶ್ವರ್ಯ (ಝ ಟ ದ ನ). [13]ವಲ್ಲಿದು (ಗಾ)

ಧರಣಿ ನುಂಗುವಳಿಬ್ಬರನು ಸಂ
ಗರವ ಜಯಿಸದ ನೃಪನ ದೇಶಾಂ
ತರವ ಚರಿಸದ ಪಂಡಿತನನಿದು ಶಾಸ್ತ್ರಸಿದ್ಧವಲೆ।
ಅರಸುಗುಲದಲಿ ಹುಟ್ಟಿ [1]ಸಾಪ
ತ್ನರಿಗಳುಕಿ[1] ದೇಹಾಭಿಲಾಷೆಯೊ
ಳುರಗನಂತೊಳಗಿಹುದು [2]ಮತವಲ್ಲೆಂದನಾ[2] ವಿದುರ ॥೨೧॥

ನರಜನುಮವತ್ಯಧಿಕವದಱೊಳು
ಗುರುಹಿರಿಯ[3]ರಿವರೆಂದು[3] ದಾನ
ಕ್ಕರುಹರ[4]ಹರ[4]ಲ್ಲೆಂದು ನೋಡದೆ ಮೂಢಮಾರ್ಗದಲಿ।
ಕರೆದಪಾತ್ರಂಗಿತ್ತು ಪಾತ್ರ[5]ವ[5]
ಪರಿಹರಿಸಲೀಯೆರಡಱಿಂ ಸಂ
ಹರಣವೈದುವುದಾರ್ಜಿಸಿದ ಧನವರಸ ಕೇಳೆಂದ ॥೨೨॥

ತಂದೆತಾಯಿಗಳಿಬ್ಬರಾತ್ಮಜ
ವೃಂದವನು [6]ಮಿಗೆ[6] ಸಲಹಿ ತತ್ಸುತ
ರಿಂದ ಲೇಸನು ಪಡೆವವೊಲು ತಜ್ಜನಪದದ ಜನವ।
[7]ಹೊಂದಿಸದ[7] ನೃಪಮಂತ್ರಿಗ[8]ಳು[8] ಸಾ
ನಂದದಲಿ ರಕ್ಷಿಸಲು ಬಳಿಕವ
ರಿಂದ ಸಕಲೈಶ್ವರ್ಯ [9]ಸೇರುವುದೆಂದನಾ ವಿದುರ[9] ॥೨೩॥

*ಕಾಮಿನಿಯರುಗಳಾರು ಕೆಲಬರು
ಕಾಮಿ[10]ಸಲು[10] ಕಾಮಿಸುವರಲ್ಲದೆ
ತಾಮಸದಿನಾ ಮೂರುಕರು ಪೂಜಿಸಿದ ಪೂಜೆಗಳ।
ಪ್ರೇಮದಿಂ [11]ಪೂಜಿಸು[11]ವರಲ್ಲದೆ
[12]ಸೀಮೆ[12]ವಿಡಿದಿಹುದಾಗದೆಂಬುದ
ನಾ ಮದಾಂಧರು ಬಲ್ಲರೇ ಧೃತರಾಷ್ಟ್ರ ಕೇಳೆಂದ ॥೨೪॥

---

* ಈ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ

[1] ಸಾಪತ್ನರುಗಳಲಿ (ಕ) ರಿಪುರಾಯರಿಗಳುಕಿ (ಖ) ದಾಯಾದ್ಯರಿಗಳುಕಿ (ಗಾ) [2] ಧರ್ಮವೆಯೆಂದನಾ (ಕ ಮ) ಲೇಸಲ್ಲೆಂದನಾ (ಗ) [3] ರೆಂದಱದು (ಖ ಗಾ ನ) [4] ಹುದ (ಗ ಝ ನ) [5] ನ (ಚ ಝ ಣ ನ ಬ) [6] ನೆಱೆ (ಗ ಚ ಟ ದ ಮ) [7] ಹೊಂದಿಸಿಯೆ (ಕ) ಕುಂದಿಸದೆ (ಗ) ಒಂದಿಸದೆ (ಜ ಟ ದ ರ) [8] ಳ (ಖ ಗ ಜ ರ) [9] ವ ಪಡೆವುದರಸ ಕೇಳೆಂದ (ಕ ಮ) ಸೇರುವುದರಸ ಕೇಳೆಂದ (ಖ ಡ ನ) ಸಂಪದವಹುದು ಕೇಳೆಂದ (ಜ ಝ,ಣ) [10]ತರ (ಝ) ಸಿದ (ಟ ದ ) ತವ (ಣ ರ) [11] ದೊಡಬಡು (ಖ ಟ ರ ಣ ತ) [12] ನೇಮ (ಟ ದ)

ತನ್ನ ಸುಖದುಃಖಂಗಳಲಿ ನಿ
ರ್ಭಿನ್ನರಹ ಬಾಂಧವರ ವರ್ಜಿಸಿ
ಗನ್ನಗತಕದಲುಂಡು ಜಾಱುವ ಗಾವಿಲರ ಕೂಡಿ।
ಅನ್ಯರನು ಪತಿಕರಿಸಿ ಬಹುಮಾ
ನೋನ್ನತಿಕೆಯನು ವಿರಚಿ[1]ಸುವುದಿದು[1]
ತನ್ನ ತಾನೇ ಕೊಂದುಕೊಂ[2]ಡು[2]ದು ಭೂಪ ಕೇಳೆಂದ ॥೨೫॥

ಪಿತನಿರಲು ದಾತಾರನಿರೆ ನಿಜ
ಪತಿಯಿರಲು ಸುತ ದಾಸ ಸತಿಯೀ
ತ್ರಿತಯ[3]ದೊಳ್ ಸ್ವಾತಂತ್ರ್ಯ ತಾನಿ[3]ಲ್ಲಾವಕಾಲದಲಿ।
ಕ್ಷಿತಿಯೊಳುತ್ತಮಮಧ್ಯಮಾಧಮ
ಗತಿಯ [4]ಪುರುಷ[4]ತ್ರಯವನವರಿಂ
ಗಿತವನವರಾಯತವನಱಿವೈ ಭೂಪ ಕೇಳೆಂದ ॥೨೬॥

ಬೆಳಸು ಘನ ತೃಣವಧಿಕ ಜಲ ನಿ
ರ್ಮಲವೆನಿಪ ಕಾಲದಲಿ ಪರವುಂ
ಡಲಕೆ ನಡೆವುದು [5][ಹೃ]ಷ್ಟಪುಷ್ಟವಿಹಾರನೆಂ[5]ದೆನಿಸಿ।
[6]ಬಲುಹ[6]ಹುದು ನಿಜಬಲಕೆ [7]ಬಲವಾ[7]
ನೆಲನ ಮೆಟ್ಟಲು ವೈರಿಸೇನಾ
ವಳಿಗೆ ಹೀನತೆ ದೊರಕುವುದು ಭೂಪಾಲ ಕೇಳೆಂದ ॥೨೭॥

ಮಾಲೆಗಾಱ ಸಿಲೀಮುಖನ ಪಶು
ಪಾಲಕನವೊಲ್ ಪ್ರಜೆಯ ರಕ್ಷಿಸಿ
ಮೇಲೆ ತೆಗೆವೈ ಧನವ[8]ನುಳಿದಂ[8]ಗಾರಕಾ[9]ರು[9]ಕನ।
ವೋಲು [10]ಕಡದುಱು ವ್ಯಾ[10]ಘ್ರನಂತೆ ವಿ
[11]ಟಾ[11]ಳಿಸಲು ಜನ ನಸಿಯಲರಸಿನ
ಬಾಳಿಕೆಗೆ ಸಂದೇಹವಾಗದೆ ಭೂಪ ಕೇಳೆಂದ ॥೨೮॥

---

[1] ಸಿದಡದು(ಚ ಜ ಡ ಣ ಪ) [2] ಬು (ಜ ಝ ಣ ಮ) [3] ರು ಸ್ವಾತಂತ್ರದವರ (ಕ ಖ ಮ) [4] ತಾಪ (ಕ ಮ) [5] ಮೃಷ್ಟಿ ಪ್ರೋತ್ರವೆಂ (ಕ), ದುಷ್ಟಘಾತವಿಹೀನನೆಂ (ಗ), ತುಷ್ಟಿಪುಷ್ಟಿವಿಹೀನ (ಜ ಣ ರ), ಹೃಷ್ಟ ಪುಷ್ಟವಿಹಾರನೆಂ (ಟ ದ) [6] ಬಲವ (ಝ ರ) ಗೆಲವ (ಟ ದ) [7] ಬಱಸಿನ (ಕ), ಬಱನಾ (ಣ ದ ರ) [8] ಮುಳಿದಂ (ಕ ಗ ಪ ಮ ಯ), ಮೇಲಂ (ಜ ರ) [9] ರ (ಗ ಜ ಟ ಡ) [10] ಗಡ ದುರ್ವ್ಯಾ (ಕ ಮ), ಕಡು ದುರ್ವ್ಯಾ (ರ) [11] ತಾ (ಕ ರ ಮ).

ಎಲ್ಲಿಹುದು ಋಣಭಯವು ಮನುಜರೊ
[1]ಳ[1]ಲ್ಲಿಹುದು ದೇವಾಂಶ ನಿಜವಾ
ಗೆಲ್ಲಿಹುದು ಸನ್ಮಾರ್ಗ [2]ಬಳಿಕಲ್ಲಿಹುದು[2] ಬ್ರಾಹ್ಮಣ್ಯ ।
ಎಲ್ಲಿಹುದು ಪರಸತಿಯುರಂಜಿಕೆ
ಯಲ್ಲಿಹುದು [3]ವಿ[3]ಜ್ಞಾನವಿದನಱಿ
ದಲ್ಲದಿಹಪರವಿಲ್ಲ ಚಿತ್ತೈಸೆಂದನಾ ವಿದುರ ॥೨೯॥

ರಕ್ಷಿಸಿದ ಧನದಿಂ ಪುರಂಧ್ರಿಯು
ರಕ್ಷಿಸುವುದು ಪುರಂಧ್ರಿಯಿಂದವೆ
ರಕ್ಷಿಸುವುದಾತ್ಮನನು ಧನ[4]ದಿಂ[4]ದಾಪಕಾಲದಲಿ ।
ಲಕ್ಷಭೇದವನಱಿದು [5]ನಡೆದು ವಿ
ಲ[5]ಕ್ಷವನು ಮುಱಿದಾತ್ಮರಕ್ಷೆಯ
[6]ನೀ[6]ಕ್ಷಿಸುವುದ[7]ನು[7]ನಯವಲ್ಲ ಭೂಪಾಲ ಕೇಳೆಂದ ॥೩೦॥

ತಿಳಿದು ನಾಲ್ವರೊಳೊರೆದ ಕಾರ್ಯವ
ನುಳಿವುದಿಬ್ಬರನಿಬ್ಬರೊಳು ಮ
ತ್ತುಳಿವುದೊಬ್ಬನನೊಬ್ಬನಿಂ ನಿಶ್ಚೈಸಿ ಬಳಿಕವನ ।
ಕಳೆದು ತಾನೇ ತನ್ನೊಳಗೆ ಬಗೆ
ಗೊಳೆ ವಿಚಾರಿಸಿ ಮಾಳ್ಪ ಕಾರ್ಯಕೆ
ಹಳಿವು ಹೊಱುವುದೆ ರಾಯ ಚಿತ್ತೈಸೆಂದನಾ ವಿದುರ ॥೩೧॥

ನಿವಡಿಸಿದ ವಿದ್ಯೆಕ್ಕೆ ಸಮಬಂ
ಧುವನು ರೋಗಾವಳಿಗೆ ಸಮಶ
ತ್ರುವನು [8]ಸಂತಾನಕ್ಕೆ[8] ಸಮಸಂತೋಷದುದಯವನು ।
ರವಿಗೆ ಸಮವಹ ತೇಜವನು ವಾ
ಸವನ [9]ಸಮಭಾಗ್ಯ[9]ವನು [10]ಜಗ[10]ದಲಿ
ಶಿವನ ಬಲದಿಂದಧಿಕಬಲವನು ಕಾಣೆ ನಾನೆಂದ ॥೩೨॥

---

[1] ಳ (ಖ ಙ.ರ ಪ ಬ ಯ) [2] ಭೀಕರವಲ್ಲಿ (ಕ ಖ ರ ಬ ಮ ), ಭೀತಿಯದಲ್ಲಿ (ಗ ), ಭೀತಿಯದೆಲ್ಲಿ (ಡ ಪ) [3] ಸು (ಖ ಝ ಟ ದ) [4] ಎಡಿ (ಕ ಖ ಬ ಮ) [5] ಪಕ್ಷವಿಪ (ಗ ಜ ಡ ಯ ರ) [6] ರ (ಟ ದ ನ), ಶಿ (ಬ) [7] ದು (ಕ ರ ಮ ರ) [8] ಸಂತತಿಗಳಿಗೆ(ಕ ಝ ಬ ಮ) [9] ಸಮಭೋಗ (ಜ), ಸೌಭಾಗ್ಯ (ಣ ನ) [10] ಬಲ (ಕ ಖ.ರ ಬ ಮ)

ಹಿರಿದುಮಾನೋನ್ನತಿಕೆಯನು ಬಂ
ಧುರದ ಧನವನು ಗಾರುಹಸ್ತ್ಯದ
ಪರಮ[1]ಧರ್ಮವನಾವ[1] ಬಯಸುವನವನ ಭವನದಲಿ।
ನಿರುತವೃದ್ಧಜ್ಞಾತಿ ವಂಶೋ
[2]ತ್ತರದರಿದ್ರಪ್ರಿಯನಪತ್ಯಾಂ[2]
ತರಭಗಿನಿಯಿನಾಲ್ವರಿರಬೇಕೆಂದನಾ ವಿದುರ ॥೩೩॥

ಧರಣಿಪತಿ ಚಿತ್ತೈಸು ಪೂರ್ವದ
ಲೊರೆದನಿಂದ್ರಂಗಮರಗುರು ದೇ
ವರಲಿ ಸಂಕಲ್ಪವನು ಕೃತವಿದ್ಯರಲಿ ವಿನಯವನು।
ಹಿರಿಯರಲಿ ಸಂಭಾವನೆಯ ಸಂ
ಹರಣಪದವನು ಪಾಪಕಾರ್ಯದೊ
ಳಿರದೆ ಮಾಡುವುದೆಂಬ ನಾಲ್ಕನು ರಾಯ ಕೇಳೆಂದ ॥೩೪॥

ಆವುದೀ ಲೋಕಕ್ಕೆ ಹಿತವದ
ನೋವಿ [3]ನಡೆವ ಜನಕ್ಕೆ[3] ನಿಂದೆಯ
ದಾವುದದನಾಚರಿಸದಿಹ [4]ನಾಸ್ತಿಕರ[4] ನಂಬುಗೆಯ।
ರಾವುಗಾ[5]ಣದ[5] ತತ್ತ್ವವಿಜ್ಞಾ
ನಾವಲಂಬನ[6]ನೆನಿಪನಾತನು[6]
[7]ಭೂವಲಯದೊಳಗುತ್ತಮನು ಭೂಪಾಲ ಕೇಳೆಂದ[7] ॥೩೫॥

ಪಿತನು ಗುರು ಶಿಖಿಯಾತ್ಮ ತಾಯೆಂ
ಬತುಳಪಂಚಾಗ್ನಿಯನು ಕ್ರಮದಿಂ
ಪ್ರತಿದಿನವು ಪರಿಚರಿಯ ಮಾಳ್ಪುದು ಲೇಸ ಬಯಸುವಡೆ।
ಪಿತೃಗಳನು ದೇವರನು [8]ಗುರುಗಳ[8]
ನತಿಥಿಗಳ ಯತಿಗಳನು ಪೂಜಿ[9]ಸಿ
ವಿತತಧರ್ಮವ ಕೀರ್ತಿಯನು[9] ಪಡೆದವನೆ ಸುತನೆಂದ † ॥೩೬॥

---

[1] ಮಂತ್ರವನಾರು (ಕ ಮ), ಸೀಮೆಯನಾವ (ಟ ದ) [2] ತ್ಕರದಲದ್ವಾಶ ಯನಪತ್ಯಾಂ (ಟ ದ), ತ್ತರವಣಿಯದ ಪ್ರಿಯನಪತ್ಯಾಂ (ಯ) [3] ನಡೆಸುವ ಜಗಕೆ (ಟ ದ ನ ಯ) [4] ಪರಸತಿಯ (ಕ ಮ) [5] ಣಿಪ (ಕ ಖ ಗ ಬ ಮ) [6] ನಪ್ಪುದಲ್ಲದೊ (ಣ ರ) ವೆನಿಪ ತಾನೇ (ಯ) [7] ಡಾವಪರಿಯಿಂದವನ ಜನ್ಮ ನಿರರ್ಥವಹುದೆಂದ (ಣ ರ) [8] ಭೃತ್ಯರ (ಖ ಗ ಪ ಯ), ಋಷಿಗಳ (ಜ), ವೃದ್ಧರ (ನ) [9] *ಪುದಿತರ*ಕೀರ್ತಿಯ ಧರ್ಮವನು (ಖ ಚ ಬ ರ ),*ಸಿ ಪಿತನ (ದ ನ, ಯ), ಪುದತುಳ (ಜ)

† ಈ ಪದ್ಯವು (ಕ ಟ ಮ.) ಪ್ರತಿಗಳಲ್ಲಿಲ್ಲ.

ಸಿರಿಯನುಳ್ಳವ[1]ನೇ ಕುಲೀನನು[1]
ಸಿರಿಯನುಳ್ಳವನೇ ಮಹಾತ್ಮನು
ಸಿರಿಯನುಳ್ಳವನೇ ವಿದಗ್ಧನು ಸಕಲಗುಣಯುತನು ।
ಸಿರಿಯನುಳ್ಳವನೇ ಸುಶೀಲನು
ಸಿರಿರಹಿತ ಶಿವನಾ[2]ದಡಾ[2]ತನ
ಸರಕುಮಾಡದು ಲೋಕವವನೀಪಾಲ ಕೇಳೆಂದ ॥೩೭॥

ಸಿರಿ ನೆಲೆಯೆ ಯೌವನ ನೆಲೆಯೆ ಮೈ
ಸಿರಿ ನೆಲೆಯೆ ತನು ನೆಲೆಯೆ [3]ಖಂ[3]ಡೆಯ
ಸಿರಿ ನೆಲೆಯೆ ನಿನಗರಸುತನವುಳ್ಳ[4]ನ್ನ ನೀತಿಯ[4]ಲಿ ।
ಧರೆಯ ರಕ್ಷಿಸು ಬಂಧುಗಳ[5]ನಾ
ದರಿಸು[5] ಧರ್ಮವ ಸಾಧಿಸಿಂತಿದು
ನರಪತಿಗಳಿಗೆ ನೀತಿ ಚಿತ್ತೈಸೆಂದನಾ ವಿದುರ ॥೩೮॥

ವರುಷವೈದಱೊಳರಸೆನಿಸಿ ದಶ
ವರುಷ ದಾಸತ್ವ[6]ದಲಿ[6] ಭಾವಿಸಿ
ವರುಷ ಹದಿನಾಱಱಲಿ ಪುತ್ರನ ಮಿತ್ರನೆಂದೆನಿಸಿ ।
ಪರಿವಿಡಿಗಳಲಿ ನಡಸಿ ಮದವು
ತ್ಸರವ [7]ಮಾಣಿಸಿ[7] ನೆಱೆದ ಮಕ್ಕಳ
ನರಮೃಗವ [8]ನೀ ಮಾಡುವರೆ ಭೂಪಾಲ[8] ಕೇಳೆಂದ ॥೩೯॥

ಧನಮದದಿ ಕುಲಮದದಿ [9]ಘನ[9]ಯೌ
ವನಮದದಿ ವಿದ್ಯಾಮದದಿ ಗುರು
ವನು ವಿಭಾಡಿಸಿ ನೀನು ತಾನೆಂದೆನುತಹಂಕರಿಸಿ ।
[10]ಕನಲಿ ವಿಪ್ರಸಭಾಸ್ಥಳದೊಳೊ
ಬ್ಬನ ವಿಭಾಡಿಸಿ ನುಡಿದ[10] ಮನುಜನು
ಜನಿಸುವನಲೈ ಬ್ರಹ್ಮರಾಕ್ಷಸನಾ[11]ಗರಣ್ಯದಲಿ[11] ॥೪೦॥

---

[1] ನೇ ಕುಲಜ್ಞನು (ಟ ದ ಮ), ನವನೆ ಕುಲಜನು (ಣ ನ ಪ) [2] ಗಲಾ (ಕ ಖ ಟ ದ ಮ) [3] ಕಂ (ಗ) [4] ಲ್ಲಿ ನೀತಿಯ (ಕ ಖ ಪ ಬ ಮ), ನಕ ಧರ್ಮದ (ಚ) [5] ನುದ್ಧರಿಸು (ಕ ಟ ಮ), ಸತ್ಕರಿಸು (ಖ ಗ ಡ ಣ ಪ ರ) [6] ವನು (ಕ ಖ ಮ) [7] ಮಾಡದೆ (ಖ ಗ ರ ತ), ಕೆಡಿಸದೆ (ಚ) [8] ಮಾಡಿದೆ ಯೆಲೈ ಧೃತರಾಷ್ಟ್ರ (ಗ ಡ ಣ ಪ ಯ ರ) [9] ನಾ (ಕ ಚ ರ ಮ), ವೇಣ್ (ಬ) [10] ಮುನಿಸಿನಲಿ ಸಾತ್ವಿಕರುಗಳೊಳೊಬ್ಬನನು ಘರ್ಜಿಸಿ ನುಡಿವ (ಕ ಮ) [11] ಗಿ ಅವನಿಯಲಿ (ಕ ಮ), ಗಿ ಗಹನದಲಿ (ಣ)

ನಲಹಿದೊಡೆಯನ ದಿವ್ಯಮಂತ್ರವ
ಕಲಿಸಿದಾಚಾರಿಯನನ[1]ವಸರ[1]
ದೊಳಗೆ ತಲೆಗಾಯ್ದವನ ದುರ್ಭಿಕ್ಷದಲಿ ಸಲಹಿದನ ।
ಜಲದೊಳಾಳ್ದನನೆತ್ತಿದನನುರಿ
ಯೊಳಗೆ ಪರಿಹರಿಸಿದನ ಮಱೆದವ
ರಿಳಿವರೈ [2]ಕುಲಕೋಟಿಸಹಿತ ಮಹಾಂ*ಧ*ನರಕದಲಿ[2] ॥೪೧॥

ಒಲಿದವಳ ಬಿಟ್ಟೊಲ್ಲದವಳಿಗೆ
ಹಲುಬುವವ[3]ನಹಿತರಲಿ ಸಖ್ಯಾ
ವಳಿಯನೆಸಗುವನಱಿಯದುದ ತಾ ಬಲ್ಲೆನೆಂಬುವನು[3] ।
[4]ಒಲಿದು ಕೇಳದೆ ಹೇಳುವವ ಕೈ[4]
[5]ನಿಲುಕಲಱಿಯದ ಕಾರ್ಯದಲಿ ಹಂ
ಬಲಿಸಿ ಮಱುಗುವನವನೆ ಮೂಢನು ರಾಯ ಕೇಳೆಂದ[5] ॥೪೨॥

ಸಿರಿಗೆ ಕಂಟಕವಾಱುದೋಷವ
ನೊರೆವೆನಾಲಸ್ಯವನು ಭಯವನು
ಮಱವೆಯನು ಕೋಪವನು ನಿದ್ರೆಯ ದೀರ್ಘಸೂತ್ರತೆಯ ।
ಪರಿಹರಿಸಬಲ್ಲವನಿಪಾಲಂ
[6]ಗೆರವೆ[6]ನಿಸದೈಶ್ವರ್ಯ[7]ವವನೂ
ರ್ವರೆ[7]ಯೊಳಗೆ ರಾಜೋತ್ತಮನು ಭೂಪಾಲ ಕೇಳೆಂದ ॥೪೩॥

ಹರುಷ ದರ್ಪ ಕ್ರೋಧ ಲಜ್ಜಾ
ತುರತೆ [8]ಮಾನ ವಿಮಾನವಿವ[8]ಱಿಲಿ
ನಿ[9]ರುತತಮ[9]ನೆಂದೆನಿಸಿ ಕೃತ್ಯಾಕೃತ್ಯಕೌಶಲವ ।
ವಿರಚಿಸುವ ಕಾಲದಲಿ [10]ವಿರಚಿಸ
ಲಱಿಯದತಿದರ್ಪಾತಿರೇಕೋ
ತ್ತರದಿ ಮಾಡಿದ ಕಾರ್ಯವೇನಹುದೆಂದನಾ ವಿದುರ[10] ॥೪೪॥

---

[1] ನುವರ (ಖ ಡ ಣ ನ ಬ) [2] ಚಾಂಡಾಲಯೋನಿಯೊಳರಸ ಕೇಳೆಂದ (ಚ) * ತ (ಟ ದ) [3] ನಾಪ್ತರನು ಬಿಸುಟಗ್ಗಳಿಸುವವನಹಿತರಲಿ ಸಖ್ಯಾವಳಿಯನೆಸಗುವನ (ಖ ಮ) [4] ಒಲಿಯದುದವೇ ಹೇಳ್ವವನ ಕೈ (ಚ), ಬಳಸುವವನೇಕಾಂತದಲ್ಲಿಯೆ (ಮ) [5] ಸುಳಿವವನು ಹಿತವಿಲ್ಲದಿಂಬುವನಿಳೆಯೊಳಗೆ ಮೂಢಾತ್ಮ ಚಿತ್ತೈಸೆಂದನಾ ವಿದುರ (ಮ) [6] ಗರಿದೆ (ಚ ಝ ಟ ಮ) [7] ನವನಾ ಧರೆ (ಬ) [8] ಮಾನವಮಾರ್ಗವಿದ (ಕ ಮ), ಮಾನಾಮಾನವಿದ (ಚ) [9] ರುಪಮಿತ (ಕ ಮ), ರತರೆತ (ಗ) [10] ಶೀತೋಷ್ಣವನುಭಯುವಡ್ಡೈಸಲದಱಿಂ ಪರಿಹರಿಸದಾ ಕಾರ್ಯವೆಸಗುವನವನೆ ಪಂಡಿತನು (ಕ ಮ)

ಕರೆಕರೆದು ಮೃಷ್ಟಾನ್ನವನು ಭೂ
ಸುರರಿಗೀವ [1]ಸವಾ[1]ಗ್ನಿಹೋತ್ರಾ
ಚರಿತ[2]ನನು[2] ವೇದಾಂತವೇದಿಯ[3]ನಾ[3] ಪತಿವ್ರತೆಯು ।
ಉರುತರದ ಮಾಸೋಪವಾಸಿಯ
ನಿರದೆ ಮಾಸಸಹಸ್ರಜೀವಿಯ
ನರಸ ಕೇಳ್ ವಂದಿಸುವರ್ಕೈ ತ್ರೈಮೂರುತಿಗಳೆಂದ ॥೪೫॥

ಬಿಸುಟು ಕಳೆವುದು [4]ನೀತಿ[4]ಶಾಸ್ತ್ರವ
ನುಸಿರದಾಚಾರಿಯನ ವೇದ
ಪ್ರಸರವಿಲ್ಲದ [5]ಋತ್ವಿಜನ ರಕ್ಷಿಸದ[5] ಭೂಭುಜನ ।
ಒಸೆಯದಬಲೆಯನೂರೊಳಾಡುವ
ಪಶುವ [6]ಕಾಯ್ವನ[6]ನಡವಿ[7]ಗುಱಿಯಹ
ನುಸಿಯನಾ[ಪಿತ]ನಿಂತಱುವರನು ರಾಯ[7] ಕೇಳೆಂದ ॥೪೬॥

ವ್ಯಸನವೇಳರ ಕಾಲುಕಣ್ಣಿಯ
ಹಸರದೊಳಗಳವಳಿದು [8]ಹೆಚ್ಚಿದ[8]
ವಿಷಯದಿಱುಬಿನೊ[9]ಳ[9]ದ್ದು ಮಾಯಾಮಯದ ತ್ರೋಹಿನಲಿ ।
[10]ಬ[10]ಸವಳಿದು ಷಡ್ವರ್ಗ[11]ದೆಡೆಯಲಿ[11]
ನುಸುಳುಗಂಡಿಯನೀಕ್ಷಿಸದೆ ತಾ
ಮಸದಲಿರುತಿಹುದುಚಿತವೇ ಭೂಪಾಲ ಕೇಳೆಂದ ॥೪೭॥

ಅತಿಬಲನ ಹಗೆಗೊಳ್ವನಿಹಪರ
ಗತಿ[12]ವಿಚಾ[12]ರವ ಮಱೆವ ಲೋಕ
ಸ್ಥಿತಿಯನುಲ್ಲಂಘಿಸುವ [13]ಮರ್ಮಜ್ಞನ[13] ವಿರೋಧಿಸುವ ।

---

[1] ವನ (ಗ) [2] ನಹ (ಕ ಮ) [3] ನುರಃ (ಜ ಡ ಣ ಯ ರ) [4] ಧರ್ಮ(ಖ ಝ ಟ ಬ), ವೇದ (ಗ ಡ) [5] ದ್ವಿಜನ ರಕ್ಷಿಸದಿರ್ಪ (ಗ ಜ ಡ ಪ ಯ) [6] ಕಾವವ (ಖ ಚ ಟ ಬ), ಕಾವನ (ಗ ರ ಡ), ಕೊಲುವವ (ಣ ಯ ರ) [7] ಗುಱಿಯು ನುಸಿಗದಾಯಿಗನನಿಂತಱುವರನು ರಾಯ (ಖ), ಯೊಳಹರ್ನಿಶೆಯೊಳಾಡು ನರನವೆಲೆ ಧೃತರಾಷ್ಟ್ರ (ಗ ಡ ಣ ಯ), ಯೊಳಗಿಹ ನಿಶಿಯೊಳಾಡುವನಾವನೇ ಧೃತರಾಷ್ಟ್ರ (ಜ ಯ), ಗುಱಿಯಹ ನುಸಿಯದಾಳ್ವನ ಬಿಡುವುದೈ ಭೂಪಾ (ಟ), ಯೊಳು ಹಮ್ಮಿಸದಲಾಡುವ ನಾಸ್ತಿಕರನೆಲೆ ಭೂಪ (ನ), ಗುಱಿಯಹ ನು ಯರಾಯಿವರಿಂತಱುವರನು ರಾಯ (ಬ) [8] ಬಹುವಿಧ (ಗ ಚ ಜ ಬ) [9] (ಖ ಮ), ಳೆ (ಗ) [10] ಜ (ಕ ಮ) [11] ವೀಥಿಯ (ಗ ಚ ಜ ನ ಬ) [12] ಓ ಭಾ (ಕ ಮ) [13] ಧರ್ಮಜ್ಞರ (ಕ, ಮ)

ವಿತತಭಾಷಿತನಪ್ಪ ತನ್ನಿಂ
ಗಿತವ ಪರರಾಯತವನಱಿಯದ
ಕ್ಷಿತಿ[1]ಪನವ[1] ಮೂಢಾತ್ಮನೈ ಧೃತರಾಷ್ಟ್ರ ಕೇಳೆಂದ ॥೪೮॥

ಬಲುಹಱಿದು ಕೋಪಿಸುವ ಬದುಕಿನ
ಬಳಿಯಱಿದು ಕೊಡುವಾ[2]ತ್ಮ[2]ಹಿತವನು
ತಿಳಿದು ನಿರ್ಮಳ[3]ನೆನಿಸಿ[3] ಮೇಲಣ ತಾಗುಬಾಗುಗಳ ।
ಹೊಲಬಱಿದು ಸುಖದುಃಖದಲಿ ಸಂ
ಚಲಿಸದಿಹ [4]ಗಂಗೆಯ ಮಡುವಿನಂ
ತೊ[4]ಳಗುದೋಱದೆ ನಡೆ[5]ವವನೆ ಭೂಪಾಲ ಕೇಳೆಂದ[5] ॥೪೯॥

ದಾನವಿಲ್ಲದ ವಿತ್ತ ಬಾಧಸ
ನ್ಮಾನವಿಲ್ಲದ ರಾಜ್ಯ ಬಲುಸುಯಿ
ದಾನವಿಲ್ಲದ ಸುದತಿ [6]ವಿದ್ವಾನಿ[6]ಲ್ಲದಾಸ್ಥಾನ ।
ಜ್ಞಾನವಿಲ್ಲದ ತಪವು ವೇದವಿ
ಧಾನವಿಲ್ಲದ ವಿಪ್ರ ಶರಸಂ
ಧಾನವಿಲ್ಲದ ಸಮರ ಮೆಱೆ[7]ಯದು[7] ರಾಯ ಕೇಳೆಂದ ॥೫೦॥

ದಿನವ ಬಂಜೆಯ ಮಾಡದಾವಗ
ವಿನಯಪರನಹ ದೈವಗುರುಪೂ
ಜನೆಯ ಬುಧಸೇವನೆಯ ಕಾಲೋಚಿತದ ವಿ[8]ವರಣವ[8] ।
ಮನನದಿಂ ಶ್ರವಣದಿ ನಿದಿಧ್ಯಾ
ಸನದಿ ದಿನವನು ಕಳೆವನಾ[9]ತ[9]ನು
ಮನುಜರೊಳಗುತ್ತಮನಲೈ ಭೂಪಾಲ ಕೇಳೆಂದ ॥೫೧॥

*ಸಲುವೆನೆಂದಂತಃಪುರಕೆ ಸಂ
ಚಲಿಸುವವನಾಪ್ತರನು ಬಿಸುಟ
ಗ್ಗಳಿಸುವವನಹಿತರೊಳು ಧರ್ಮವನುಳಿದಧರ್ಮವನು ।

---

[1] ಯೊಳಗೆ (ಕ ಗಾ ರ) [2] ತ (ಗ ಚ ಝ ರ) [3] ವೆನಿಪ (ಕ ಮ), ವೆನಿಸಿ (ಗ ಚ ಝ ರ ಡ ನ) [4] ನೆಱೆಗೂಢಸಂಧಿಯನೊ (ಕ ಮ) [5] ವುದನುನಯುವೆಂದನಾ ವಿದುರ (ಡ ನ ಪ ಯ ರ) [6] ಮಂತ್ರಿಗಳಿ (ಖ ಗ ಯ), ಸೂರಿಗಳಿ (ಡ ಪ ರ), ಧೀಮಾನಿ (ಡ ನ ಬ) ಪಂಡಿತನಿ (ಣ) [7] ವುದೆ (ಕ ಖ ಣ ಮ) [8] ತರಣದ (ಕ ಡ ಣ ಮ), ಹರಣವ (ಖ ಜ) [9] ವ (ಕ ಮ ಯ)

*ಈ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ

ಬಳಸುವವನೇಕಾಂತದಲ್ಲಿಗೆ
ಸುಳಿವವನು ಹಸಿವಿಲ್ಲದುಂಬವ
ನಿಳೆಯೊಳಗೆ ಮೂಢಾತ್ಮನೈ ಧೃತರಾಷ್ಟ್ರ ಕೇಳೆಂದ ||೫೨||

ಬುಧರೊಡನೆ ಹಗೆಗೊಳ್ವ ಬುಧರಂ
ನಿಧನವೈದಿಪ ಬುಧರ[1]ನೇಳಿ[1]ಪ
ಬುಧರ [2]ಜಱೆ[2]ದರೆ ನಲಿವ ಬುಧರಂ ಪೊಗಳುವರ ಪಳಿವ ।
ಬುಧರನಧಮರ ಮಾಳ್ಪ ಬುಧರಂ
ವಿಧಿಗೊಳಿಪ ಬುಧ[3]ರೆನಲು ಕನಲುವ[3]
ನಧಮಭೂ[4]ಪಂಗೆಂಟುವಿಧ[4]ವು ವಿನಾಶಕರವೆಂದ ||೫೩||

ಕುಸುಮ ಫಲ ತಾಂಬೂಲ ಗಂಧ
ಪ್ರಸರ [5]ಭೋಜನ ಗಮನ ನೆನಹಿಂ[5]
ದೆಸೆವ ಕಾರ್ಯದೊಳನಿಬರೊಡಗಿರಲೊಬ್ಬನೆಚ್ಚರಿಕೆ ।
ಎಸೆಯ[6]ಲ[6]ನಿತುವನೊಬ್ಬನೇ [7]ಭೋ
ಗಿಸುವಡ[7]ವನೀಪಾಲನೀತಿಗೆ
ಸಸಿನವೆನಿಸದು ರಾಯ ಚಿತ್ತೈಸೆಂದನಾ ವಿದುರ ||೫೪||

[8]ಕಳಿದ[8] ತರಣಿಯ ಕಿರಣದಲಿ ನಿ
ರ್ಮಳದ ಜಲದಲಿ ದುಗ್ಧಪಾನಂ
ಗಳಲಿ ವರಯುವತಿಯರ ಸಂಭೋ[9]ಗದಲಿ ಭೂಸುರರ[9] ।
ತಳಿತಹೋಮದ ಹೊಗೆಗಳಲಿ [10]ದಿನ
ಬಲದೊಳಾಯುಷ್ಯಾಭಿವೃದ್ಧಿಯ
ಬೆಳವಿಗೆಗಳಹವರಸ ಚಿತ್ತೈಸೆಂದನಾ ವಿದುರ[10] ||೫೫|| *

---

[1] ನಳಲ (ಗ ಜ ಡ ಣ ಪ) [2]ನೆಂ (ಕ ಮ) [3]ಗರ್ೞೆಯದವ ತಾ(ಝ ಬ) [4]ಪರಿಗೆಂ ಟುಗುಣ (ಗ) [5] ಮಜ್ಜನಭೋಜನದಲಂ (ಚ ಜ ಝ ಬ) [6] ಲಿ (ಝ ಟ.ದ ಬ ಯ) [7] ವಿರಚಿಸುವರ(ಚ ಜ ಬ), ಪರ್ಚಿಸುವುದ(ಟ ರ ದ), ವರ್ತಿಸುವುದ (ಯ) [8] ತಳಿತ (ಜ ಪ ಯ ), ಗಳಿತ (ನ) [9] ಗಾಂತರಂಗದಲ (ಗ ಯ) [10] ಸಂಚಲಿಸುವವಗಾ ಯುಷ್ಯವೃದ್ಧಿಯು ಬಲಿವುದೈ ದಿನದಿನದೊಳವನೀಪಾಲ ಕೇಳೆಂದ (ಗ ಡ ಣ ಯ)

* (ಖ.ಚ.ದ.) ಪ್ರತಿಗಳಲ್ಲಿ ೫೫ನೇ ಪದ್ಯವಿಲ್ಲ

ಎಳೆಯ ರವಿರಶ್ಮಿಯಲಿ [1]ಪ್ರೇತಾಂ
ಗಳದ[1] ಧೂಮ[2]ಜ್ವಾಲೆಯಲ[2] ಗಾ
ವಿಲವಯೋವೃದ್ಧೆಯರ ಸಂಭೋಗಾಂತರಂಗಳಲಿ ।
ಕೊಳಚೆನೀರಿನ ಬಳಕೆಯಲಿ ಕ
ತ್ತಲೆಯ [3]ದಧಿಭೋಜ[3]ನದಲಾಯುಷ
ಳಿದುಹೋ[4]ಹುದು[4] ದಿನದಿನ[5]ದೊಳ[5]ವನೀಶ ಕೇಳೆಂದ ॥೫೬॥

ನಾಗವಲ್ಲಿಯ ಹಿಂದುಮುಂದನು
ನೀಗಿ ಕಳೆಯದೆ ಚೂರ್ಣಪರ್ಣ
ತ್ಯಾಗವಿಲ್ಲದೆ ದಂತಧಾವನಪರ್ಣವನು ಸವಿದು ।
ಭೋಗಿಸುವನಮರೇಂದ್ರನಾಗಲಿ
ನಾಗಭೂಷಣನಾಗಲವನನು
ನೀಗಿ ಕಳೆವಳು ಭಾಗ್ಯವಧು ಭೂಪಾಲ ಕೇಳೆಂದ ॥೫೭॥

ಉದರವೊಂದುವಿಭಾಗ[6]ವದು ನಾ
ಲ್ಕ[6]ದಱೊಳನ್ನರಸಕ್ಕೆರಡು ಮೇ
ಲುದಕ[7]ವೊಂ[7]ದಾ ವಾಯುಸಂಚರಣೆಗಳಿಗೆಡೆಯಾಗಿ ।
ತುದಿಯಲೊಂದೇ ಮಾರ್ಗದಲಿ ತ
ಪ್ಪದೆ ನಡಸಲಾರೋಗ್ಯವಹುದೀ
ಹದನನಱಿ[8]ದಾರೋಗಿಸುವುದೆಲೆ ರಾಯ[8] ಕೇಳೆಂದ ॥೫೮॥

ಜನಜನಿತಮಲಮೂತ್ರ ಮೂಱಾ
ಱೆನಿಸುವುವು ರತಿಯೊಂದು ನಿಜಭೋ
ಜನವೆರಡು [9]ಸುಯಿಲೊಂದು ವರ[9]ತಾಂಬೂಲ ಹದಿನೈದು ।
ಇನಿತುವನು ತಪ್ಪದೆ ನಡಸಲಾ
ಜನಪಗಾರೋಗ್ಯಾತ್ಮಸುಖ ಸಂ
ಜನಿಸುವುದು [10]ದಿನದಿನದೊಳವನೀಪಾಲ[10] ಕೇಳೆಂದ ॥೫೯॥

---

[1]ಪ್ರೇತಸ್ಥಳದ (ಗ ಚ ಜ ಡ ಪ಼ ಯ) [2]ವ್ರಾತದಲಿ (ಗ ಚ ಎ ಡ ಣ ಪ ಯ) [3]ದಧ್ಯೋದ (ಕ ಮ) [4]ಗದೆ (ಕ ಮ) [5]ಕೆಯ (ಕ ಮ) [6]ನಾಲ್ಭಾಗ (ಗ ಜ ಣ ಪ ಯ) [7]ಕೊಂ (ಚ ಜ ಟ) [8]ದಾರೋಗಣೆಯ ಮಾಡರಸ (ಖ ಚ ಠ ಣ ದ ನ ಬ), ದು ಭೋಜನವ ಮಾಡುವುದರಸ (ಜ ಡ ಪ ಯ) [9]ನಿಶಿನಿದ್ರೆಯೆನೆ (ಕ), ಸುಪ್ತ್ಯೈಕವರ (ಗ ಡ ಯ) [10]ಸಂದೇಹವೇ ಧೃತರಾಷ್ಟ್ರ (ಖ), ದಿನಚರಿಯದಿಂದವನೀಶ (ಟ ರ಼ ದ ನ)

ನೆರೆದ ಸಚರಾಚರವಿದೆಲ್ಲವು
ನರರ ನಿಜಭೋಜನಕೆ ಜನಿಸಿದ
ವರಸ ಕೇಳಿದಜೊಳಗೆ ಭೋಜ್ಯಾಭೋಜ್ಯ[1]ವನು ತಿಳಿದು[1] ।
ಪರಿಹರಿಸಬಲ್ಲವರುಗಳು ಘನ
ತರದ ಸುಕೃತವನೈದುವರು ಭೂ
ವರರೊ[2]ಳಗೆ ಸಂದೇಹವೇ ಹೇಳೆಂದನಾವಿದುರ[2] ॥೬೦॥

ತುರಗಹೃದಯಧ್ವನಿಯ ಸಿಡಿಲಿನ
ಧರಧುರದ ಗರ್ಜನೆಯ ನಾರಿಯ
[3]ರಿರವ[3] ಪುರುಷನ ಭಾಗ್ಯದೇವತೆಯೊಲಿವ ಕಾಲವನು ।
ವರುಷದುದಯವ ಬಟಿನ ಬರವನು
ವಿರಚಿಸುವಡೆ ವಿಧಾತ್ರಗಳವ
ಲ್ಲರಸ ಕೇಳ್ ಮಾನವರಿಗಿದು ಗೋಚರಿಸುವುದೆ ಎಂದ ॥೬೧॥

ಬಡತನದ[4]ಲೊದಗಿದಡೆ ಹಗೆಯಾ
ದಡೆಯು ನಂಟನು[4] ನಂಟ ತಾನಾ
ದಡೆಯು ಬಂದ ವಿಪತ್ತಿನೊಳಗೆ ಪರಾಙ್ಮುಖನೆ ಆಗಿ ।
ನುಡಿಸದವನೇ ಹಗೆ ಶರೀರದೊ
ಳಡಸಿದಾ[5]ಮಯ[5]ಬಾಧೆಗಡವಿಯ
ಗಿಡುಮರಂಗಳು ರಕ್ಷಿಸವೆ ಹೇಳೆಂದನಾ ವಿದುರ ॥೬೨॥

ಕಾಲದೊಳಗೆ ವಸಂತ ವಿದ್ಯಾ
ಜಾಲದೊಳಗೆ ಕವಿತ್ವ [6]ಗಜ[6]ವೈ
ಹಾಳಿ[7]ಯಲಿ ದೇವೇಂದ್ರ ಮಿತ್ರಶ್ರೇಣಿಯಲಿ ವಾಣಿ[7] ।
ಭಾಳನೇತ್ರನು ದೈವದಲಿ ಬಿ
ಲ್ಲಾ[8]ಳಿನಲಿ ಮನ್ಮಥನು[8] ಧನದಲಿ
ಹೇಳಲೇನಭಿಮಾನವೇ ಧನವರಸ ಕೇಳೆಂದ ॥೬೩॥

---

[1] ವಸ್ತುಗಳ (ಗ), ಗಳನಱಿದು (ಣ) [2] ಳವನುತ್ತಮನರ್ರೈ ಧೃತರಾಷ್ಟ್ರ ಕೇಳೆಂದ (ಚ ಬ) [3] ರೆಱಿಕ (ಗ ಚ ಣ ಪ ಬ), ರೊಲವ (ಟ ದ ನ) [4] ದುಃಖದಲಿ ಶಾಂತಿಯು ನುಡಿಯ ನುಡಿದವ (ಗ) [5] ರುಜೆ (ಕ ಜ ರ ಮ) [6] ವರ (ನ) [7] ಯೊ ವೃತ್ತಶ್ರೇಣಿಯೊಳಗೆ ಸರಸ್ವತಾದೇವಿ (ಕ ಮ), ಯಲಿ ಮಿತ್ರಶ್ರೇಣಿಯೊಳ್ ಸರಸ್ವತೀದೇವಿ (ಚ ಡ ಬ), ಯಲಿ ದೇವೇಂದ್ರ ಸುರಶ್ರೇಣಿಯಲಿ ವಾಗ್ದೇವಿ (ಜ) ಯಲಿ ದೇವೇಂದ್ರ ಸತಿಯೊಳ್ ಸರಸ್ವತೀದೇವಿ (ಟ ಯ), ಯಲಿ ಗಜಬೇಟೆ ಮಿತ್ರ ಶ್ರೇಣಿಯಲಿ ವಾಣಿ (ನ) [8] ಳುತನದಲಿ ಮದನ (ಟ ದ)

[1]ಮುಂ[1]ದೆ ಗುರುವನು ಬಂಧುಜನವನು
[2]ಹಿಂದೆ ಕರ್ಮಾಂತ್ಯ[2]ದಲಿ ಸೇವಕ
ವೃಂದವನು ಕೊಂಡಾಡುವುದು ಸಾಹಿತ್ಯ[3]ಭಾವ[3]ವಿದು ।
ಹಿಂದೆ ಮುಂ[4]ದೆಂದೆಂದು[4] ನಿನ್ನಯ
ನಂದನರ ನಾರಿಯರ ಹೊಗಳುವು
ದಂದವೇ ಭೂಪಾಲ ಚಿತ್ತೈಸೆಂದನಾ ವಿದುರ ॥೬೪॥

ತುರಗದೆಡಬಲ ಗಜದ ಸಮ್ಮುಖ
ತರುಣಿಯರುಗಳ ಸರ್ವತೋಮುಖ
ಹಿರಿದು ದುರ್ಜನರಿರ್ದ ದೇಶವದೈದೆ ವ್ಯಾಘ್ರಮುಖ ।
ಭರದಿಸಾದೇಶವನು [5]ಬಿಟ್ಟರ
ವರಿಸದನ್ಯಗ್ರಾಮಗಮನಾಂ
ತರವನೈದು[5]ವುದಲ್ಲದಲ್ಲಿಹುದುಚಿತವಲ್ಲೆಂದ ॥೬೫॥

ಪಶುಗಳಂತ್ಯವನಂತ್ಯಜರು ಸುರ
ನಿಸರದಂತ್ಯವನಸುರ[6]ರೆ[6]ಚ್ಚಱಿ
ನುಸುರಿನಂತ್ಯವ ಚೋರ ನಿಜಗುಣದಂತ್ಯವನು ಮೃತ್ಯು ।
ಕೃಷಿ ವರುಷದಂತ್ಯವನು ಬಱಿನಾ
ಲಿಸಿ ಕವಿವವೊಲು ರಾಯ[7]ನಂ[7]ತ್ಯದ
[8]ದೆಸೆಯನಱಿದವುಕು[8]ವರಧಮನೃಪರ[9]ರಸ[9] ಕೇಳೆಂದ ॥೬೬॥

ಗುರುವಿರೋಧ ಮಹೀ[10]ಸುರರ[10] ಮಾ
ತ್ಸರಿಯ ದೈವದ್ರೋಹ ಗುಣಸಂ
ಹರಣ ಬಂಧುದ್ವೇಷವತ್ಯಾ[11]ಲೀಢ ದೀನತನ[11]

---

[1] ಹಿಂ (ಚ) [2] ಮುಂದೆ ಕಾಮ್ಯಾರ್ಥ (ಚ) [3] ಮಾರ್ಗ (ಗ ಛ ಜ ಡ ಪ ಯ) [4] ದಾವಾಗ (ಗ ರ ನ) [5] ಬಿಟ್ಟರವರಿಸದನ್ಯತ್ರ ಗಮನಾಂತರವ ಮಾಡು (ಗ ಡ ಪ), ಕಳದೇ ವರುಷದಲಿ ಸನ್ಯಾಸಗಮನಾಂತರವ ಮಾಡು (ಟ), ಬಿಟ್ಟರವರಿಸದನ್ಯಸ್ಥಳಕೆ ಗಮನಾಂತರವನೈದು (ಣ), ಬಿಟ್ಟರವರಿಸದಾರಣ್ಯದಲಿ ಗಮನಾಂತರವನೈದು (ವ) [6] ನೆ (ಖ ಜ) [7] ರಂ (ಗ ಡ ಣ ಪ ಯ) [8] ಹೆಸರ ನಱಿದವುಕು (ಕ ರ ಬ ಮ), ದೆಸೆಯು ಬಯಸು (ಗ ಜ ಣ ಪ ಯ), ಜಸವ ಬಯಸು (ನ) [9] ವನೀಶ (ಗ ಜ ಣ ನ ಪ ಯ) [10] ವಿಬುಧ (ಕ ಮ), ಶಬುಧ (ಬ) [11] ಕಾಂಕ್ಷೆ ದೀನತನ (ಚ), ಲೀಢ ಲೋಭತನ (ಜ), ಲೀಢ ಬಕವೃತ್ತಿ (ಯ)

ಶರಣಜನ[1]ದಂಡಿತ್ವ[1]ವೆಂದಿವೆ
ನರವರಿಸದಂಗೈಪ ಭೂಪನ
ಸಿರಿಗೆ [2]ಮೊಳೆಯದೆ ಕೇಡು ಚಿತ್ತೈಸೆಂದನಾ ವಿದುರ[2] ||೬೭||

ಬಲುಪ್ರಧಾನನ ವೈರ ಹಿತವಹ
ಲಲನೆಯರ ಮನದಳಲು ಹಗೆಯಲಿ
ಬಳಸುವಂತಸ್ಥತೆಯನಾಮಿಕರೊಡನೆ ಕೆಳೆಗೊಟ್ಟಿ ।
ಬಲದೊಡನೆ [3]ಹಗೆ ತನ್ನ ಸತ್ವದ[3]
ನೆಲೆಯನರಿಯದ [4]ದಾನಿಗಳ ಸಿರಿ[4]
ಸುಳಿವ ಗಾಳಿಗೆ ಮಲೆತ [5]ದೀಪವು ಕೇಳು ಧೃತರಾಷ್ಟ್ರ[5] ||೬೮||

ಹುಸಿ ಪರದ್ರೋಹವು ಪರಸ್ತ್ರೀ
ವ್ಯಸನ [6]ನಿಂದೆಯ[6]ಸೂಯೆ ಮಾನ್ಯ
ದ್ವಿಷತೆ ಪತಿತನ ಮೇಳವಾತ್ಮಸ್ತುತಿಯೆನಿಪ್ಪವನು ।
ಬಿಸುಟು [7]ತದ್ವಿಪರೀತದಲಿ ವ[7]
[8]ರ್ತಿಸುವನವನೇ[8] ರಾಯನಾತಗೆ
ವಸುಧೆಯೊಳಗೇಣಿಯಾವನ್ಯೆ ಭೂಪಾಲ ಕೇಳೆಂದ ||೬೯||

ಇದು ಹಿತಾಹಿತವಿದು ಶುಭೋದಯ
ವಿದು ಸಕಲಪುರುಷಾರ್ಥಸಾಧನ
ವಿದು ಸುಜನಸನ್ಮಾರ್ಗವಿದು ಸಂಸಾರವಿಪುಳಫಲ ।
ಇದು [9]ಸುಲಭವಿದು ದುರ್ಲಭವು ತಾ
ನಿದು[9] ಸುನಿಶ್ಚಯವೆಂಬ ಕಾರ್ಯದ
ಹದನನರಿದಾಚರಿ[10]ಸಬಲ್ಲವನವನೆ ಪಂಡಿತನು[10] ||೭೦||

---

[1] ಪಾಂಡಿತ್ಯ (ಖ ಜ ಟ ದ ನ ಬ) [2] ಮೂಡುಗು ಕೇಡು ನಿಮಿಷಕೆ ಭೂಪ ಕೇಳೆಂದ (ಗ ಚ ಡ ಣ), ಮೂಡುಗು ಮೃತ್ಯುದೇವತೆಯೆಂದನಾ ವಿದುರ (ಟ ದ) [3] ನಿರ್ಬಂಧ ಧರ್ಮದ (ಕ ಚ ರ ಮ), ನಿರ್ಬಂಧ ದೈವದ (ಜ ಣ ಪ ಯ) [4] ನೃಪನ ಬಾಳಿಕೆ (ಗ), ಭೂಪತಿಯ ಸಿರಿ (ಚ), ಮಾನವನ ಸಿರಿ (ಜ ಣ). [5] ದೀಪವು ರಾಯ ಕೇಳೆಂದ (ಖ ಜ ನ ಮ), ದೀಪಕೆ ಕೆಡುವುದೇನರಿದೆ (ಚ) [6] ಪೇಯುವ (ಕ ಖ ಬ ಮ) [7] ಸದ್ವರ್ತನೆಗಳಲಿ ವ (ಜ ಣ) [8] ರ್ತಿಸಲರಿವವನೆ (ಗ ಪ), ರ್ತಿಸಲರಿ ವವನೆ (ಟ ರ ದ) [9] ಸುಲಭವಿದುವಬಲ ಸಂಶಯವಿದು (ಗ ಡ), ಸುಬಲ ದುರ್ಬಲ ವಿದೇದಾಪ್ತದ (ಟ ಡ), ಸುಬಲವಿದು ದುರ್ಬಲವು ತಪ್ಪದು (ನ) [10] ಸುವನೆ ರಾಯ ಚಿತ್ತೈಸೆಂದನಾ ವಿದುರ (ಗ.ಪ), ಸುವುದು ಧೃತರಾಷ್ಟ್ರ ಕೇಳೆಂದ (ಝ ಟ. ರ.ದ.ನ)

ಶತ್ರುಕಾಲಸುದೇಶವರ್ಗ ಸು
ಮಿತ್ರರುದಯೋಪಾಯಕರಣ ಸು
[1]ಪಾ[1]ತ್ರವೆಂಬಿವು ಮೂಱುತೆಱನಾಗಿಪ್ಪವಿದಱೊಳಗೆ ।
[2]ಕ್ಷತ್ರಧರ್ಮವಿವೇಕ*ವೆಂಬಿ*ವ[2]
[3]ನೊತ್ತು[3]ಗೊಳಿಪನೆ ರಾಯನವಗೆ ಧ
ರಿತ್ರಿಯೊಳಗೆಣೆಯಾವನೈ ಭೂಪಾಲ ಕೇಳೆಂದ ॥೭೧॥

ಎಲ್ಲಿ ಸುಲಲಿತವಿದ್ಯೆ ಬಹು[4]ಧನ[4]
ವೆಲ್ಲಿ ಗಣಿಕಾನೀಕ ಮಣಿಗಣ
ವೆಲ್ಲಿ ಗಜಜಾತ್ಯಶ್ವ[5]ವೆಲ್ಲಿ[5] ವರೂಥಸಂದೋಹ ।
ಎಲ್ಲಿ [6]ಸುಭಟನಿಕಾಯ[6] ನೆರೆದಿಹು
ದಲ್ಲಿ ತನ್ನಾಧೀನ ಮಾಡಲು
ಬಲ್ಲ[7]ವನೆ ನೃಪನಾತಗಿದಿರಾರೀ ಧರಿತ್ರಿಯಲ[7] ॥೭೨॥

ದ್ವಾರವೊಂಬತ್ತಿಂದ್ರಿಯದ[8]ಹಂ
ಕಾ[8]ರಕರಣಚತುಷ್ಟಯಂಗಳ
ಸಾರಭೂತಾಳಿಗಳ ಸುಳುವಿನ ಪಂಚವಾಯುಗಳ ।
ಹೋರಟೆಗಳಲಿ [9]ಬಳಲಿ ಜೀವನ[9]
ಧೀರನಹವೊಲು ಪಾಂಡುಪುತ್ರರ
ಕೌರವರ ಬೇಳಂಬದಲಿ ಬೆಂಡಾದೆ ನೀನೆಂದ ॥೭೩॥

ಮತ್ತನತಿಶ್ರಾಂತನು ಪ್ರಮತ್ತೋ
ನ್ಮತ್ತನತಿಕುಪಿತಾನನನು ಚಲ
ಚಿತ್ತ[10]ನತಿ[10]ಕಾಮುಕನು ಲುಬ್ಧನು [11]ಶೂರನೆಂಬವನು[11] ।
ಕ್ಷುತ್ತು[12]ಘನವಾಗುಳ್ಳನಿಂತೀ[12]
ಹತ್ತುಜನವಾವಾಗ ಧರ್ಮದ
ತತ್ತ್ವವಣಿಗಳನಱಿ[13]ಯ[13]ರೈ ಧೃತರಾಷ್ಟ್ರ ಕೇಳೆಂದ ॥೭೪॥

---

[1] ಮಿ (ಕ ಮ), ಸೂ (ಠ ದ) [2] ಗಾತ್ರವಿಡಿದಿಹವೋಲು ಸಕಲದಿ (ಚ), *ವೆನಿಪ (ಗ ಜ ಡ ಪ), ವೆನಿಸಿ (ಟ ದ ಮ) [3] ಯೋತ್ರ(ಕ ರ ಬ ಮ), ನೊತ್ತಿ (ಗ), ಮಿತ್ರ (ಚ), ಗೋತ್ರ (ಜ), ಹುತ (ಟ ದ) [4] ಗುಣ (ಕ ಬ ಮ) [5]ಸುಭಟ (ಟ) [6]ವಸ್ತುವಪೂರ್ವ (ಟ ದ) [7] ವನೆ ನೃಪನಾತಗಿದಿರಾರ್ಕೈ ಧರಿತ್ರಿಯಲಿ (ಗ ಜ ಡ ಣ ಪ), ವೆಂಗಿದಿರಾವನೈ ಭೂಪಾಲ ಕೇಳೆಂದ (ಟ ರ ದ ನ) [8] ಸಂಸಾ (ಚ) [9] ತೊಳಲಿಯುನುದಿನ (ಚ) [10] ನುರು (ಚ ಝ ರ ಬ) [11] ಮದ್ಯಪಾನಿಗಳು (ಚ), ರೋಗಿಯೆಂಬುವನು (ಜ ಣ) [12] ಮಿಗಿಲಾಗುಳಿಕೆಯಿಂತೀ (ಕ ಮ) [13] ವ (ಗ ಡ ಪ)

ದಾನವಿಷ್ಣಾಪೂ[1]ರ್ತ[1] ವಿನಯುಸ
ಮಾನ ದೇವಾರ್ಚನೆ ಮಹೀಸುರ
ಧೇನುಸಂತರ್ಪಣ [2]ಸದಾ[2]ತಿಥಿಪೂಜೆ ಗುರುಭಕ್ತಿ ।
ಧ್ಯಾನ ದೀನಾನಾಥಬಂಧುವಿ
ತಾನ ಶರಣಾಗತಸುರ[3]ಕ್ಷಾ
ಸ್ನಾನತೀರ್ಥಂಗಳನು[3] ಮಾಡಲು ಬೇಹುದವನಿಪರು ‖೨೫‖

ಧರೆಯೊಳೀ ಹೊತ್ತಿನಲಿ ನಿನಗೈ
ಶ್ವರಿಯದಲಿ ಮಕ್ಕಳಲಿ ಖಂಡೆಯ
ಸಿರಿಯಲೊಡಹುಟ್ಟಿದ[4]ರು[4] ಸಪ್ತಾಂಗದಲಿ ಸತಿಯರಲಿ ।
ಗುರು ಪಿ[5]ತಾಮಹ[5] ಬಂಧುಜನ ಮಿ
ತ್ರರಲದಾವುದು ಕೊರತೆ ಕೌಂತೇ
ಯರ[6]ನು ನೀ ನೆರವಿಗರಮಾಡುವುದುಚಿತವಲ್ಲೆಂದ[6] ‖೨೬‖

ಉಭಯಕುಲ[7]ಶುದ್ಧಿಯಲಿ[7] ಹೆಚ್ಚಿದ
ವಿಭವದಲಿ [8]ವಿಕ್ರಮ[8]ದಲಧಿಕ
ಪ್ರಭೆಗಳಲಿ ಸತ್ಯದಲಿ ಸಾಹಿತ್ಯದಲಿ ವಿನಯದಲಿ ।
ಅಭವನಂಘ್ರಿಯ ಸೇವೆಯಲಿ [9]ಹರಿ
ನಿ[9]ಭನೆನಿಸಿ [10]ಮೆರೆವ[10]ವನು ರಾಜ್ಯಕೆ
ವಿಭುವೆನಿಸುವನು ರಾಯ ಚಿತ್ತೈಸೆಂದನಾ ವಿದುರ ‖೨೭‖

ವೇಸಿಯಹ ಪರಿಯಂಕದೆಡೆಯಲಿ
ದಾಸಿಯಹ ಪರಿಚರಿಯದಲಿ ನಿ
ರ್ದೋಷಿಯಹ ಪತಿಭಕ್ತಿಯಲಿ [11]ಮೋಹದಲಿ ತಾಯೆ[11]ನಿಸಿ ।
[12]ಏಸು[12]ಕಾರ್ಯಕೆ ಮಂತ್ರಿಯೆನಿಸುವ
ವೈಸಿರಿಯನುಳ್ಳವಳು ರಾಣೀ
ವಾಸವೆಂದೆನಿಸು[13]ವಳಲ್ರೈ ಭೂಪಾಲ ಕೇಳೆಂದ[13] ‖೨೮‖

---

[1] ರ್ತಿ (ಖ ಚ ಝ ಣ ನ ಪ) [2] ಮಹಾ (ಕ ಖ ಟ ಣ ಬ ಮ) [3] ಕ್ಷ ಸ್ನಾನ ಧರ್ಮಾದಿಗಳ (ಚ), ಕ್ಷ ಸ್ನಾನ ತೀರ್ಥಂಗಳನು (ಜ ಡ ಣ ಪ), ಕ್ಷ ನವೀನ ತೀರ್ಥಂಗಳನು (ನ) [4] ರ (ಚ ಜ ಝ ಪ) [5] ತರು ಬಹು (ಗ ಜ ಡ ಣ ಪ) [6] ನೆರವಿಗರ ಮಾಡುವರೆ ಧೃತರಾಷ್ಟ್ರ ಕೇಳೆಂದ (ಖ ಗ ಚ ಜ ಡ ಪ ಬ) [7] ಶುದ್ಧದಲಿ (ಚ ಟ ನ ಮ), ಮಧ್ಯದಲಿ (ಜ) [8] ವಿಗ್ರಹ (ಕ ಖ ಚ ಣ ಬ ಮ) [9] ಸನ್ನಿ (ಕ ಖ ಮ) [10] ಬದುಕು (ಗ ಚ ಡ ಣ) [11] ವಿನಯದಲಿ ತಾನೆ (ಜ) [12] ಲೇಸು (ಖ ಚ ಜ ಡ ತ ನ ಪ) [13] ವಳು ಚಿತ್ತೈಸೆಂದನಾ ವಿದುರ (ಗ ಡ ಪ), ವಳಲ್ರೈ ಧೃತರಾಷ್ಟ್ರ ಕೇಳೆಂದ (ಖ ಜ ಝ ಟ ದ ನ).

ತಂದೆತಾಯಿಗಳಾಜ್ಞೆಯನು ಸಾ
ನಂದದಲಿ ಪಾಲಿಸುತ [1]ಮದ[1]ವನು
ಮುಂದುಗೆಡಿ[2]ಸಿ ಸು[2]ಧರ್ಮದಲಿ ರಾಜ್ಯವನು [3]ಪಾಲಿ[3]ಸುತ ।
ಬಂಧು[4]ಬಳಗವ[4] ಸಲಹಿ ಭೂಸುರ
ವೃಂದವನು [5]ನೆಱೆ ರಕ್ಷಿಸುವ[5] ಮಗ
ನೆಂದೆನಿಸುವನು ರಾಯ ಚಿತ್ತೈಸೆಂದನಾ ವಿದುರ ॥೭೯॥

ಇಹಪರದ ಸುಖಸಂಗತಿಯ ಸಂ
ಗ್ರಹಿಸಿ ವೇದಾಚಾರದಲಿ ಸ
ನ್ನಿಹಿತನಾಗಿ ಸಮಸ್ತಕಲೆಯಲಭಿಜ್ಞನೆಂದೆನಿಸಿ ।
ಅಹಿತಕುಲವನು ಸಮರದಲಿ ನಿ
ರ್ವಹಿಸಿ ಶರಣಾಗತರ ಪಾಲಿಸು
ತಿಹ[6]ಡ[6]ವನು ಮಗನೆಂದೆನಿಸುವನು ಭೂಪ ಕೇಳೆಂದ ॥೮೦॥

ಇಂದ್ರಿಯವನೊಡೆ[7]ತುಳಿದು[7] ಕರ್ಮದ
ಬಂದಿಯ[8]ನು ತಲೆಬಳಿಚಿ[8] ವಿಷಯದ
ದಂದುಗವನೀಡಾಡಿ ಮಾಯಾಪಾಶವನು ಹಱಿದು ।
[9]ದ್ವಂದ್ವವಿರಹಿತನಾಗಿ ವಿಶ್ವದೊ[9]
ಳೊಂದಿ ಮಱೆಯಲು ಬಲ್ಲ[10]ವನು[10] ಗುರು
ವೆಂದೆನಿಸುವನು ರಾಯ ಚಿತ್ತೈಸೆಂದನಾ ವಿದುರ ॥೮೧॥

ಒಡಲೊಡವೆ ಮೊದಲಾದುದೆಲ್ಲವ
ತಡೆಯದೊಪ್ಪಿಸಿ ಗುರುವಿನಂಘ್ರಿಯ
ಹಿಡಿದು ಭಜಿಸುತ ಕೊಟ್ಟ ನೇಮಗ[11]ಳಾವುವನಿತುವನು[11] ।
[12]ಬಿಡದ[12] ಮಾಱುತ್ತರವನವರಿಗೆ
ಕೊಡದೆ ಭಯಭಕ್ತಿಯಲಿ ತಪ್ಪದೆ
[13]ನಡೆಯ[13]ಬಲ್ಲವನವನೆ ಶಿಷ್ಯನು ರಾಯ ಕೇಳೆಂದ ॥೮೨॥

---

[1] ಪದ (ಕ ಮ), ಮತ (ಜ) [2] ಸುತ (ಖ ಗ ಚ ದ ಪ) [3] ರಕ್ಷಿ (ಖ ಡ ಣ ಪ) [4] ವರ್ಗವ (ಗ ಚ ಡ ಪ), ಜನವನು (ತ) [5] ನೆಱೆ ಮೇಳವಡೆವ (ಖ ಝ ತ ಬ), ಸತ್ಕರಿಸಿದವ (ಜ) ನೆಱೆ ಸಲಹುವವ (ಪ) [6] ನ (ಗ ಚ ಜ ಡ ಪ ಬ) [7]ಮೆಟ್ಟಿ (ಖ) [8] ಲ ತಲೆಬಳಿಚಿ (ಕ ಖ ಗ ಚ ಟ ದ ನ), ನು ನೆಱೆ ಕಳಚಿ (ಜ) [9]ದ್ವಂದದಲಿ ಹಸನಾಗಿ ವಿಷಯದೊ (ಕ ಮ), ಬಂಧವಿರಹಿತನಾಗಿ ವಿಶ್ವದೊ (ಗ), ಸಂದವಿರಹಿತನಾಗಿ ವಿಶ್ವದೊ (ಟ ದ) [10] ಡವ (ಖ ಪ), ವನೆ (ಗ ಡ ಬ) [11] ಳನಿತುವನು ಬಿಡದೆ (ರ), ಳೆನಿತಾವನಿತುವನು (ಣ) [12] ಒಡನೆ (ರ) [13] ನಡಸ (ರ ಣ).

[1]ಯು[1]ಕುತಿವಿದರುಗಳೆಣಗಿ ವಿದ್ಯಾ
ಧಿಕರೆನಿಸಿ ಸಮಬುದ್ಧಿಗಳ ನಾ
ಟಕವ ನಟಿಸುತ ಪರ[2]ಮತತ್ತ್ವಜ್ಞಾನಪರರಾಗಿ[2] ।
ಸಕಲಕಲೆಯೊಲಭಿಜ್ಞರಹ ಧಾ
ರ್ಮಿಕರು ಪರಪುರುಷಾರ್ಥಿಗಳು ಸ್ವೈ
ದಿಕರಲೇ ವಿದ್ವಾಂಸರೆನಿಸುವರರಸ ಕೇಳೆಂದ ॥೪೩॥

ದಂಡನೀತಿ ಸ್ಮಾರ್ತ[3]ಶೌಚೋ[3]
ದ್ದಂಡ [4]ವೇದಾಧ್ಯಯನ[4]ನಿಪುಣನ
ಪಂಡಿತಪ್ರಿಯ ಶಾಂತಿಪೌಷ್ಟಿಕಕರ್ಮ[5]ದೇಶಿಕನ[5] ।
ಚಂಡದೈವಜ್ಞನ[6]ನು ನಿಜ[6]ಗುಣ
[7]ಮಂಡನನು[7] ಬಹುಶಾಸ್ತ್ರ[8]ಪರನನು[8]
ಪಂಡಿತನನು ಪುರೋಹಿತನ ಮಾಡರಸ ಕೇಳೆಂದ ॥೪೪॥

ಸ್ಥೂಲಸೂಕ್ಷ್ಮಕೃತಜ್ಞನು[9]ತ್ಸವ[9]
ಶೀಲನಕ್ರೋ[10]ಧಿಯನು ದೀರ್ಘ[10]ವಿ
ಶಾಲಸೂ[11]ತ್ರಿಯ[11] ವೃದ್ಧ[12]ಸೇವಿಯ[12] ಸತ್ಯವಾಕ್ಶುಚಿಯ ।
ಕಾಲ[13]ವೇದಿ[13]ವಿನೀತ[14]*ನವ್ಯಸ
ನಾಳಿ ಸೂರಿ*ರಹಸ್ಯ ಸತ್ಕೃತಿ[14]
[15]ಪಾ[15]ಲನಾನ್ವಿತ ಮಂತ್ರಿಯುಂಟೇ ರಾಯ ನಿನಗೆಂದ ॥೪೫॥

ತುರಗಗಜಭಟರಳವಡುವ ಸಂ
ಗರಮಹೋತ್ಸಾಹನ ಜಿತಶ್ರಮ
ನರಿಕಟಕಭೇ[16]ದಕನ[16] ನಾನಾಯುಧವಿಶಾರದನ ।

---

[1] ಮು (ಕ ಣ ಮ) [2] ಗುಣಸ್ತುತಿ ಎಂದ್ಯೆಗಳನುಳಿದು (ಚ) [3] ಶ್ರೋತೋ (ಜ ಣ ನ ಪ) [4] ಥರ್ವಾಂಗಿರಸ (ಕ ಚ ಮ), ಸ್ವರ್ವಾಂಗದಲಿ (ಗ ಜ ನ ಪ) [5] ದಿಯಧಿಕನ (ಕ ಮ), ವೇದಿಕನ (ಖ ಣ), ವಿಸ್ತರವ (ಗ ಬ) [6] ನಧಿಕ (ಕ ಮ), ನುದಿತ (ಖ ಝ), ನು ನುತ (ಚ) [7] ಪಂಡಿತನ (ಗ ಜ ಡ ನ ಪ), ಮಂಡಲನ (ಚ) [8] ಪಠನಾ (ಗ ಬ), ವಿದನನು (ಚ ಡ ಪ), ಪಾರಕ (ನ) [9] ತ್ತಮ (ಗ ಜ ಡ ಣ ಪ) [10] ಧಿಯನ ದೀರ್ಘ (ಖ), ಧಕನ ಧೀರ (ಗ ಡ ಣ ಪ), ಧನನು ಧೀರ (ಜ) [11] ತ್ರನ (ಗ ಜ ಡ ಣ ಪ) [12] ಸೇವಕ (ಕ ಖ ಮ), ಸೇವೆಯ (ಚ ಜ ಡ ಬ ಯ) [13] ಭೀತ (ಕ ಖ ಬ ಮ), ಭೇದಿ (ಚ ಝ ನ) [14] ರೂಪು ವಿಶಾಲನುಸ್ಮಿತವದನ ವಿಶ್ರುತ (ಚ), *ಸತ್ಯಸನಾಳಿಸೂರಿ (ಕ ಝ ಮ), ನವ್ಯಸನಾಳಿಶೂರ (ಜ ಡ ಣ ಪ) [15] ಲೋ (ಕ,ಖ ಬ ಮ) [16] ದಿಯನು (ಜ ಡ ಣ ನ ಪ)

ಭರಿತಧೈರ್ಯನ ಪತಿಹಿತನ [1]ಸಂ
ಗರಸದಾರನ[1]ನೂರ್ಧ್ವರೋಮನ
ನಿರದೆ ಸೇನಾಪತಿಯ ಮಾಡುವುದರಸ ಕೇಳೆಂದ ॥೮೬॥

[2]ತಿಳಿದವನ ಮತಿವಿದನ ಭಾಷಾ
ವಳಿಲಿಪಿಜ್ಞನ ಸಾಕ್ಷರನ[2] ಮಂ
ಡಳಿಕಸಾವಂತರ ವಿಶೇಷದಲವ[3]ಸರವ[3]ನರಿದು ।
ಸಲೆ ಕರೆವ ಕಳುಹಿಸುವ ನಿಲಿಸುವ
ಬಲುಹನುಳ್ಳವ ಸುಕರ[4]ದುಷ್ಕರ
ಕಲಿತವಾರ್ತನ[4] ಸಂಧಿ ವಿಗ್ರಹಿಯೆನಿಸಬೇಕೆಂದ ॥೮೭॥

ವಸನ ಮಣಿಗಣ [5]ಲೋಹ[5] ಕಾಂಚನ
ವಿಷಯಭೇದವ [6]ಬಲ್ಲ[6] ಕೊಟ್ಟುದ
ನಸಿಯಲೀಯದೆ ತಾನು ಭಕ್ಷಿಸದಹಿನಿಧಾನವನು ।
ಒಸೆದು ಕಾದಿಪ್ಪಂತೆ [7]ಕಾದಿಹ[7]
ಹುಸಿಯದಾಪ್ತನ ಬಹುಕುಟುಂಬ
ವ್ಯಸನವುಳ್ಳನ ಮಾಳ್ಪುದೈ ಭಂಡಾರರಕ್ಷಕನ ॥೮೮॥

ಮನವಚನಕಾಯದಲಿ ದಾತಾ
ರನ ಹಿತವನುಳ್ಳನ ವಿನೀತನ
ವಿನುತವನಿತಾವಿಮುಖನನು [8]ನಿಷ್ಕಳಿತರೋಷಕನ[8] ।
ಮುನಿವರರ ಬುದ್ಧಿಯಲಿ ಸಿಲುಕದ
ವನ[9]ನಶೇಷಕಳಾಪ್ರವೀಣನ[9]
ಜನಪ [10]ಚಿತ್ತೈಸುವುದಲ್ಲೈ[10] ತಾಂಬೂಲಧಾರಕನ ॥೮೯॥

ಪಿತೃಪಿತಾಮಹಸೂಪಶಾಸ್ತ್ರಾ
[11]ಗತನ[11] ಕೈಕರಣೆಗಳಲಧಿಕನ
ನತಿಶುಚಿಯ [12]ಸಾಧಕನ[12]ನಕ್ರೋಧಿಯನನಾಲಸನ ।

---

[1] ಸಾಗರನುದಾರನ (ಖ ಬ), ನಾಪ್ತರ ಸದಾರನ (ಗ ಜ ಡ ನ), ಕಾಹುರದ ಲಧಿಕನ (ಚ) [2] ಕುಲವನುಳ್ಳವನಧಿಕಭಾಷಾವಳಿಯ ಸಾಕಾರತನ ವರ (ಚ) [3] ರವರ (ಜ ಣ ಪ) [4] ದುರಿತವ ಕಳೆವನಾತನ (ಚ) [5] ನಿವಹ (ನ) [6] ನರಿವ (ನ ಪ) [7] ಕಾರ್ಯವ (ಗ ಜ ಡ) [8] ನಿಶ್ಚಲ ನಿರೋಧಕನ (ಜ), ನಿರ್ಮಳಿತರೋಷಕನ (ಮ) [9] ನಿಜಾಪ್ತನ ನಿರತಷಿದ್ಯನ (ಜ ಣ ಪ) [10] ತಿಯೆ ಚಿತ್ತೈಸುವುದು (ಚ ಡ ನ ಪ) [11] ಯುತನ (ಕ ಟ ದ ಪ ಮ), ನ್ವಿತನ (ಜ ಣ), ಯತದ (ನ) [12] ಸಂದ್ರುಗನ (ಕ ಬ ಮ)

[1]ಪತಿಹಿ[1]ತನ ಷಡುರಸವಿಶೇ[2]ಷಾ
ಯ[2]ತನನಿತರಾಲಯವಿದೂರನ
ಪತಿಕರಿಸುವುದು ಸೂಪಕಾರತೆಗರಸ ಕೇಳೆಂದ ॥೯೦॥

[3]ನಿಶಿತ[3]ಪರಿಮಳಮೋದ[4]ದಿಂ ಮೋ
ದಿಸಿ ಸು[4]ಗಂಧದ್ರವ್ಯದಲಿ ಬಂ
ದಿಸಿದ ಜೀವನ ಜೀವ ತನ್ನಯ ಜೀವನವೆಯೆಂದು ।
ವಸುಮತೀ[5]ಶರಿ[5]ಗಿತ್ತು ತಾ ಭೋ
ಗಿಸ[6]ದ ಬಳಸದ[6] ದುರ್ಹೃದರ ತೊಲ
ಗಿಸುವವನೆ ಪಾನೀಯಧಾರಕನರಸ ಕೇಳೆಂದ ॥೯೧॥

ಉನ್ನತನ ರೂಪಾಧಿಕನ ಸಂ
[7]ಪನ್ನ[7]ದಕ್ಷನ[8]ನ[8]ನ್ಯರೆನ್ನವ
ರೆನ್ನದ[9]ನ ಪರ[9]ರಿಂಗಿತಾಕಾರಪ್ರಭೇದಕನ ।
ಮನ್ನಣೆಗೆ ಬೆರೆಯದನನಾಪ್ತನ
ನನ್ಯಕಾರ್ಯಜಿತಶ್ರಮನ [10]ಸಂ[10]
ಪನ್ನಪಡಿಹಾಱ[11]ಕನ[11] ಮಾಡುವುದರಸ ಕೇಳೆಂದ ॥೯೨॥

ಪಲಿತಕಾಯ ಕುರೂಪಿಯನು ನಿ
ರ್ಮಳನ ಲೋಭಿಯ ಸಾವಧಾನಿಯ
ಸಲೆ ಜಿತೇಂದ್ರಿಯನಿಂಗಿತಾಕಾರಪ್ರಭೇದಕನ ।
ಕಲಿಮ[12]ಲಿನನನ[12]ಶುಚಿಯನಬಲಾ
ವಳಿಯ ಸುಯಿದಾನದಲಿ [13]ನಿಲಿಸುವು[13]
ದಿಳೆಯೊಳಗ್ಗದ [14]ಜಾಣರಾದವರರಸ[14] ಕೇಳೆಂದ ॥೯೩॥

---

1 ಮತಿಯು (ಜ) 2 ಷಜ್ಞ (ಖ ನ ಬ), ಷೋಚಿ (ಚ ಢ), ಷಾನ್ವಿ (ಪ) 3 ಎಸವ (ಗ) 4 ದಲ ಮೋದಿಸಿದ (ಗ), ರಾವೋದಿಸಿದ (ಜ) 5 ಶಂ (ಗ) 6 ದೆ ಬಳಸದೆ (ಖ ಗ ಬ) 7 ಪೂರ್ಣ (ಕ ಗ ಟ ದ ಬ ಮ) 8 ರ (ಕ ಮ) 9 ವರವ (ದ) 10 ಪ್ರತಿ (ಕ ಖ ಮ) 11 ನನು (ಕ ಣ ಜ ಮ) 12 ನದ ಕಡು (ಗ ದ) ನನ ಕಡು (ಜ ಡ ಣ) 13 ಮಾಡುವು (ಗ ಢ ನ ಪ) 14 ರಾಜರಭಿಮತ ವರಸ (ಚ), ಜಾಣತನವಲೆ ರಾಯ (ಜ ಣ)

ಗಾಯದಲಿ ಮೇಣ್ [1]ಚೊಕ್ಕೆ[1]ಯದಲಡು
[2]ಪಾಯಿಗಳಲುಪಕಾಯುದೊಳಗೆ ನ
ವಾಯಿಗಳ ಬಿನ್ನಾಣದಲಿ ಬಳಿಸಂದು[2] ಬೇಸಱಿದೆ ।
ಸ್ಥಾಯಿಯಲಿ ಸಂಚಾರದಲಿ ಸವು
ಗೈಯೆನಿಸಿ ನಾನಾವಿನೋದದ
ದಾಯವಱಿವವನವನೆ ಮಲ್ಲನು ರಾಯ ಕೇಳೆಂದ ॥೯೪॥

ಗ್ರಾಮಮೂಱಱ ಸಂಚರಣೆಗಳ
ಸೀಮೆಯಲಿ ಸರಿಗಮಪ[3]ಧನಿಗಳ[3]
ನೇಮದಪ್ಪದೆ ಹರಣಭರಣವ [4]ಹೆಂಪುತಿರು[4]ಪುಗಳ ।
ಕೋಮಲಿತ ಶಾರೀರ ಹೃದಯದ
ರಾಮಣೀಯಕ ರಚನೆಗಳಲಿ ಸ
ನಾಮನೆನಿಸುವನವನೆ ಗಾಯಕನರಸ ಕೇಳೆಂದ ॥೯೫॥

ಎಡಬಲನನಾರೈವುತೊಡೆಯನ
ಬಿಡದೆ ನೋಡುತ ಮಕ್ಷಿಕಂಗಳ
ಗಡಣವನು [5]ಸೂಸುತ್ತ ಕಿಗ್ಗಣ್ಣಿಕ್ಕಿ[5] ಕೆಲಬಲನ ।
[6]ಜಡಿದು ನೋಡು[6]ತ ಸ್ವಾಮಿಕಾರ್ಯಕೆ
[7]ಯೆಡೆಯೆನಿಸದಾವಾಗ[7] ಸೇವೆಗೆ
[8]ಸೆಡೆಯದವನೇ[8] ಚಮರಧಾರಕನರಸ ಕೇಳೆಂದ ॥೯೬॥

[9]ಕುಳಿತೆ[9]ವರನೀಕ್ಷಿಸುತ ಬಟ್ಟೆಯ
ಮೆಳೆಮರಂಗಳ ಹೊಯ್ಲ ತಪ್ಪಿಸಿ
ನೆಳಲ[10]ನೆಸಗುವ[10] ವೇಗಗತಿ ಸಾಮಾನ್ಯಗತಿಗಳಲಿ ।
[11]ಬಳಿವಿಡಿದು ಭೂಭುಜರ[11] ಯಾನಂ
[12]ಗಳೊಳಗಳುಕದೆ[12] ಡಗೆಯ ಸೈರಿಸಿ
ಬಳಸುವವನೇ ಛತ್ರಧಾರಕನರಸ ಕೇಳೆಂದ ॥೯೭॥

---

[1] ಚೋಖೆ (ಕ ರ ಣ ಪ ಮ) [2] ಪಾಯದಂಡೆಯಲಗಡಿಯೊಳಗುಪಕಾಯದೊಳಗೆ ನವಾಯಿಗಳ ಬಿನ್ನಣದಿ (ಗ ಬ) [3] ಧಾನಿಸ (ಚ) [4] ಹೆಂಪುತಂ (ಗ), ಯಿಂಪುಸೊಂ (ಜ ಣ) [5] ಕೆದಱುಸುತ ಕಿಡಿಗಣ್ಣಿಂದ (ಜ) [6] ಬಿಡದೆ ನೂಕು (ಖ) [7] ಕಡೆಯೆನಿಸುತಶ್ರಾಂತ (ಖ), ಕಡೆಯೆನಿಸುತಾವಾಗ (ಚ), ನಡೆಯೆನಿಸುತಾವಾಗ (ಜ), ತಡೆಯೆನಿಸದಾವಾಗ (ಝ ಬ) [8] ಬಿಡದೆ ಮಾಳ್ಪನೆ (ಚ), ಸೆಡೆಯದಿಹನೇ (ಜ) [9] ಬಲದ(ಕ ಮ) [10] ನಿಟ್ಟಿಸಿ (ಗ ಡ ಪ), ನಟಿಸುತ (ಚ ಝ ನ ಬ), ನೀಕ್ಷಿಸಿ (ಜ) [11] ಬಲುಹಿನಲಿ ಭೂಸುರರ (ಕ ಮ) [12] ಗಳನು ತಪ್ಪಿಸಿ (ಕ ಮ), ಗಳಲಿ ಸಿಕ್ಕದೆ (ಜ ಬ)

ಹರುಷದಲಿ ನಿಜಜನನಿ ಗರ್ಭವ
ಧರಿಸಿ ಕೊಂಡಾಡುವವೊಲುತ್ತಮ
ಪುರುಷ[1]ರಂ[1]ತರ್ಯಾಮಿಯನು ತಾ[2]ಳ್ವಂ[2]ತೆ ಭೂಭುಜರ ।
ಧರಿಸಿ ಸುಖಸಂಗತಿ[3]ಯಲುಱ[3] ಸಂ
ಚರಿ[4]ಸಿಯಾ[4]ಳ್ದನ ಹಾನಿವೃದ್ಧಿಯ
ಲಿರಲು [5]ಬೆಸದವರೆನಿಸುವರು[5] ಭೂಪಾಲ ಕೇಳೆಂದ ॥೯೮॥

ಹಿಂದೆ ಮಾಡಿದ ಸುಕೃತಫಲ[6]ವನು[6]
ತಂದು [7]ತೋ[7]ಱುವವೋಲು ನಾನಾ
ಚಂದದಾಪತ್ತಿನಲಿ ಹರಿ ನಿಜ[8]ಭಕ್ತಸಂತತಿಯ[8] ।
ಮುಂ[9]ದೆ ನಿಲುವ[9]ವೊಲವನಿಪಾಲರ
ದಂದುಗದ ಹೊತ್ತಿನಲಿ ಗಜಹಯ
ವೃಂದವನು ಚಾಚುವನು ವಾಹಕನರಸ ಕೇಳೆಂದ ॥೯೯॥

[10]ಪರ್ಬತ[10]ವನೊಡೆ[11]ದುಳಿಸಿ ಭೂಮಿಯ[11]
ನಿಬ್ಬಗೆಯ [12]ಮಾಡಿಸುತ ಗಜಹಯ
ದೊ[12]ಬ್ಬುಳಿಯ [13]ಹರೆಗಡಿದು[13] ಕಾದಿಸುವಾನೆಗಳ ಮೇಲೆ ।
ಬೊಬ್ಬಿಱಿದು [14]ಶರವಳೆಯ ಸುರಿಸುರಿ
ದುಬ್ಬರದ ಬವರದೊಳಗಹಿತರಿ[14]
ಗುಬ್ಬಸವ[15]ನೆಸಗು[15]ವನೆ ಜೋದನು ರಾಯ ಕೇಳೆಂದ ॥೧೦೦॥

ಕುದುರೆಗಳನಾರೈದು ರಥವನು
ಹದುಳಿಸುತ ಸಾರಥಿಯ [16]ನೋಡುತ
ಯಿ[16]ದಿರ ಮುಱಿವುತ ತನ್ನ ಕಾಯ್ದುಕೊಳುತ್ತ[17]ಲೆಡ[17]ಬಲನ !

[1] ನಂ (ಗ ಝ ಡ ಪ) [2] ಳ್ದಂ (ಖ ಗ ಟ ದ) [3] ಗಳಲಿ (ಖ ಗ ಚ ಟ ನ ಪ) [4] ಸುತಾ (ಚ ಝ ಟ ಡ ನ ಪ ಬ) [5] ಬೆಸದವರೆನಿಪರ್ಕೈ (ಗ), ಜಗತಿಗೆಳೆನಿಸುವರು (ಚ ಬ) [6] ವ್ಕೈ (ಗಾ ರ ಬ), ಕ್ಕೈ (ಝ) [7] ಸಾ (ಗಾ ರ ನ ಬ) [8] ಭಕ್ತಸಂಗಡಲಿ (ಕ ಮ), ಭಕ್ತಸಂಪದವ (ರ) [9] ದುವರಿವ (ನ) [10] ಪರ್ವತ (ಕ ಮ), ಸರ್ಬಕ (ಜ), ಪರ್ಬಲ (ಪ) [11] ದುಳಿಸಿ ಗಿರಿಗಳ (ಕ ಮ), ತುಳಿದು ಭೂಮಿಯ (ಚ, ಜ ಡ ಪ ಬ), ದುಳಿದು ಧರಣಿಯ (ಣ), ಮುಱಿದು ಭೂಮಿಯ (ತ) [12] ಮಾಡಿಸುತ ಹಯರಥ (ಖ ಬ), ಮಾಡುತ ಮಹಾರಥರೊ(ಗ ಚ ಡ ನ), ಮಾಡುತ್ತ ರಥಹಯ (ತ) [13] ನೆಱೆಗಡಿದು (ಕ ಮ), ಹರಗಡಿಸಿ (ರ) [14] ಪರದಳವ ಸುರಿಸುರಿದುಬ್ಬರ [ದಳ]ದಲಹಿತರಾಯ'ರ (ಕ ಮ), ಶರವಳೆಯ ಕಱೆವುತ ಸಬ್ಬ ದಳದೊಳಗಹಿತರಾಯರ (ಗ ಡ) [15] ಮಾಡು (ಗ ಡ ಪ ನ) [16] ನೊಯ್ಯುತ್ತಿ (ಚ ಜ) [17] ಕೆಲ (ಖ ಚ ಝ ಬ)

ಸದೆದು ಮರಳುವ ಲಾಗುವೇಗದ
ಕದನಕಾಲಾನಲ[1]ನ ಹೋಲುವ[1]
ಮೊದಲಿಗನಲೈ ರಥಿಕರಿಗೆ ಭೂಪಾಲ ಕೇಳೆಂದ ॥೧೦೧॥

ಬಿಟ್ಟ ಸೂಟಿಯೊಳ[2]ರಿನೃ[2]ಪಾಲರ
ಮುಟ್ಟಿ ಮೂದಲಿಸುತ್ತ [3]ಮೋಹಿದ[3]
[4]ಥಟ್ಟನೊ*ಡ*ಹಾಯ್ದಹಿತಬಲದೊಳು ಚಾರಿ[4]ವರಿವರಿದು ।
[5]ಹಿ[5]ಟ್ಟುಗುಟ್ಟುತ ಹೆಣನ ಲೊಟ್ಟಾ
ಲೊಟ್ಟಿ ಮಸಗಲು ಕಣನ ಚೌಕದ
ಲ[6]ಟ್ಟಿ[6]ಯಾಡಿಸಬಲ್ಲಡವ ರಾವುತನು ಕೇಳೆಂದ ॥೧೦೨॥

ಬೇಸಱದೆ ಕಾಳೋರಗನ[7]ನ
ಡ್ಡೈಸಿ[7] ಕಟ್ಟಿಱುಹೆಗಳು ಕಂಡವ
ಸೂಸಿ ಕಡಿಕಡಿದೊಟ್ಟುವಂದದಲಹಿತಬಲದೊಳಗೆ ।
ಓಸರಿಸದೊಳಹೊಕ್ಕು ಸಮರವಿ
ಳಾಸವನು ನೆಱೆ ಮೆಱೆದು ಕೇಶಾ
ಕೇಶಿಗೊದಗುವನವನೆ ಕಾಲಾಳರಸ ಕೇಳೆಂದ ॥೧೦೩॥

ಬರಲು ಕಂಡಡೆ ವಂದಿಸು[8]ತಲಂ[8]
[9]ತರಿಸಿ ಮಿಗೆ ಹತ್ತಿರವೆನಿಸದತಿ
ತರದ ದೂರವ ಸಾರದೀಪರಿ ಮಧ್ಯಗತನೆನಿಸಿ[9] ।
ಪರಿವಿಡಿಯ[10]ಲೋಲೈಸುತ[10]ರಸಿನ
ಸಿರಿಮೊಗವನೀಕ್ಷಿಸುತ ಬೆಸನಿ[11]ದ
ನ[11]ರವರಿಸದಾಕ್ಷಣವೆ ಮಾ[12]ಡುವನ[12]ವನೆ ಸೇವಕನು ॥೧೦೪॥

---

[1] ನು ತಾನೇ (ಚ) [2] ವನಿ (ಕ ಮ) [3] ಮುಂದಣ (ಗ ಜ ಡ ನ ಪ) [4] ಬಿಚ್ಚಿ ಗಳನೊಡೆಹೊಯ್ದು ಬಲದೊಳಗಾನೆ (ಖ) *ಡೆ (ನ ಪ) [5] ಹೊ(ಖ ರ) [6] ಚ್ಚಿ(ನ) [7] ವೇಢೈಸಿ (ನ) [8] ತ್ತಂ (ಖ ಗ ಚ ಡ ಬ) [9] ತರಿಸಿ ಮಿಗೆ ಹತ್ತಿರೆಯೆನಿಸದತಿತರದ ದೂರವ ಸಾರದೀಪರಿ ಮಧ್ಯಗತನೆನಿಸಿ (ಡ ಣ ಯ) ತರಿಸುತಂ ಮಿಗೆ ಹತ್ತಿರೆಯೆನಿಸದತಿದೂರವಲ್ಲದೆ ಮಧ್ಯಗತಿಯೆನಿಸಿ (ಬ) [10] ಲೊಪ್ಪಿಸುತಲ (ಕ,ಮ), [11] ತನ (ಕ ಮ), ದಕ (ಗ ಜ ಡ) [12] ಡಿದಡ (ಗ ಜ)

ಕುನಖಿ ಕು[1]ಷ್ಠಿ ಕುಚೇಲನನು[1] ಕು
ಬ್ಜನನು [2]ವಿಧವಾಂಗನೆಯ[2] ದಾಸಿಯ
ತನುವಿಕಾರಿಯನಂಗಹೀನನ [3]ಪಂಗುವಂ[3]ಧಕನ ।
ಘನರುಜಾಂಗನ ಬಿಡುದಲೆಯ [4]ರೋ
ದನಿಯ[4]ನುಪ್ಪವಡಿಸುವ ಸಮಯದೊ
ಳಿನಿಬರನು ಕಾಬುದು ಮಹೀಶರಿಗುಚಿತವಲ್ಲೆಂದ ॥೧೦೫॥

ಕಳಸ ಕನ್ನಡಿ[5]ಕರಿ ತುರಗ ಗೋ[5]
ಕುಲ ವೃಷಭ ಬುಧ[6]ನಿಚಯ[6] ಗಿರಿಸಂ
ಕುಲ ಸು[7]ವಾಸಿನಿ[7]ಮಾತೃ ಪಿತೃ ವರವಾಹಿನೀನಿ[8]ಚಯ[8] ।
ಜಲಧಿ[9]ವನ ಶಸ್ತ್ರಾಸ್ತ್ರ[9]ವುರ್ವೀ
ಲಲನೆಯರ[10]ನೀಕ್ಷಿಸುವುದವನಿಪ[10]
ತಿಲಕರುಪ್ಪವಡಿಸುವ ಸಮಯದೊಳರಸ ಕೇಳೆಂದ ॥೧೦೬॥

ಶ್ವಾನ ಕುಕ್ಕುಟ ಕಾಕ ಬಕ ಪವ
ಮಾನ ಖಗಪತಿ [11]ದಿವವು[11] ರಜನಿ ಕೃ
ಶಾನು[12]ಗಾರ್ದಭ ವೃಷಭ ಮದಕರಿ[12] ಶಿಂಶುಮಾರಕನ ।
ವಾನರನ ಹಯ ಕುಂಜರನ ಪಂ
ಚಾನನನ ಮೃಗಪೋತಕನ ಗುಣ
ವಾ ನರೇಂದ್ರರೊಳಿರಲು ಬೇಹುದು ಭೂಪ ಕೇಳೆಂದ ॥೧೦೭॥

ಪರಿಪರಿಯ ದಾನಂಗಳನು ಕರೆ
ಕರೆ[13]ದು ಲೋಗ[13]ರಿಗಿತ್ತು ಪರರನು
ಹೊರೆದು ತನ್ನಾಶ್ರಿತರನತಿ[14]ಗಳೆದಾಪ್ತ[14]ಬಾಂಧವರ ।
ನರಕುಮಾಡದೆ ಗರ್ವದಿಂ[15]ದು
ಬ್ಬ[15]ರಿಸುತಿಹ ಪಾತಕರ ಪದವಿಯ
ನರಸ ಬಣ್ಣಿಸಲಾರು ಬಲ್ಲರು [16]ಯಮನ ನಗರಿಯಲಿ[16] ॥೧೦೮॥

---

[1] ಷ್ಠ ಕುಚಾಯನನನು (ಕ ಮ), ಷ್ಠಿತ ಕುಜನನತಿ (ಚ), ಷ್ಠ ಕುಚೇಷ್ಟನನು (ಜ), ಷ್ಠ ಕುಶೀಲನನು (ನ) [2] ವಿಧವಾಲಿಂಗಿ (ಕ ಝ ನ) [3] ಪಂಗುಳಾಂ (ಕ ಖ ಮ), ಮೂಕನಂ (ಜ) [4] ಲಿದ್ದವನ (ಗ ಜ ಡ ಪ) [5] ಕರಿಹಯಂಗಳ (ಕ ಮ) ತುರಗ ಗಜ ಗೋ (ಗ ಚ ಜ ಡ ನ ಪ) [6] ಯುಗ್ಮ (ಜ ಯ) [7] ಮಿತ್ರರು (ಕ ಮ) [8] ಕರ (ಗ ಚ ಜ ಡ ಣ ಪ) [9] ವನ ಶಸ್ತ್ರೌಘ (ಖ), ವಸನಛತ್ರ (ನ) [10] ಕಾಬುದು ಮಹೀಪತಿ (ಕ ಮ ಯ) [11] ದೇವ (ಕ ಮ) [12] ವಿನ ಗರ್ದಭನ ವೃಷಭನ (ಖ ಚ ಝ ಣ ನ ಬ) [13] ದು ವಿಪ್ರ (ಖ), ದಪಾತ್ರ (ಗ) [14] ಥಿಯ ದಾಸ (ಕ ಮ) [15] ದೊತ್ತು (ಗ ಜ ಪ) [16] ಮೂಱುಲೋಕದಲಿ (ಣ)

ಕೋಪವೆಂಬುದನರ್ಥಸಾಧನ
ಕೋಪವೇ ಸಂಸಾರಬಂಧನ
ಕೋಪದಿಂ[1]ದಿಹಪ[1]ರದ ಸುಕೃತವು ಲಯವನೈದುವುದು ।
ಕೋಪವನು ವರ್ಜಿಸಲು ಬೇಹುದು
ಕೋಪವುಳ್ಳವನಾವನಾಗಲಿ
ಕಾಪುರುಷನಿಹಪರಕೆ [2]ಚಿತ್ತೈಸೆಂದನಾ ವಿದುರ[2] ॥೧೦೯॥

ಗರುವ ಮಾನ್ಯನು [3]ಮಾನಿ[3] ದ್ವೈವಾ
ಪರನು ಕಡುಶುಚಿ ಭೋಗಿ ರೂಪೋ
[4]ತ್ತ[4]ರನು ಧನಿಕನು ರಾಜಪೂಜ್ಯನು ಕೀರ್ತಿವಲ್ಲಭನು ।
ಗುರುಜನಕೆ [5]ಗುರು[5] ವಿದ್ಯೆಯುಳ್ಳವ
ನರಸ ಕೇಳ್ಕೆ ವಿದ್ಯೆಯಿಲ್ಲದ
ನರನು ನರಪಶುವವನ ಜನ್ಮ ನಿರರ್ಥ[6]ಕರವೆಂದ[6] ॥೧೧೦॥

ಹರಿಭಕುತಿಲೋಲುಪನೆನಿಸಿ ಶಂ
ಕರನ ಬದ್ಧದ್ವೇಷಿಯಹ ಶಂ
ಕರನ ಭಕ್ತಿಯೊಳಧಿಕನಾಗಿ[7]ಯೆ[7] ವಿಷ್ಣುವಿನ ಮೇಲೆ ।
ಎಱಿಕವಿಲ್ಲದ ಕರ್ಮಚಾಂಡಾ
ಲರುಗಳೆಪ್ಪತ್ತೇಳುಕೋಟಿಯು
ನರಕ[8]ದೊಳಗೋಲಾಡುತಿಹರವನೀಶ[8] ಕೇಳೆಂದ ॥೧೧೧॥

ದೊರೆಗಳಿಗೆ ಬಡವರಿಗೆ [9]ಕಡುಮೂ
ರ್ಖರಿಗೆ ದುಃಖಿಗೆ ಸುಖಿಗೆ [9]ಸರ್ವ
ಜ್ಞರಿಗೆ [10]ಸದ್ಗುಣಸಂಗಿಗಬಲರಿಗಾತ್ಮ[10]ಜೀವರಿಗೆ ।
[11]ಧರೆಯೊಳಗೆ[11] ಗಾಂಧರ್ವವಿದ್ಯಕೆ
ಸರಿಸವಹ ಬಂಧು[12]ಗಳು ದೊರಕುವು[12]
ದರಿದು ಭೂತಭವಿಷ್ಯದೊಳಗವನೀಶ ಕೇಳೆಂದ ॥೧೧೨॥

---

[1] ದುರುತ (ಖ ಚ ಬ) [2] ಸಲ್ಲನು ರಾಯ ಕೇಳೆಂದ (ಖ ಗ ಜ) [3] ಮನಿಕ (ಖ ಜ ಡ ತ ನ), ಹಿರಿಯ (ಬ), ನೀತ (ಯ) [4] ತ್ಕ (ಚ ಜ ಝ ನ ಬ) [5] ಬಹು (ಕ ಝ ಣ ಮ) [6] ಕೇಳೆಂದ (ತ) [7] ಯು (ಕ ಗ ಬ ಮ) [8] ಲೋಕವನೈದಿಹರೇ ಭೂಪ (ಕ ಮ), ವಾಸವನೈದುವರು ಧೃತರಾಷ್ಟ್ರ (ಖ), ದೊಳಗೋಲಾಡದಿಹರೇ ಭೂಪ (ಣ ಬ) [9] ಯೋಗಿಗೆ ಶರಣುಜನಸಂತತಿಗೆ (ಜ) [10] ಸಂಗಿಗ ಬಲರುಗಳಿಂಗಾರ್ತ (ಗ), ಸಂಗೀತಗಳ ಬಲ್ಲರಿಗಾಪ್ತ (ನ). [11] ಗರುವತನ (ಜ) [12] ಗಳ ಗಳಿಸುವು (ಖ ನ ಮ)

ಯಾತ್ರೆ ಕೆಡುಗು ದುಸ್ಸಂಗದಲಿ ಭೂ
ಪತಿ ಕೆಡುಗು ದುರ್ಮಂತ್ರಿಯಲಿ ವರ
ಸುತ ಕೆಡುಗು ಲಾಲನೆಗಳಲಿ ಕೃಷಿ ಕೆಡುಗುಪೇಕ್ಷೆಯಲಿ।
ಮತಿ ಕೆಡುಗು ಮಧುಪಾನದಲಿ ಸ
ದ್ಗತಿ ಕೆಡುಗು ದುರ್ವ್ಯಸನದಲಿ ನಿಜ
ಸತಿ ಕೆಡುಗು [1]ಸ್ವಾತಂತ್ರ್ಯದಲಿ ಭೂಪಾಲ[1] ಕೇಳೆಂದ ॥೧೧೩॥

ಉಂಡು ತೀರಿಸಬೇಕು ತಾ ಮುಂ
ಕೊಂಡು ಮಾಡಿದ [2]ಪುಣ್ಯ ಪಾಪದ[2]
[3]ತಂ[3]ಡವನು ತರಹರಣವಿಲ್ಲದೆ ಭವಭವಂಗಳಲಿ।
ಹಿಂಡಿ ಹಿಳಿವುದು [4]ಬೆಂಬಿಡದೆ[4] ಸಮ
ದಂ[5]ಡಿ[5]ಯಲಿ ಹಗೆಕೆಳೆಗಳೆನ್ನದೆ
ಗಂಡುಗೆಡಿಸದೆ ಬಿಡುವುದೇ ವಿಧಿಯೆಂದನಾ ವಿದುರ ॥೧೧೪॥

ಸ್ನೇಹಪೂರ್ವಕದಿಂದ ಮನದೊ[6]ಳು
ಗಾ[6]ಹಿಸಲು ಲಕ್ಷ್ಮೀಶನವರಿಗೆ
ಬೇಹ ಪುರುಷಾ[7]ರ್ಥಂಗಳಹವೆಲ್ಲರ್ದಡಲ್ಲಲ್ಲಿ[7]।
ಈ ಹದನು ತಪ್ಪುವುದೆ ಕೂರ್ಮನ
[8]ವೋ[8]ಹದಲಿ ತತ್ಸಂತತಿಗೆ ನಿ
ರ್ವಾಹವಹವೋಲರಸ ಚಿತ್ತೈಸೆಂದನಾ ವಿದುರ ॥೧೧೫॥

ಕೂಡಿದೆಡೆಯಲಕೃತ್ಯಶತವನು
ಜೋಡಿಸಿದವರು ಮಿತ್ರ[9]ರುಗಳಿಗೆ[9]
ಕೇಡ ಚಿಂತಿಸಿದವರು ಪುರುಷಾರ್ಥಂಗಳನು ತಮಗೆ।
ಮಾಡಿದವರುಗಳಿಗೆ ವಿಘಾತಿಯ
ಹೂಡಿದವದಿರು ನರಕದೊಳಗೋ
ಲಾಡದಿಹರೇ ರಾಯ ಚಿತ್ತೈಸೆಂದನಾ ವಿದುರ ॥೧೧೬॥

---

[1] ಪರಭವನದೊಳಗವನೀಶ (ಖ), ತನ್ನಿಚ್ಛೆಯಲಿ ಭೂಪಾಲ (ಬ) [2] ಸುಕೃತ ದುಷ್ಕೃತ (ಗ ಚ ಜ ಡ ಪ) [3] ದಂ (ಖ ಝ.), ಧಾಂ (ಡ) [4] ರೋಕ ದಲಿ (ಜ ಣ) [5] ಡೆ (ಕ ರ ಬ) [6] ಳಗೂ (ಜ), ಳುಗೂ (ಗ ಡ ನ ಪ) [7]ರ್ಥಗಳ ಹವಿದನಯಿದು ಮನದೊಳಗೆ (ಕ ಮ), ರ್ಥಗಳ ಕೊಡುವನದೆಲ್ಲ ತಾನಿರಲಿ (ಗ), ಕೊಡುವನದೆಲ್ಲಯಿರಲಱಿಸಿ (ಜ), ರ್ಥಗಳ ಕೊಡುಬನೆಲ್ಲದ್ದರಲ್ಲಲ್ಲ (ಡ) [8] ದೇ (ಗ.ರ), ನೇ (ಡ.ಪ) [9] ರಿಗೆ ಕಡು (ಗ)

ಅವನಿಯೊಳು ಜನಜನಿತ ಧನಧಾ
ನ್ಯವನು [1]ಕಳಹಲಗ್ಯೈದು[1] ಸಂತೋ
ಷವನು ಮಾಡುವ ಕಡೆಯಲೊಂದಕೆ ನೂಱುಮಡಿಯಾಗಿ ।
ಲವಲವಿಕೆ [2]ಮಿಗಲಿತ್ತು[2] ಸಪ್ತಾಂ
ಗವನು ಸಲಹುತ್ತಿರಲು ಬೇಹುದು
ರವಿಯವೊಲು ಸಾವಿರಮುಖದೊಳವನೀಶ ಕೇಳೆಂದ　　॥೧೧೭॥

ಕುಲಜನಾಗಲಕುಲಜನಾಗಲಿ
ಜಲರುಹಾಕ್ಷನ ನಾಮಕೀರ್ತನ
ದೊಳಗೆ [3]ಬಳಸುವನಾವನಾತನು[3] ಸುಕೃತಿ[4]ಯೆಂಬು[4]ವನು ।
ಉಳಿದ ಜಪತಪ ಹೋಮ ನೇಮಂ
ಗಳಲಿ ಸಂಸಾ[5]ರಾರ್ಣವವ[5]ನು
ಚ್ಚಲಿಸಬಹುದೇ ರಾಯ ಚಿತ್ತೈಸೆಂದನಾ ವಿದುರ　　॥೧೧೮॥

ಇನನುದಯಿಸಲಿ ಪಶ್ಚಿಮಾದ್ರಿಯೊ
ಳನಲನೊಮ್ಮ ಹಿಮಾಂಶು[6]ವೆನಿಸಲಿ[6]
ಕನಕಗಿರಿಗಲ್ಲಾಟವಾಗಲಿ ಪರ್ವತಾಗ್ರದಲಿ ।
ವನಜ ವಿಕಸಿತವಾದಡೆಯು ಸ
ಜ್ಜನರುಗಳು ನುಡಿದೆರಡನಾಡರು
ಮನವಚನಕಾಯದಲಿ ಚಿತ್ತೈಸೆಂದನಾ ವಿದುರ　　॥೧೧೯॥

[7]ನಾಯಿಗಳ ನುಡಿಗೇಳಿ ನೀನು ವೃ
ಥಾಯ ಕೆಡಬೇಡಾ[7] ಯುಧಿಷ್ಠಿರ
ರಾಯನನು ಕರಸುವುದು ಭೀಷ್ಮಾದಿಗಳ ಮುಂದಿಟ್ಟು ।

---

[1] ಮಿಗಲನುಗ್ಯೈದು (ಖ), ಕಳಹೊಲಗ್ಯೈದು (ಗ ಡ ನ), ಕಳಹಲಗ್ಯೈದೆ (ಛ.ಝ), ತಳಿಹರಿಗ್ಯೈದೆ (ಜ)　[2] ಮಿಗಲೆತ್ತಿ (ಕ ಖ ಟ ಮ), ಮಿಗೆಯೆತ್ತಿ (ಗ)　[3] ಬದುಕುವ ನಾವನ್ಮೆ ಕಡು (ಚ), ಬಳಸುವನವನು ಜಗದಲ (ಣ)　[4] ಯೆನಿಸು (ಖ ಟ ಣ ದ)　[5] ರಾಂಬುಧಿಯ (ಗ ಟ ಡ ಣ.ದ ಪ)　[6] ವಾಗಲ (ಗ ಚ ಜ.ಡ ಣ ನ ಪ)
[7] ರಾಯ ನಡೆ ಜೀವವನು ನೆಚ್ಚಿ ವೃಥಾಯ ಕೆಡಬೇಡಾ (ಕ), ನಾಯ ನಡೆ ಭೋಜನವ ನೆಚ್ಚಿ ವೃಥಾಯ ಕೆಡಬೇಡಾ (ಖ), ನಾಯ ನಡೆ ಭೋಗವನು ನಂಬಿ ವೃಥಾಯ ಕೆಡಬೇಡಾ (ಚ), ನ್ಯಾಯಮಾರ್ಗವ ಬಿಟ್ಟು ನೀ ನಿರ್ದಾಯದಲ ಕೆಡದಿರು (ನ), ನಾಯಡಗ ದೋನವನು ನಂಬಿ ವೃಥಾಯ ಕೆಡಬೇಡಾ (ಮ).

[1]ನ್ಯಾಯಮುಖದಲಿ ಸಕಲ[1]ರಾಜ್ಯ
ಶ್ರೀಯೊಳರ್ಧವ[2]ನಿತ್ತು[2] ಬದುಕುವು
ದಾಯತಿಕೆ[3]ಯೊಳಗಹುದು[3] ಚಿತ್ತೈಸೆಂದನಾ ವಿದುರ ||೧೨೦||

ಹರನ ಕೊರಳಿಂಗಾಭರಣವಾ
ದುರಗ ಪವನಾಹಾರ[4]ವಾದಂ[4]
ತರಸ ನಿನ್ನಯ ಬಸುಱಬಂದೇನಹರು ಪಾಂಡವರು ।
[5]ನರಪಶುಗಳಾದರು ಕಣಾ ನೀ
ನಿರಲು ವನವಾಸದಲಿ*ದೇಹವ*
ಹೊರವುದವರಿಗೆ [5]ವಿಧಿಯೆ ಚಿತ್ತೈಸೆಂದನಾ ವಿದುರ ||೧೨೧||

ದೇವತಾಸ್ಥಾನದಲಿ ವಿಪ್ರಸ
ಭಾವಳಯದಲಿ [6]ರಾಜಪುರುಷರ[6]
ಸೇವೆಯಲಿ [7]ರವಿಶಶಿಗಳುದಯಾಸ್ತಮಯ†ಸಮಯ†[7]ದಲಿ ।
ಗೋವುಗಳ ನೆರವಿಯಲಿ ವರಬ್ರಾಂ
ದಾವನದಲುಪಹತಿಯ ಮಾಡುವು
ದಾವಗುಣ ಗರು[8]ವರಿಗೆ ಚಿತ್ತೈಸೆಂದನಾ[8] ವಿದುರ ||೧೨೨||

ಚಕ್ರವರ್ತಿಗಳಾ[9]ಱಲೇ[9] ಭೂ
ಚಕ್ರದೊಳಗವರಿಗೆ ಮುರಾರಿಯ
ಚಕ್ರವೇ ಬೆಸ[10]ಕೈ[10]ವುದಲ್ಲದೆ ಪಾಂಡುತನಯರಿಗೆ ।
ಚಕ್ರಿ ತಾ ಬಂದವರ ಸೇ[11]ನಾ[11]
ಚಕ್ರದೊಳಗಿಹನಾ ಯುಧಿಷ್ಠಿರ
ಚಕ್ರವರ್ತಿ[12]ಗದಾವನ್ಯೆ ಸಮವೆಂದನಾ ವಿದುರ[12] ||೧೨೩||

---

[1] ನ್ಯಾಯಮುಖದಲ ನಿಖಿಳ (ಖ ಝ ಬ), ದಾಯಭಾಗದೊಳಖಿಳ (ನ) [2] ಕೊಟ್ಟು (ಕ ಮ) [3] ಯಹುದರಸ (ನ) [4] ವೆನಿಪಂ (ಕ ಖ ಮ) [5] ಧರೆಯನಾಳುವ ಭಾಗ್ಯವಿಲ್ಲದೆ ನರಪಶುಗಳಾದರು ಕಣಾ ನೀನಿರಲವರಿಗೀ (ಖ ಗ ಡ, ಣ ಪ) * ಸೊಪ್ಪನು (ಪ ಬ), ಜೀವವ (ನ) [6] ಸಜ್ಜನರುಗಳ (ನ) [7] ಗುರುಸದನದಲ ನದಿಯಲಿ ತಟಾಕ (ಖ ಗ ಜ ಡ ಣ ಪ) †ಕಾಲ (ಢ ನ ಬ) [8] ವಾಯುಯೆಂದನು ಭೂಪತಿಗೆ (ಗ ಜ ಡ ಪ) [9] ರ್ವರಿೀ (ಜ) [10] ಗ್ಯೆ (ಖ ಗ ಛ ಢ) [11] ವಾ (ಕ ಛ ಬ ಮ) [12] ಗದಾರು ಸರಿ ಭೂಪಾಲ ಕೇಳೆಂದ (ಖ), ಗೆ ಸರಿಸರಿನ್ನಿಲ್ಲೆಂದನಾ ವಿದುರ (ಛ).

ನಳನೃಪತಿ ದಮಯಂತಿ ಸೀತಾ
ಲಲನೆ ರಾಘವದೇವ ದ್ರೌಪದಿ
ಕಲಿಯುಧಿಷ್ಠಿರ[1]ರಾಯನಿ[1]ವರಿಂತಾಱುಮಾನಿಸರು ।
ಇಳೆಯೊಳುತ್ತಮಕೀರ್ತಿಗಳು [2]ಜಾ
ವ[2]ಳದ ಪುರುಷರೆ ಧರ್ಮಪುತ್ರನ
[3]ಗೆಲುವ ಪರಿಯೆಂತೈ ಮಹಾದೇವೆಂ[3]ದನಾ ವಿದುರ ॥೧೨೪॥

ಜನಪ ಕೇಳೈ ಸ್ಕಂದನನು ರಾ
ಮನನು ಹನುಮನ ಭೀಮಸೇನನ
ವಿನತೆಯಾತ್ಮಜನಿಂತಿ[4]ದೈವರ[4] ಭಾವಶುದ್ಧಿಯಲಿ ।
ನೆನೆದವರ ದುರಿತಂಗಳೋಡುವು
ವೆನಲು ನೀ[5]ವೀ[5] ಪವನಪುತ್ರನ
ನನುವರದೊಳೆಂತಕಟ [6]ಜಯಿಸುವಿರೆಂ[6]ದನಾ ವಿದುರ ॥೧೨೫॥

ಹರಿಹಯನು ಗುಹ ರಾಮ ಬಾಣಾ
ಸುರನು ದಶಶಿರ ಭೀಮಸೇನಾ
ದ್ಯರು ಕಣಾ ಗಿರಿಜಾಧಿನಾಥನ ಡಿಂಗರಿಗರಿವರು ।
ಸರಸವೇ ಮೃತ್ಯುಂಜಯನ ಕೂ
ಡರಸ [7]ನೀ ನಿನ್ನ[7]ಳವನಱಿ[8]ಯಾ[8]
[9]ಮರುಳಹರೆ ಪವನಜನೊಡನೆ ಸಮಗೈಯೆ *ನೀನೆಂ*ದ[9] ॥೧೨೬॥

ಬಲಿ ವಿಭೀಷಣ ಭೀಷ್ಮ ನಾರದ
ಫಲುಗುಣ[10]ನು[10] ಪ್ರಹ್ಲಾದದೇವನು
ಜಲರುಹಾಕ್ಷನ ನಚ್ಚುಮೆಚ್ಚಿನ [11]ಡಿಂಗರಿಗರಿ[11]ವರು ।
ಸುಲಭವೇ ನಿನಗವರ ಕೂಡಣ
ಕಲಹ ಭೀಭತ್ಸುವಿನ ಕೈಮನ
ದಳವನಱಿಯಾ ಕಂಡು ಕಾಣದೆ ಮರುಳಹರೆಯೆಂದ ॥೧೨೭॥

---

[1] ನೃಪತಿಯು (ಗ) [2] ಜಾಪ (ಜ ಬ) [3] ಕಲಹದಲಿ ನೀವೆಂತು ಜಯಿಸುವಿರೆಂ (ಚ ಬ) [4] ನಿಬರನು (ಕ ಖ ಚ ದ ನ ಮ) [5] ನೀ (ಖ ಚ ದ) [6] ಜಯಿಸುವೆಯೆಂ (ಖ ಚ ಡ), ಗೆಲುವಿರಿಯೆಂ (ಣ). [7] ನಿನ್ನೀಯ (ಚ.ನ) [8] ಯದೆ (ಝ ಚ ನ ಮ) [9] ಹರಿಸುತನ ಹಗೆಯೊಳ್ಳಿತೇ ಹೇಳೆಂದನಾ ವಿದುರ (ಕ ಮ), ಮರುತಜನ ಕದನದಲಿ ಮಿಗೆ ಸಮಗೈಯೆ ನೀನೆಂದ (ಚ), ಮರುತಜನ ಹಗೆಗೊಂಬರೇ ಧೃತರಾಷ್ಟ್ರ ಕೇಳೆಂದ (ನ), *ನಿನಗೆಂ (ಜ.ಡ ಪ) [10] ರು (ಚ ಡ ಪ) [11] ಭಕ್ತರುಗಳ (ಕ ಮ)

ಎಲ್ಲಿ ಯೋಗಾಧಿಪತಿ ಮುರಹರ
[1]ನೆ[1]ಲ್ಲಿಯರ್ಜುನದೇವನಿಹನ
ಲ್ಲಲ್ಲಿ ಜಯ[2]ಸಿರಿಯ[2]ಲ್ಲದೇ ಬೇಱಿಲ್ಲ [3]ಕೇಳಿದನು[3] ।
ಬಲ್ಲವರು ಬಲ್ಲರು ಕಣಾ [4]ನೀ
ನಿಲ್ಲ[4] ಪಾಂಡುಕುಮಾರ[5]ರಿಗೆ ಸರಿ
ಯಿಲ್ಲ[5] ಬಲ್ಲೆ[?] ಹಿಂದೆ ಬಂದ ವಿಪ[6]ತ್ಪರಂಪರೆಯ[6] ॥೧೨೮॥

ಹಿಂದೆ ಗೋಗ್ರಹಣದಲಿ ದ್ರುಪದನ
ನಂದನೆಯ ವೈವಾಹದಲಿ ಬಳಿ
ಸಂ[7]ದ[7] ಗಂಧರ್ವಕನ ದೆಸೆ[8]ಯಲ[8] ಘೋಷಯಾತ್ರೆಯಲಿ ।
ಬಂದ ಭಂಗವ ಕಂಡು ಕಂಡೇ
[9]ನೆಂದು ಪಾಂಡುಕುಮಾರರೊಳಗನು[9]
ಸಂಧಿಸುವೆ ಕಲಹವನು ಚಿತ್ತೈಸೆಂದನಾ ವಿದುರ ॥೧೨೯॥

ಸಕಲನೀತಿರಹಸ್ಯವನು ಸು
ವ್ಯಕುತವೆನಲಱುಹಿ[10]ದೆನು ತತ್ತ್ವ
ಸಕತಿಯಾದಡೆ ನೆನೆವುದಿನ್ನು[10] ಸನತ್ಸುಜಾತನನು ।
[11]ಮುಕುತಿಗ[11]ಮಳಬ್ರಹ್ಮವಿದ್ಯಾ
ಪ್ರಕಟವನು ನೆಱೆ ಮಾಡಿ ಚಿತ್ತದ
ವಿಕಳತೆಯ[12]ನೊ[12]ಡೆಮೆಟ್ಟಿ [13]ಸಲಹುವನೆಂದು ಬೋಧಿಸಿದ[13]
॥೧೩೦॥

ಮೂಱನೆಯ ಸಂಧಿ ಮುಗಿದುದು

---

[1] ನ (ಕ ಙ ಬ ಮ). [2] ವಧುವ (ನ) [3] ಕೇಳೆಂದ (ಕ ಮ), ಕೇಳ್ ಸತತ (ಗ ಚ ಜ ಡ ಣ), ನಂಬುವುದು (ನ) [4] ನಿನ್ನಲ್ಲಿ (ಖ ಝ ರ ಬ), ಸುರರಲ್ಲಿ (ಐ) [5] ರೊಳು ಸರಿಯಲ್ಲ (ಗ ಡ), ರೊಳು ಸಮವಿಲ್ಲ (ರ) [6] ತ್ತಿನಾ ಜಯವ (ನ). [7] ದು (ಕ ಝ ಣ ಬ ಮ) [8] ಯಿಂ (ಖ ಗ ರ ಡ ನ ಪ) [9] ಹಿಂದ ಮಱೆ ದಿಹೆ ಪಾಂಡವರೊಳನು (ಖ), ಮಂದಮತಿಯಹೆ ಪಾಂಡವರೊಳನು (ಟ ದ) [10]ದನು ತತ್ತ್ವದ ಯುಕುತಿರೂಪನ ನೆನೆದನಂದು (ಕ ಮ), ದೆನು ತತ್ತ್ವಕೆ ಯುಕುತಿ ಯಾದಡೆ ನೆನೆದನಂದು (ಖ), ದನು ತತ್ತ್ವದ ಯುಕುತಿ ಹಡೆಯಲು ನೆನೆದನಂದು (ಟ) [11] ಭಕುತಿಯ (ಟ ರ ದ) [12] ಕೆ (ಚ ಣ ನ ಬ) [13] ಧೃತರಾಷ್ಟ್ರಂಗೆ ಬೋಧಿಸಿದ (ಕ ಮ), ಧೃತರಾಷ್ಟ್ರನನು ಬೋಧಿಸಿದ (ಖ ಗ ಙ ಡ ಪ), ಸಲಹುವೆ ನೆಂದನಾ ವಿದುರ (ಐ), ಸಲಹುವನೆಂದು ನೇಮಿಸಿದ (ರ).

# ನಾಲ್ಕನೆಯ ಸಂಧಿ

ಸೂಚನೆ॥ ಮುನಿವರನ ಕರುಣದಲ ಕೌರವ
ಜನ[1]ಪ[1]ನಮಲಬ್ರಹ್ಮವಿದ್ಯೆಯ
ನನುಕರಿಸಿ ಚರಿತಾರ್ಥಭಾವದಲಿರುಳ ನೂಕಿದನು ॥

ಕೇಳು ಜನಮೇಜಯ ಧರಿತ್ರೀ
ಪಾಲ ವಿದುರನ ಬೋಧೆಗಂಧನೃ
ಪಾಲನಂತಃಕರಣಶುದ್ಧಿಯನೈದಿದನು ಬಳಿಕ ।
ಹೇಳು ಹೇಳಿನ್ನಾತ್ಮವಿದ್ಯೆಯ
ಮೂಲಮಂತ್ರಾಕ್ಷರದ ಬೀಜವ
ನಾಲಿಸುವೆನೆನೆ ನಗುತ ಕೈಮುಗಿದೆಂದನಾ ವಿದುರ ॥೧॥

ಅವಧರಿಸು ಪರತತ್ತ್ವವಿದ್ಯಾ
ವಿವರ ಭೇದ[2]ವನನ್ಯ[2]ಜಾತಿಗ
ಳಿವಗೆ ಸಲುವುದೆ ಮುನಿವರನ ಕರುಣೋದಯದಲಹುದು ।
ಅವರಿವರುಗಳ ಮುಖದಲಿದು ಸಂ
ಭವಿಸುವುದೆ ಬ್ರಹ್ಮೋಪದೇಶದ
ಹವಣ ಬಲ್ಲವನಾವನೈ [3]ಧೃತರಾಷ್ಟ್ರ ಕೇಳೆಂದ[3] ॥೨॥

ಒ[4]ರ್ವ[4]ನೇ ಬಲ್ಲವನು ಲೋಕದೊ
ಳ[4]ರ್ವ[4]ರಿಲ್ಲ ಸನತ್ಸುಜಾತನು
ಸ[4]ರ್ವ[4]ಗುಣಸಂಪನ್ನನಾತನ ಭಜಿಸಿದಡೆ ನೀನು ।
[5]ಸೇವ್ಯ[5]ನಹೆಯೆ[6]ನಲಾ ಮುನಿಯ ಕ
ರ್ತವ್ಯಭಾವದಲರಸನಿರಲಾ[6]
[7]ಗುರ್ವಿಯಮರರತಿಲಕ ಕೃಪೆಯಲಿ ಬಂದನಾ ಮುನಿಪ[7] ॥೩॥ *

---

[1] ಕ (ಚ ಡ ದ ನ ಬ) [2] ಗಳನ್ಯ (ಚ ಪ), ವ ನಂತ್ಯ (ಣ) [3] ಹೇಳೆಂದನಾ ವಿದುರ (ಚ ಬ) [4] ಬ್ಬ (ಕ ಖ ಜ ಟ ರ ತ ಮ) [5] ಸೇಬ್ಯ (ಖ ನ), ಸಬ್ಬ (ಜ ಣ), ಸರ್ವ (ಡ) [6] ನೆ ಮುನಿಪನಾಗತಿನಿರ್ವಹಣದಲಿ ನೃಪತಿಯಿರುತಿರೆ (ಡ ಪ) [7] ವಿರ್ಧವಿಸಿದನು ವಿಪ್ರಕುಲಕಮಲಾರ್ಕನಾಕ್ಷಣಕೆ (ಕ ಜ ಟ ದ ಮ), ಉರ್ವರಾಮರತಿಲಕ ಕೃಪೆಯಲಿ ಬಂದನಾಕ್ಷಣಕೆ (ಡ ಪ), ಗದ್ಭವಿಸಿದನು ವಿಪ್ರಕುಲಕಮಲಾರ್ಕನಾಕ್ಷಣಕೆ (ಣ), ನಿರ್ವಹಿಸಿದನು ವಿಪ್ರಕುಲಕಮಲಾರ್ಕನಾಕ್ಷಣಕೆ (ಬ)

* (ತ) ಪ್ರತಿಯಲ್ಲಿ ೩ನೇ ಪದ್ಯದ ಉತ್ತರಾರ್ಧವು ಈ ರೀತಿ ಇದೆ —
ಸಧ್ಯ ನೀನಹೆಯೆನೆ ಮುನಿಯ ಕಥೆ
ನಾಧ್ಯುದಯದೊಳರಸನೆನಲಾ
ವುದ್ಭವಿಸಿದನು ವಿಪ್ರಕುಲಕಮಲಾರ್ಕನಾಕ್ಷಣಕೆ ॥

ನೆನೆಯಲೊಡನೆ ಸನತ್ಸುಜಾತನು
ಮನೆಗೆ ಬರಲಿದಿರೆದ್ದು ಕೌರವ
ಜನಪ ಮೆಯ್ಯಿಕ್ಕಿದನೆನಗೆ ಬ್ರಹ್ಮೋಪದೇಶವನು ।
ಮುನಿಪ ನೀ ಕೃಪೆಮಾಡಬೇಕೆನ
ಲನುನಯದೊಳವನೀಪತಿಗೆ ಜನ
ಜನಿತವೆನಲರುಹಿದನಲೈ [1]ಪರಲೋಕಸಾಧನವ[1] ॥೪॥

ಚಿತ್ತವಿಸು ಧೃತರಾಷ್ಟ್ರನೃಪ [2]ಪರ
ತತ್ತ್ವವಿದ್ಯಾ*ವಿಷಯ*[2]ಭೇದವ
ಬಿತ್ತರಿಸುವೆನು ಸಕಲಸಚರಾಚರದೊಳಗೆ ನೀನು ।
ಉತ್ತಮಾಧಮ[3]ವೆ[3]ನ್ನದೇ ಕಾ
ಣುತ್ತ ಹರುಷವಿಷಾದದಲಿ ಮುಳು
ಗುತ್ತಿರದೆ ಸಮರಸದೊ[4]ಳಿಹುದುಪದೇಶ ನಿನಗೆಂದ[4] ॥೫॥

ಅವನಿಪತಿ ಕೇಳಾತ್ಮನಿಂ ಸಂ
ಭವಿಸಿತಂಬರವಂಬರದೊಳಾ
ಪವನ ಪವನನಲಗ್ನಿಯಗ್ನಿಯಲಾದುದಾ ಭುವನ ।
ಭುವನದಿಂ ಧರೆ ಧರಣಿಯಿಂದು
ದ್ಭವಿಸಿತೋಷಧಿಯೋಷಧಿಗಳಿಂ
ತವತ[5]ರಿಸಿತನ್ನಾದಿ[5] ಪುರುಷಪ್ರಕೃತಿವಿಕೃತಿಗಳು ॥೬॥

ನೇತ್ರ ನಾಸಿಕ ಪಾದ ಪಾಣಿ
ಶ್ರೋತ್ರವೆಂಬಿವು ತಮ್ಮೊಳೊಂದೇ
ಸೂತ್ರದಲಿ ಸಂ[6]ಸೃಷ್ಟವಾಗಿ[6] ಸಮಾನಬುದ್ಧಿಯಲಿ ।
ಗಾತ್ರವಿಡಿದಿಹವೋಲು ವಿ[7]ಶ್ವ[7]ದ
ಮೈತ್ರಿಯಲಿ ಮನಸಂದು ಪಾತ್ರಾ
ಪಾತ್ರವೆನ್ನದೆ ಬೆರಸಿ[8]ಬದುಕುವು[8]ದಧಿಕ[8]ಗುಣವೆಂದ ॥೭॥

---

[1] ಬ್ರಹ್ಮೋಪದೇಶವನು (ಖ ಗ ಡ ಪ) [2] ಪರತತ್ತ್ವವಿದ್ಯದ ವೊತ್ತದಭಿನವ ವಿಷಯು (ಟ) *ವಿವರ (ಖ ಜ ಡ ಣ ರ) [3] ರೆ (ಕ ಗ ಚ ಬ ಮ), ನೆ (ಪ) [4] ಳೊದಗಿಹುದೆಂದನಾ ಮುನಿಪ (ಚ) [5] ರಿಸ್ಥಿತಾತ್ಮಾದಿ (ಗ ಚ ಡ ನ ಪ), ರಣ ಮನ್ವಾದಿ (ಜ ಣ ತ) [6] ತುಷ್ಟವಾಗಿ (ಕ ಮ), ತುಷ್ಟಿಯಲಿ (ತ), ದೃಷ್ಟವಾಗಿ (ಬ) [7] ಷಯ (ಟ ದ) [8] ದಾವ (ಟ ದ)

‡ಸೃಷ್ಟಿಸಂಹಾರದಲಿ ಭೂತದ
ಕಟ್ಟಳೆಗಳ ಗತಾ[1]ಗತಿಗಳಲಿ[1]
ವುಟ್ಟಿಸಿದ ವಿದ್ಯೆಯಲವಿದ್ಯೆಯಲಪ್ರತಿಮನೆನಿಸಿ ।
ನಷ್ಟಿಯಲಿ ತುಷ್ಟಿಯಲಿ ಮನವನ್ನು
ಬಿಟ್ಟು ಹಿಡಿಯದೆ ಕಾಲಕರ್ಮವ
ಮೆಟ್ಟಿ ನಿಲೆ [2]ಭಗ[2]ವಂತನೆನಿಸುವನರಸ ಕೇಳೆಂದ ॥೮॥

ಅಣುವಿನಲಿ ಲಘುವಿನಲಿ ಗುರುವಿನ
ಗಣನೆಯಲಿ ಮಹಿಮೆಯಲಿ [3]ಪ್ರಾಪ್ತಿಯ[3]
ಭಣಿತೆ[4]ಗಳಲಿ ವಿಭುತ್ವದಲಿ ಪ್ರಕಟಿತದ[4] ಪರಿವಿಡಿಯ ॥
ಕುಣಿಕೆಗಳಲಿ ವಶಿತ್ವದಲಿ ವೆಂ
ಟಣಿಸಿ ರೇಚಕಪೂರಕದ ರಿಂ
ಗಣವನಱಿವುದು ಯೋಗಸಿದ್ಧಿ[5]ಗೆ[5] ಲಕ್ಷಣವಿದೆಂದ ॥೯॥

ತ್ಯಜಿಸುವುದು ದುಸ್ಸಂಗವನು [6]ಮಿಗೆ[6]
ಭಜಿಸುವುದು ಸತ್ಸಂಗವನು ಗಜ
ಬಜಿಸದಿರಹೋರಾತ್ರಿಯಲಿ ಧರ್ಮವ[7]ನೆ[7] ಸಂಗ್ರಹಿಸು ।
[8]ಭ[8]ಜಿಸು ನಿತ್ಯಾನಿತ್ಯವಸ್ತುವ
ವಿಜಯನಹೆಯಿಹಪರಕೆ ತತ್ತ್ವದ
ನಿಜ[9]ವಿದೆ[9]ಲೆ ಧೃತರಾಷ್ಟ್ರ ಚಿತ್ತೈಸೆಂದನಾ ಮುನಿಪ ॥೧೦॥

ಕಾಯವಿದು ನೆಲೆಯಲ್ಲ [10]ಸಿರಿ ತಾ[10]
ಮಾಯರೂಪಿ[11]ನ[11] ಮೃತ್ಯುದೇವತೆ
ಬಾಯ ಬಿಡುತಿಹಳಾವುದೀತನ ಕಾಲಗತಿಯೆಂದು ।
ದಾಯವಱಿ[12]ವ[12] ಮಹಾತ್ಮರಿದಕೆ ಸ
ಹಾಯ ಧರ್ಮವ ರಚಿಸು[13]ವುದು[13] ನಿ
ರ್ದಾಯದಲಿ ಕೈಸೂಱೆಗೊಂಬುದು ಮುಕ್ತಿರಾಜ್ಯವನು ॥೧೧॥

---

‡ ೮ ಮತ್ತು ೯ನೇ ಪದ್ಯಗಳು (ಕ ಮ) ಪ್ರತಿಗಳಲ್ಲಿಲ್ಲ

[1] ಗತದರಾ (ಖ), ನುಗತಿಗಳ (ಜ ನ) [2] ಬಲ (ಜ ಣ) [3] ಪಾರ್ಥಿವ (ಟ ತ ನ) [4] ಗಳಲ ವಿಭುತ್ವದಲ ಪ್ರಾಕಾಮ್ಯ (ಗ), ಗಳಲ ತತ್ತ್ವಂಗಳಲಿ ಪ್ರಕಟಿತದ (ಚ), ಯಲಿ ಚಿತ್ತದಲಿ ಪ್ರಕಟತ್ವದಲಿ (ಟ ದ), ಗಳಲ ವಶಿತ್ವದಲಿ ಪ್ರಕಟಿತದ (ಣ ನ) [5] ಯ (ಟ ದ) [6] ನೀ (ಕ ಖ ಚ ಮ), ನೆರೆ (ಜ) [7] ನು (ತ) [8] ಸ್ವ (ಕ ಖ ಟ ಮ), ತ್ಯ (ತ) [9] ವನೆ (ಕ ಟ ತ ದ ಮ) [10] ಸಿರಿಯಿದು (ಡ), ನಿಜ ತಾ (ತ) [11] ಗೆ (ತ), ಡು (ನ) [12] ದು (ಚ), ದ (ಬ) [13] ವರು (ಖ ಮ).

ಕೆಟ್ಟಮಾರ್ಗದಲಿಂದ್ರಿಯಂಗಳ
[1]ಚಿಟ್ಟುಮುಱಿಯಾಟದಲಿ[1] ಮನಸಂ
[2]ತುಷ್ಟನಾ[2]ಗಿಯನಿತ್ಯಸಂಸಾರದ ಸುಖಕ್ಕೆಳಸಿ ।
ಹುಟ್ಟುಸಾವಿನ ವಿಲಗದಲ್ಲಿ [3]ಕಂ
ಗೆಟ್ಟು[3] ನಾನಾಯೋನಿಯಲಿ [4]ತಟ
ಗುಟ್ಟಿ ಬಳಲು[4]ವುದುಚಿತವೇ ಹೇಳೆಂದನಾ ಮುನಿಪ ॥೧೨॥

ಹಲವುವರ್ಣದೊಳೆಸೆವ ಗೋಸಂ
ಕುಲದೊಳೊಂದೇವರ್ಣದಲಿ ಕಂ
ಗೊಳಿ[5]ಸುವೀ ಕ್ಷೀರಾಮೃತವು ಮೈಗೊಂಡು ತೋರ್ಪಂತೆ[5] ।
ಹೊಲಬುಗೆಟ್ಟ ಚರಾಚರಂಗಳ
ಸುಳಿವಿನಲಿ ಸುಳಿದಡಗಿ ಕಡೆಯಲಿ
ನಿಲುವ ನಿಜವೊಂದಲ್ಲದೆರಡಿಲ್ಲೆಂದನಾ ಮುನಿಪ ॥೧೩॥

ಅತಿಶಯದ ಸುಕೃತವನು ವಿರಚಿಸಿ
ಗತಿವಡೆದು ಸ್ವರ್ಗಾದಿ ಭೋಗೋ
ನ್ನತಿ[6]ಕೆಯನು ಭೋಗಿ[6]ಸಿದ ಸಮನಂತರದ[7]ಲವನಿಯಲಿ[7] ।
ಪತನ ತಪ್ಪದು ಮರಳಿ ಬಾರದ
[8]ಗತಿಯ[8]ನಱಿದು ಮಹಾನುಭಾವರ
[9]ಗತಿವಿಡಿದು ನಡೆವುದು ನಯವು ಭೂಪಾಲ[9] ಕೇಳೆಂದ ॥೧೪॥

ಸಕಲಧರ್ಮದ ಸಾರ[10]ವನು[10] ಮತಿ
ವಿಕಳನಾಗದೆ ಚಿತ್ತವಿಸು ಬಾ
ಧಕವದಾವುದು ನಿನಗದನು ನೀನನ್ಯರುಗಳಲ್ಲಿ ।

---

[1]ಬಿಟ್ಟು ಮಱಿ-ಮಾಯೆಯಲಿ (ಚ) [2]ದೃಷ್ಟವಾ (ಖ ಬ), ದಷ್ಟನಾ (ಚ ನ) ತುಷ್ಟವಾ (ಡ) [3]ತಟಗುಟ್ಟಿ (ಚ ಬ) [4]ಧವಪಟ್ಟು ಬಳಲು (ಚ), ತಟಗುಟ್ಟಿ ಬೀಳು (ಜ ಣ), ಧೃತಿಗೆಟ್ಟು ಬಳಲು (ತ), ತಟಗುಟ್ಟಿ ತೊಳಲು (ನ), ವಿಧಿಬಟ್ಟು ಬಳಲು (ಬ) [5]ಸುತಿಹ ಕ್ಷೀರಾಮೃತದ ತೆಱನಂತೆ ಮೈಗೊಂಡು (ಕ ಮ), ಸಿತ ಕ್ಷೀರಾಮೃತವು ತೋರ್ಪಂತೆ ಕೈಕೊಂಡು (ಚ ಬ), ಪ ತೀರ್ಥಕ್ಷೀರಧಾರಾಮೃತ ತೆಱನಂತೆ (ತ) [6]ಯ ಮಿಗೆ ಭೋಗಿ (ಖ), ಯನುಱೆ ಭೋಗಿ (ಚ), ಕೆಯ ಸಮನಿ (ದ ಫ) [7]ಸಮಯದಲ (ಜ ಣ) [8]ಮತವ (ಖ ಚ ತ ಬ), ಪಥವ(... [9]ಗತಿಯಱಿದು ನಡೆವುದು ಸುನಿತ್ಯವು ರಾಯ (ಕ), ಮತವಿಡಿದು ನಡೆವುದು ನಯ... ಭೂಪಾಲ (ಗ), ಗತಿವಿಡಿವುದನುನಯವು ನಿಜ ಧೃತರಾಷ್ಟ್ರ (ತ). [10]ವಿದು (...

ಯುಕುತಿಯಿಂದ[1]ಲೆ ತಿಳಿದು ನಡೆಯಲು
ಮು[1]ಕುತನಹೆ ಸಂಸಾರದಲಿ ಸಾ
ಧಕವಿದೊಂದೇ ಸಕಲಜನಮತವೆಂದನಾ ಮುನಿಪ ॥೧೫॥

ಒಂದುವಸ್ತುವನೆರಡುಮಾಡುವೆ
ನೆಂದು ಬುದ್ಧಿಭ್ರಾಂತಿಯಲಿ ಮನ
ಸಂದು ಸಮ್ಯಗ್ಜ್ಞಾನದುದಯದ ನೆಲೆಯ ಕಾಣಿಸದೆ ।
ದಂದುಗಂಬಡುತಿಹುದು ತತ್ತ್ವದ
ಹಿಂದುಮುಂದಱಿಯದೆ ಮಹಾತ್ಮರು
ಬಂದ ಪಥದಲಿ ಬಾರದೇ ಕೆಡುತಿಹುದು ಜಗವೆಂದ ॥೧೬॥

ಪ್ರಣವವೊಂದಾ ವರ್ಣಮೂಱಱ
ಗುಣ[2]ವಿಡಿದು[2] ತೋಱುವ ಚರಾಚರ
ವೆಣಿಸಬಾರದು ವಿಶ್ವದ[3]ಲನುಸ್ಯೂತವಾ[3]ಗಿಹುದು ।
ಹಣಿದು [4]ಬೀಳಲು[4] ಹೊಳವ ಜ್ಯೋತಿ
ರ್ಗಣದವೊಲು ತೊಳತೊಳಗಿ ಬೆಳಗುವ
ಗುಣರಹಿತ[5]ನ ನಿಜಸ್ವರೂಪವಿದೆಂದನಾ ಮುನಿಪ[5] ॥೧೭॥

ನಳಿನಮಿತ್ರನು ಪಶ್ಚಿಮಾಂಬುಧಿ
ಗಿಳಿಯೆ ನಾನಾಪಕ್ಷಿಜಾತಿಗ
ಳುಲಿವುತೈತಂದೊಂದುವೃಕ್ಷವನೇಱಿ ರಾತ್ರಿಯನು ।
ಕಳೆದು ದೆಸೆದೆಸೆಗಳಿಗೆ ಹರಿವವೊ
ಲಳೆಯ ಭೋಗಾದೃಷ್ಟ ತೀರಿದ
ಬಳಿಕ ಲೋಕಾಂತರವನೈದುವರರಸ ಕೇಳೆಂದ ॥೧೮॥

ಪೊಡವಿಯೊಳಗುದಯಿ[6]ಸಿದ ಪಾತಕ[6]
ಬಿಡದು ಭೂಪ[7]ರ[7]ನದು ಪುರೋಹಿತ
[8]ನೆ[8]ಡೆಗೆ ಬಳಿಕಾ ಮೂರ್ಖಶಿಷ್ಯನ ದೋಷ ಗುರು[9]ವಿನದು[9] ।

---

[1] ದ ಮಾಡುತಿರೆ ನಿಮುರ್ಗ (ಖ ನ), ವೆ ಮಾಡಿದರೆ ನೀ ಮು (ಗ ಟ), ವೆ ಮಾಡಿದರೆ ನಿಮುರ್ಗ (ಜ ಡ ಪ) [2] ವೆನಿಸಿ (ಕ ಮ) [3] ಲ ನಿಸ್ಯೂತವಾ (ಕ ಮ), ಲ ನಿಶ್ಚಿಂತನಾ (ಜ ಟ ಣ), ಲ ನಿಸ್ತುತ್ಯವಾ (ನ) [4] ದೆಳಗಲು (ಚ) [5] ನ ನಿಜಸ್ವರೂಪವನಱಿವರಾರೆಂದ (ಟ ದ), ನಿಜತತ್ತ್ವರೂಪನನಱಿಯಬೇಕೆಂದ (ನ) [6] ಸುವ ಪಾತಕ (ಗ), ಸಿಡ ದುಷ್ಕೃತ (ಡ ಣ ದ ನ ಪ) [7] ನ (ಗ.ಡ.ಪ.ಬ). [8] ರೆ (ಖ ಟ ಡ ದ ನ ಪ) [9] ವಿಂಗೆ (ಚ ಪ)

ಮಡದಿ ಮಾಡಿದ ಪಾತಕವು ಪತಿ
ಗೊಡ[1]ಲ[1]ಹುದು ಪರಮಾರ್ಥ[2]ವೀ[2] ಪರಿ
ವಿಡಿಯನಱಿಯದೆ ಕೆಡುತಿಹುದು ಜಗವೆಂದನಾ ಮುನಿಪ ॥೧೯॥

ದುರ್ಜನರಿಗಂಜುವುದು ಲೋಕವು
ಸಜ್ಜನರ ಲೆಕ್ಕಿಸದು ತಾರ್ಕ್ಷ್ಯನ
ಸೆಜ್ಜೆಯೊಳಗಿಹ ದಂದಶೂಕನನರ್ಚಿಸುವರೊಲಿದು ।
[3]ಉಜ್ಜ್ವಲಿತ[3] [4]ಭಕ್ತಿ[4]ಯಲಿ ಬಹಳ ವಿ
ತರ್ಜಿಯಲಿ ಮೂಢಾತ್ಮರಿಕ್ಕಿದ
ಹಜ್ಜೆಯಿದು ಲೋಕಕಕ್ಕೆ ಚಿತ್ರವೆಂದನಾ ಮುನಿಪ ॥೨೦॥

ತಳಪಟದೊಳಾಯುಷ್ಯರಾಶಿಯು
ನಳಿವ ಕೊಳಗವು ಸೂರ್ಯನೆಂಬುದ
ತಿಳಿದಹೋರಾತ್ರಿಯಲಿ ಸಂಖ್ಯೆಯು ಸಲುಗೆಯಂಕಿ[5]ಸದೆ[5] ।
ಬಳಸುವುದು ಸನ್ಮಾರ್ಗದಲಿ ಮುಂ
ಕೊಳಿಸುವುದು ಸದ್ಧರ್ಮದಲಿ [6]ಕಳ
ವ[6]ಳಿಸದಿರು ಷಡ್ವರ್ಗದಲಿ ಭೂಪಾಲ ಕೇಳೆಂದ ॥೨೧॥

[7]ಕಷ್ಟವಿದು[7] ಸಂಸಾರದೊಳಗು
ತ್ಕೃಷ್ಟವಿದು [8]ಮನ್ವಾ[8]ದಿಮಾರ್ಗದ
[9]ದೃಷ್ಟಿಯಿ[9]ದು ಲೋಕಾಂತರದ ಸುಖದುಃಖದೇಳಿಗೆಯು ।
ಹುಟ್ಟುಮೆಟ್ಟಿನ ಕಾಲಕರ್ಮದ
ಕಟ್ಟಳೆ[10]ಯಿದೆಂ[10]ದಱಿದು ನಡೆವಂ
ಗಿಟ್ಟಣಿಸುವುದದಾವುದೈ ಹೇಳೆಂದನಾ ಮುನಿಪ ॥೨೨॥

ಶಿಲೆಯ ರೂಹನು ಮೂ[11]ಢ[11]ರುಗಳ
ಗ್ಗಳೆಯ ಪಾವಕನನು ಮಹೀಸುರ
ರಿಳೆಯೊಳಗೆ ಪರಮಾತ್ಮನೇ ಪರದೈವ ತಾನೆಂದು ।
ಒಲಿದು ಪೂಜಿಸುತಿಹರು ಹೃದಯಾಂ
ಗಳದೊಳಗೆ ವರಯೋಗಿಗಳು ಕೈ
[12]ವಳಸುವುದು ಜನ[12]ವೀ ಪ್ರಕಾರದಲರಸ ಕೇಳೆಂದ ॥೨೩॥

---

[1]ಲ (ಖ ಗ ಚ ನ) [2]ದೀ (ನ) [3]ಊರ್ಜಿತದ (ಗ) [4]ಬುದ್ಧಿ (ನ) [5]ಪ್ರದು (ಗ ಡ ಣ ಪ) [6]ವೆಗ್ಗ (ಚ) [7]ನಷ್ಟಿಯಿದು (ಖ ಗ ಜ ಟ ಡ ದ ನ ಪ ಬ), ನಷ್ಟವಿದು (ಚ ಣ) [8]ಮುನ್ನಾ (ಜ) [9]ಬಚ್ಚಿಯಿ (ಕ ಮ), ಸೃಷ್ಟಿಯಿ (ಗ ಜ), ದುಷ್ಟವಿ (ಚ), ತುಷ್ಟಿಯಿ (ಬ) [10]ಗಳೆಂ (ಕ ಮ) [11]ರ್ಖ (ಕ ಚ ಟ ತ ಮ) [12]ವಳಸಿಹರು ಜನ (ಕ ಮ), ವೆಳಸುವುದು ಜನ (ಗ), ವಳಸುವುದು ಜಗ (ಜ ಟ ಣ ದ)

*ಜ್ಞಾನಿಗಳನೊಡಬಡಿಸಬಹುದ
ಜ್ಞಾನಿಗಳನಹುದೆನಿಸಬಹು[1]ದ್ಯೆ[1]
ಜ್ಞಾನಲ[2]ವ[2]ವನು ಕೂಡಿಕೊಂಡಿಹ ದುರ್ವಿದಗ್ಧರನು ।
ಏನ ತಿಳುಹಲುಬಹುದು ವಿಷ್ವ
ಕ್ಸೇನಗಳವ[3]ಲ್ಲರಸ[3] ಮಿಕ್ಕನ
ಮಾನವರ ಪಾಡಾವುದೈ ಹೇಳೆಂದನಾ ಮುನಿಪ ॥೨೪॥

ದಾನವೊಂ[4]ದಾ[4] ಪಾಲನೆಯು [5]ಸಂ
ಧಾನವೊಂದೀ ಉಭಯವಿ[5]ದಱೊಳು
ದಾನದಿಂದಹುದಿಹಪರಂಗಳ ಸೌಖ್ಯಸಂಪದವು ।
ದಾನವೇ ಸಂಸಾರಸಾಧನ
ದಾನದಿಂ ಪಾಲನೆಯು ಫಲ[6]ವಿ
ನ್ನೇನ ಹೇಳುವೆ[6] ಕಡೆಯೊಳಚ್ಯುತಪದವೆ [7]ಕೇಳೆಂದ[7] ॥೨೫॥

ಅರಸನೊಡೆಯನು ದಂಡನಾಥನು
ಗುರು ಹಿರಿಯನುತ್ತಮನು ದೈವಾ
ಪರನು ಸಾಹಿತ್ಯನು ಸ[8]ದಸ್ಯ[8]ನು ಸತ್ಪುರುಷನೆಂದು ।
ಪರಿಪರಿಯ [9]ನಾಮಂಗಳ[9]ಲಹಂ
ಕರಿಸುವರು ಜೀವಾತ್ಮ ತೊಲಗಿ[10]ದೊ
ಡಿರದೆ ಹೆಣನೆಂದೆಂ[10]ಬರೈ ಭೂಪಾಲ ಕೇಳೆಂದ ॥೨೬॥

*ವರುಷಮೂಱಱ ಮಾಸಮೇಣ್ಮೂ
ಱಱಲಿ ಪಕ್ಷತ್ರಯದೊಳಗೆ ಬಂ
ದಱುಹುವುದು [11]ದಿನಮೂಱಱಲಿ[11] ಸಂದೇಹ[12]ವೇನಿ[12]ದಕೆ ।
ಧರೆಯೊಳುತ್ಕಟಪುಣ್ಯಪಾಪೋ
ತ್ಕರದ ಫಲ[13]ವಿಹದಲ್ಲಿ ಸೂಚಿಸಿ[13]
ಮರಳುವುದು ಪರಲೋಕದೆಡೆಗವನೀಶ ಕೇಳೆಂದ ॥೨೭॥

---

*೨೪ ಮತ್ತು ೨೭ನೇ ಪದ್ಯಗಳು (ಕ ತ ಮ) ಪ್ರತಿಗಳಲ್ಲಿಲ್ಲ

[1] ದೀ (ಟ ದ) [2]ಯ (ಖ ಗ ಟ ದ ಪ ಬ) [3] ಲ್ಲನ್ನು (ಖ ಡ ಬ) [4] ದರ (ತ), ದೇ (ಯ ರ) [5] ಫಲದಾನದಿಂದೀ ಉಭಯವಿ (ಕ ಮ), ಫಲದಾನವೊಂದಾಗಿಳೆಯೊಳ (ಚ), ಫಲ ದಾನಪಾಲನವುಭಯವ (ತ) [6] ಕಿನ್ನೇನನೆಂದೆನು (ಚ ನ ಬ), ಕಿನ್ನೇನ ಹೇಳುವೆ (ಯ) [7] ಫಲವೆಂದ (ಚ ನ ಬ) [8] ದೈವ (ಟ ದ), ಧರ್ಮ (ನ) [9] ಗುಣನಾಮದ (ಗ ಚ ಜ ಡ ದ ಬ) [10] ದಡರಸನನುಹೆಣನೆಂ (ಟ ದ), ದಮಱುದಿವಸ ಹೆಣನೆಂ (ಬ) [11] ಕೃತಸಂಚಿತವು (ಯ) [12] ದೇಡಿ (ಯ) [13]ವಹುದಿಲ್ಲಿ ಸೂಚಿಸಿ (ಖ ಗ ಪ ಬ), ವಿದು ತಪ್ಪಬಾರದು (ಚ), ವಿದ್ದಲ್ಲಿ ಸೂಚಿಸಿ(ಟ ದ).

ಒಂದು ಭೂಪಿಂಡದಲಿ ನಾನಾ
ಚಂದ[1]ದಲಿ[1] ಪ್ರಾಣಿಗಳು ಜನಿಸುವು
ವೊಂದು [2]ಜ್ಯೋತಿ[2]ಸ್ಸಿನಲಿ ನಾನಾ ಜ್ಯೋತಿಯು[3]ದಿಸುವುವು[3]।
ಒಂದು ಪರವಸ್ತುವಿನ ಬಳಿಯಲಿ
ಬಂದವಬುಜಭವಾಂಡಕೋಟಿಗ
ಳೆಂದೊಡವು ಬೇರಿಲ್ಲ ಸರ್ವವು ವಿಷ್ಣುಮಯವೆಂದ ॥೨೮॥

ತಾನಿದಿರು ಹಗೆ ಕೆಳೆ ವಿವೇಕ
ಜ್ಞಾನ[4]ವ[4]ಜ್ಞಾನಂಗಳಿಹಪರ
ಹಾನಿವೃದ್ಧಿಯ ಮಾರ್ಗದಲಿ ತಾನೇಕಚಿತ್ತದಲಿ।
ದಾನ ಧರ್ಮ ಪರೋಪಕಾರವಿ
ಧಾನ ದೀ[5]ಕ್ಷಾ[5]ಕರ್ಮನಿಷ್ಠರು
ಮಾನನೀಯರು ರಾಯ ಚಿತ್ತೈಸೆಂದನಾ ಮುನಿಪ ॥೨೯॥

*ಕರಣ ಗುಣ ಸಂಹ[6]ನನ[6] ಸಂಧ್ಯಾಂ
ತರದವಸ್ಥಾರೂಪು ಲೋಕೋ
ತ್ತರದ ತಾಪತ್ರಯದ ಲಕ್ಷಣಲಕ್ಷ್ಯಗಳನರಿದು।
ಪರಿ[7]ವಿಡಿಯ[7] ಮೂರ್ತಿತ್ರಯಂಗಳ
ಗುರುಲಘುವನಾರೈದು ನಡೆವಂ
ಗರಿದೆನಿಸುವುದದಾವುದೈ ಹೇಳೆಂದನಾ ಮುನಿಪ ॥೩೦॥

ವೇದ ನಾಲ್ಕಾಶ್ರಮವು [8]ತಾ ನಾ
ಲ್ಕಾದಿ[8]ಮೂರುತಿ ನಾಲ್ಕು ವರ್ಣವಿ
ಭೇದ ನಾಲುಕು ಕರಣ ನಾಲುಕುಪಾಯ ನಾಲ್ಕರಲಿ।
ಭೇದಿಸಲು ಪುರುಷಾರ್ಥನಾಲ್ಕರ
ಹಾದಿಯರಿದು ವಿಮು[9]ಕ್ತ ನಾಲುಕ
ನೈದುವುದು ಸಂದೇಹವೇ ಭೂಪಾಲ ಕೇಳೆಂದ[9] ॥೩೧॥

---

[1] ದ (ಕ ಮ), ದಾ (ಟ ದ) [2] ತೇಜ (ಗ) [3] ದಯಿಸುಗು (ಕ ಮ), ದಯಿಪವು (ಗ) [4] ವಿ (ಕ ತ ನ ಮ) [5] ಕ್ಷಿತ (ಖ), ಕ್ಷರು (ಜ ಯ) [6] ರಣ (ಖ ಗ ಡ ಣ ಬ ಯ) [7] ಪರಿಯ (ಖ ಗ ಯ) [8] ನಾಲುಕನಾದಿ (ತ), ನಾಲ್ಕು ವಿನೋದ (ಬ) [9] ಕ್ತ ನಾಲ್ಕಕ್ಕೈದುವನು ಸಂದೇಹವೇ ಭೂಪಾಲ ಕೇಳೆಂದ (ಕ ಮ), ಕ್ತ ನಾಕವನೈದುವುದು ಸಂದೇಹವೇ ಹೇಳೆಂದನಾ ಮುನಿಪ (ಚ), ಕ್ತ ನಾಲುಕನೈದುವವರೈ ರಾಯ ಚಿತ್ತೈಸೆಂದನಾ ಮುನಿಪ (ನ), ಕ್ತ ನಾಲ್ಕ ನಿವೇದಿಸುವರು ಮುಮುಕ್ಷುಗಳು ಕೇಳೆಂದನಾ ಮುನಿಪ (ಬ)

*(ಕ ಜ ಟ ಮ) ಪ್ರತಿಗಳಲ್ಲಿ ೩೦ನೇ ಪದ್ಯವಿಲ್ಲ.

*ಭೂತ [1]ವರ್ಣ ಸ್ಥಾನ ಸರ್ಗ ನಿ[1]
[2]ಪಾತವದಱೊಳು ಕೃತ್ಯಗಳ[2] ಸಂ
ಜಾತಮುಖ[3]ವಾವರಣ ಶರಸಂಗತಿಯು[3] ಸೋಹೆಗಳ ।
ಧಾತುಮೂಲಾದಿಗಳನಱಿ[4]ದೀ[4]
[5]ರೀತಿಯಲಿಯಿ[5]ಹಪರವ ಗೆಲುವುದು
ಭೂತಳದಲುತ್ತಮವಲೇ ಧೃತರಾಷ್ಟ್ರ ಕೇಳೆಂದ ॥೩೨॥

ಆಱುಗುಣ [6]ಋತುವಾಱು ವರ್ಣವ[6]
[7]ದಾ[7]ಱು ದರ್ಶನ ಪಾತ್ರ[8]ವಂಗವ[8]
[9]ದಾ[9]ಱು ಭೇದದ ಬಗೆಯನಱಿದುತ್ಕೃಷ್ಟಮಾರ್ಗದಲಿ ।
ತೋಱುವೀ ಮಾಯಾಪ್ರಪಂಚವ
ಮೀಱಿ ಕೇಡಿಲ್ಲದ ಪದವ ಕೈ
ಸೂಱೆಗೊಂಬುದು ಪರಮಮಂತ್ರವಿದೆಂದನಾ ಮುನಿಪ ॥೩೩॥

*ಜಲಧಿ [10]ಮಾತೃಕೆ ವಾರ ಕುಲಗಿರಿ
ಗಳು ವಿಭಕ್ತಿ ದ್ವೀಪ ಸಪರ್ಾ[10]
ವಳಿಮುನೀಶ್ವರರುಗಳ ಧಾತುಗಡಣದ ವೇದಿಗಳ ।
ತಿಳಿದು ಕಾಲದ ಗತಿಯು ಗಮಕಂ
ಗಳನಱಿದು ನಡೆವವರುಗಳು ನಿ
ರ್ಮಳದಲೆಡಹದೆ ಬೆರಸಿಕೊಂಬರು ಮುಕ್ತಿರಾಜ್ಯವನು ॥೩೪॥

---

[1] ವರ್ಣಸ್ಥಾನ ಸರ್ವನಿ (ಖ ಟ ತ ದ), ವರ್ಣಸ್ನಾನ ಸರ್ಗವಿ (ಚ), ವರ್ಮಸ್ಥಾನ ಪರ್ವನಿ (ನ), ವರ್ಣಸ್ಥಾನ ಪೂರ್ವನಿ (ಬ) [2] ವಾತವದಱೊಳು ಕೃತ್ಯಕಳೆ (ಖ ಣ ಬ), ಧೂತವಧ್ವರಕೃತ್ಯಕಳೆ (ಚ), ಪಾತವದಱೊಳು ಕೃತ್ಯಗಳ (ಜ), ವಾತವಧ್ವರಕೃತ್ಯಕಳೆ (ಟ ದ), ವಾತವಧ್ವರಕೃತ್ಯಕಳೆ (ನ) [3] ವಾರಣದ ಶರಸಂತತಿಯ (ಖ), ವಾವರಣರಸಸಂಗತಿಯ (ಗ), ವಾರಣ ಶರಧಿಸಂತತಿಯ (ಚ), ವಾರಣದ ಶರಸಂಹತಿಯ (ಪ), ಕಾರಣದ ಬಹುಸಂಗತಿಯ (ಬ) [4] ದು ಸು (ಟ) [5] ನೀತಿಯಿಂದಿ (ಖ ಚ ಣ ತ ನ ಯ ರ), ರೀತಿಯಿಂದಿ (ಡ ಪ) [6] ಷಡುವರ್ಣ ಕರ್ಮವ (ಕ), ಋತುವರ್ಣವರ್ಗವ (ಗ ಡ ಪ), ಋತುವರ್ಣವರ್ಣವ (ಚ ಯ), ಷಡುವರ್ಗ ಕರ್ಮಗ (ಮ) [7] ಳಾ (ಮ) [8] ವರ್ಣವಿ (ಕ ಮ), ವಂಗಡ (ಗ ಬ), ವರ್ಗವ (ಣ ತ ರ) [9] ವಾ (ಗ ಡ ಪ ಬ) [10] ಶರ ರಸನಿಕರ ಮಾತೃಕೆ ದಳ ವಿಭಕ್ತಿಗಳಂಗ ದೀಪಾ (ಗ ಪ), ಶರ ಮಾತೃಕೆಯ ರಸ ಕರತಳ ವಿಭಕ್ತಿಗಳಂಗದೀಪಾ (ಚ), ಮಾತೃಕೆ ವಾರ ಕುಲಗಿರಿಗಳು ಮುನೀಂದ್ರ ದ್ವೀಪ ಸಪರ್ಾ (ತ), ಶರ ಮಾತೃಕೆಯ ನಿಕರಂಗಳಲಿ ಭಕ್ತಿಗಳಂಗ ದೀಪಾ (ನ)

*೩೨, ೩೪ನೇ ಪದ್ಯಗಳು (ಕ ಮ) ಪ್ರತಿಗಳಲ್ಲಿಲ್ಲ.

* ಕಾಯ[1]ದಿಂ ದಂಡ[1]ಪ್ರಣಾಮ ವಿ
ಧೇಯವರ್ಚನೆ ಯೋಗಸಿದ್ಧಿನಿ
ಕಾಯ[2]ಕಾಯಕದಿಂದ್ರಿಯಂಗಳ ಸ್ಥಿತಿಯ[2]ನಾರೈದು।
ಆಯುವನು[3]ವಿರಚಿಸುತ[3] ಮೇಲಣ
ಬೀಯವಿದು ತನಗೆಂಬುದನು ನಿ
ರ್ದಾಯದಲಿ ನಿಶ್ಚೈ[4]ಸಿ ನಡೆವುದು ಪರಮಮತವೆಂದ[4] ॥೩೫॥

ನವ ನವ[5]ವ್ಯೂಹಂ[5]ಗಳಬುಜೋ
ದ್ಭವನ [6]ಪಾಳ್[6] ವಿಖಂಡ ನವರಸ
[7]ನವವಿಧಗ್ರಹನಾಟಕಂಗಳ[7] ಲಕ್ಷಣವನಱಿದು।
ನವವಿಧಾ[8]ಮಳ[8]ಭಕ್ತಿರಸವನು
ಸವಿದು ನಿತ್ಯಾನಿತ್ಯವಸ್ತುವ
ನವರಸವನಾರೈ[9]ವರುತ್ತಮಪುರುಷರವರೆಂದ[9] ॥೩೬॥

ಹತ್ತುಮುಖದಲಿ ಲೋಕದೊಳಗು
ತ್ಪತ್ತಿಯಾದ ಚರಾಚರಂಗಳೊ
ಳುತ್ತಮಾಧಮ[10]ರೆ[10]ನ್ನದೇ ಹರಿ ಸರ್ವಗತನಾಗಿ।
ಸುತ್ತುವನು ನಾನಾತೆಱದ[11]ಲಾ[11]
ಚಿತ್ರಚರಿತನು ಕಪಟನಾಟಕ
ಸೂತ್ರಧಾರಕನೆಂದಱಿದು ಸುಖಿಯಾ[12]ಗು ನೀನೆಂದ[12] ॥೩೭॥

ಲೇ[13]ಸನಾ[13]ಡಿದಿರೆನ್ನ ಚಿತ್ತದ
ಬೇಸಱಿಕೆ ಬಯಲಾಯ್ತು ನಿಮ್ಮುಪ
ದೇಶದಿಂದ ಕೃತಾರ್ಥನಾದೆನು ಗೆಲಿದೆನಿಹಪರವ।

---

* ೩೫ನೇ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ

[1] ದಿಗ್ದಂಥ (ಚ ನ ಬ) [2] ನಾಲ್ಕರ ನಿಕರದ ಸ್ಥಿತಿಯ (ಚ ಬ), ಕಾಯವಿದಿಂದ್ರಿಯಂಗಳ ಗತಿಯ (ನ) [3] ವಿವರಿಸುತ (ಖ ಚ ಡ ನ), ವಿಸ್ತರಿಸಿ (ದ ಬ) [4] ಸದೇಹುದು ಭೂಪ ಕೇಳೆಂದ (ಖ ದ ಬ) [5] ಬ್ರಹ್ಮಂ (ಗ) [6] ಪಾಳು (ಕ), ದಾಳ (ಚ), ನಾಳಿ (ನ), ನಾಳ (ಪ ಬ) [7] ನವನವಗ್ರಹನಾಟಕಂಗಳ (ಕ ಮ), ದ ವಿನಯದ ವಿಗ್ರಹದ ನಾಟಕ (ಚ), ನವನವಗ್ರಹವಿಧಿಯ ನಾಟಕ (ಜ ಡ ಣ ಪ ಯ ರ), ನವನವಗ್ರಹವಿಧದ ನಾಟಕ (ಬ) [8] ನದ (ತ) [9] ದು ನಡೆವುದೆ ಪರಮಮತವೆಂದ (ಗ) ದು ನಡೆವುದು ಭೂಪ ಕೇಳೆಂದ (ಚ ತ ಬ), ದಿಹುದು ಭೂಪಾಲ ಕೇಳೆಂದ (ಜ ಣ ನ ಯ ರ), ನಡೆದರೆ ಪರಮಪದವೆಂದ (ಡ) [10] ವೆ (ಗ ಜ ಣ ಯ ರ) [11] ಲ ವಿ (ಗ ಡ ಣ ಪ ಯ ರ) [12] ಗು ಹೋಗೆಂದ (ಚ ನ), ಗಿ ಬದುಕೆಂದ (ತ) [13] ಸ ಮಾ (ಗ ಜ ಡ ಯ ರ), ಸ ಮಾ (ಣ ಬ)

ಘಾಸಿಯಾದುದು ರಾಗ ಲೋಭದ
ಮಿಾಸಲಳಿದುದು ನಿಮ್ಮ ಕೃಪೆಯಿಂ
ದೇಸು ಧನ್ಯನೊ ನಾನು ಚಿತ್ತೈ[1]ಸೊಂದು[1] ಬಿನ್ನಪವ ॥೩೮॥

ಸ್ವರ್ಗವಾವುದು ನರಕವಾವುದು
[2]ವಿ[2]ಗ್ರಹದಲಹ ಸಿದ್ಧಿಯಾವುದ
ನುಗ್ರಹದಲೇನಹುದು ಪಾತ್ರಾಪಾತ್ರವೆಂದೇನು ।
ಉಗ್ರವಾವುದು ದೈವದೊಳಗೆ ಸ
ಮಗ್ರವಾವುದು [3]ಧರ್ಮ[3]ದೊಳಗ
[4]ವ್ಯ[4]ಗ್ರದಿಂದುಪದೇಶಿಸಲು ಬೇಕೆಂದನಾ ಭೂಪ ॥೩೯॥

ಸುಲಭ[5]ನ[5]ತಿಸಾಹಿತ್ಯಮಂಗಳ
ನಿಳಯನಗಣಿತಮಹಿಮನನ್ವಯ
ತಿಲಕ[6]ನನುಪಮ[6]ಚರಿತ ದೈವಾ[7]ಪರನು ಪುಣ್ಯ[7]ನಿಧಿ ॥
ಕುಲಯುತನು ಕೋವಿದನು ಕರುಣಾ
ಜಲಧಿ [8]ಕೌತುಕಯು[8]ಕ್ತಿವಿದನೆಂ
ದಿಳೆ ಹೊಗಳುತಿ[9]ರಲದುವೆ ಕೇಳ್ಕೈ[9] ಸ್ವರ್ಗ [10]ತಾನೆಂ[10]ದ ॥೪೦॥

ಪಾತಕನು ಪತಿತನು ಕೃತಘ್ನನು
ಘಾತಕನು ದುರ್ಮತಿ ದುರಾ[11]ತ್ಮನ
ಭೀತಕನು[11] ದೂಷಕನು ದುರ್ಜನನಪ್ರಯೋಜಕನು ।
ನೀತಿಹೀನನು ಜಾತಿಧರ್ಮಸ
ಮೇತ ದೈವದ್ರೋಹಿಯೆಂಬುದು
ಭೂತಳದೊಳೇ ನರಕ ಚಿತ್ತೈಸೆಂದನಾ ಮುನಿಪ ॥೪೧॥

---

[1] ಸೆಮ್ಮ (ಮ)　[2] ನಿ (ಚ ಟ ದ)　[3] ಧೈರ್ಯ (ಚ)　[4] ಧ್ಯ (ಕ ಖ ಚ ಟ ತ ದ ನ)　[5] ಮ (ಗ ಚ)　[6] ಪರಹಿತ (ಚ)　[7] ಪರನು ಸತ್ಯ (ಕ ಮ), ಚಾರ ಪುಣ್ಯ (ಜ ಣ ಯ ರ)　[8] ಕೌತುಕಮು (ತ), ಪಾವನ ಯು (ಬ)　[9] ತಿರಲದುವೆ ತಾನೇ (ಗ), ತಿಹುದದುವೆ ಕೇಳ್ಕೈ (ಟ ದ ನ ಮ)　[10] ಕೇಳೆಂ (ಗ)　[11] ತ್ಮಾಗೀತಕನು (ಕ), ಧ್ಯನತೀತಹರ (ಗ), ತ್ಮನತಿಥಿಹರ (ಚ), ಧ್ಯನು ನೀತಿಹರ (ಜ ಣ ಯ ರ), ಧ್ಯನು ಭೀತಕನು (ಟ ದ), ಧ್ಯನಧೀತಿಹರ (ಡ ಪ), ತ್ಮನನೀತಕನು (ಮ).

ದೇಹವಿಡಿದಿಹ ಧರ್ಮವದು ನಿ
ರ್ದೇಹದಲಿ ದೊರಕುವುದೆ ಮಾನವ
ದೇಹವೇ [1]ಸಾಧನ ಕಣಾ ಪುರುಷಾರ್ಥ*ನಿಷ್ಠ*ರಿಗೆ[1] |
ಐಹಿಕಾಮುಷ್ಮಿಕದ ಗತಿ ಸ
ಮ್ಮೋಹಿಸುವು[2]ದು[2] ಶರೀರದಲಿ ಸಂ
ದೇಹವೇ ಧೃತರಾಷ್ಟ್ರ ಚಿತ್ತೈಸೆಂದನಾ ಮುನಿಪ ||೪೨||

ಗರುಡಪಂಚಾಕ್ಷರಿಯೊಳಲ್ಲದೆ
ಗರಳಭಯವಡಗುವುದೆ ವಿಷ್ಣು
ಸ್ಮರಣೆಯಿಂದಲ್ಲದೆ ಮಹಾಪಾತಕಕೆ [3]ಕಡೆಯ[3]ಹುದೆ |
ಹಿರಿದು ಸಂಸಾರಾಂಬುಧಿಯನು
ತ್ತರಿಸುವರೆ ಗುರುಮುಖದೊಳಲ್ಲದೆ
ನಿರತಿಶಯವಹುದಾವುದೈ ಹೇಳೆಂದನಾ ಮುನಿಪ ||೪೩||

ತನ್ನ [4]ಮನೆಯಲಿ[4] ಮೂರ್ಖನತಿಸಂ
ಪನ್ನ ಪೂಜ್ಯನು ಭೂಮಿಪಾಲನು
ತನ್ನ ದೇಶದೊಳಧಿಕನೈ ಗ್ರಾಮದಲಿ ಪ್ರಭು ಪೂಜ್ಯ |
ಭಿನ್ನವಿಲ್ಲದೆ ಹೋದ ಠಾವಿನೊ
ಳನ್ಯರೆನಿಸದೆ ವಿಶ್ವದಲಿ ಸಂ
ಪನ್ನಪೂಜಾಪಾತ್ರರೈ ವಿದ್ವಾಂಸರುಗಳೆಂದ ||೪೪||

ಒಬ್ಬನಹನೈ ಶೂರ ನೂಱ
ಕ್ಕೊಬ್ಬನಹ ಸಾವಿರಕೆ ಪಂಡಿತ
ನೊಬ್ಬನಹ[5]ನೈ ವಕ್ತೃ ಶತಸಾವಿರಕೆ[5] ಲೋಕದಲಿ |
ಒಬ್ಬ ದಾನಿಯು ಕಾಣೆನೈ [6]ತಾ
ನೊ[6]ಬ್ಬರೊಬ್ಬರಿಗೊಂದು ಗುಣವದು
ಸಬ್ಬಗುಣಸಂಪನ್ನರೈ ವಿದ್ವಾಂಸರುಗಳೆಂದ ||೪೫||

---

[1] ಸಂಸಾರಸಾಧನ ಸಕಲಪುರುಷಾರ್ಥ (ಕ ಮ), ಸಾಧನ ಸಕಲ ಪುರುಷಾರ್ಥಶೀಲರಿಗೆ (ಗ ಡ ಬ ರ), ತಾ ಸಕಲಸಾಧನ ಪುರುಷಜೀವಂಗೆ (ತ)
* ಜೀವ (ಚ ಜ ಯ) [2] ದ (ಗ ಡ) [3] ಕೇಡ (ಗ), ಲಯವ (ಚ), ನಡೆಯ (ಜ)
[4] ಗೃಹದಲಿ (ಗ ಡ ಣ ಪ ಯ) [5] ನು ಕೃತಾರ್ಥನರ ಲಕ್ಷಕ್ಕೆ (ಕ ಚ ಮ)
[6] ಯವರೊ (ಕ).

ಸತಿಯರಿಗೆ ಗತಿಯಾವುದೈ ನಿಜ
ಪತಿ[1]ಗಳ[1]ಲ್ಲದೆ ವಿಪ್ರಜಾತಿಗೆ
ಹುತವಹನು ವರ್ಣತ್ರಯಕೆ ಭೂದೇವರುಗಳಿರಲು।
ಕ್ಷಿತಿಯೊಳಧಿಕವದಾವುದೈ ಭೂ
ಪತಿಯೆ ಕೇಳಿಹಪರದ ಸುಖಸಂ
ಗತಿಯನೊಲುವಡೆ ಪೂಜಿ[2]ಸುವುದೈ ಬ್ರಾಹ್ಮಣೋತ್ತಮರ[2] ॥೪೬॥

ಜಾರನನು ಕಂಟಕನ [3]ಹಿಸುಣನ[3]
ಚೋರನನು ಷಂಡನನು ಸಮಯವಿ
ಕಾ[4]ರ[4]ಭೇದಿಯನಿಂತಿವರನು ಕಂಡು ಮನ್ನಿಸದೆ।
ದೂರದಲಿ ವರ್ಜಿಸುವುದು ಬಹಿ
ಷ್ಕಾರಿಗಳು ಸರ್ವ[5]ಕ್ಕಿವರುಗಳು[5]
ಸಾರವಿದು [6]ಸತ್ಪುರುಷರಭಿಮತವೆಂದನಾ[6] ಮುನಿಪ ॥೪೭॥

ಮೊದಲಲಾ ಮಾಹಿಷಿಕನನು ಮ
ಧ್ಯದಲಿ ವೃಷಲೀವಲ್ಲಭನನಂ
ತ್ಯದಲಿ ವಾರ್ಧುಷಿಕನನು ಕಂಡವರುಗಳ ಭಾಗ್ಯನಿಧಿ।
ಕದಡಿ [7]ಹರಿವುದು ಕಂಡ[7] ಮುಖದಲಿ
ಸದಮಳಿತಶಾಸ್ತ್ರಾರ್ಥನಿಶ್ಚಯ
ವಿದನರಿದು ನಡೆವುದು ನಯವು ಭೂಪಾಲ ಕೇಳೆಂದ ॥೪೮॥

ಕುಲಮಹಿಷಿ ದುರ್ಮಾರ್ಗಮುಖದಲಿ
ಗಳಿಸಿದರ್ಥವನುಂಡು ಕಾಲವ
ಕಳೆವ ನಿರ್ಭಾಗ್ಯರು ಕಣಾ ಮಾಹಿಷಿಕರೆಂಬವರು।
ಇಳೆಯೊಳವರೊಡನಾಡಿದವದಿರು
ಗಳಿಗೆ ನರಕಾರ್ಣವದೊಳಾಳುತ
ಮುಳುಗು[8]ತಿರುತಿಹುದಲ್ಲದೇ ಗತಿಯಿಲ್ಲ ಕೇಳೆಂದ[8] ॥೪೯॥

---

[1] ಯದ (ಚ ಣ) [2] ಸುವುದ್ಯೆ ಬ್ರಾಹ್ಮಣರ ನೀನೆಂದ (ಗ ಜ ಡ ಪ ಯ), ಸೈ ವಿಪ್ರೋತ್ತಮರನೆಂದ (ಚ ಬ) [3] ಹಿಂಸನ (ಕ ಖ ಗ ಬ ಮ) [4] ರಿ (ಗ) [5] ಕೈ ನಿಗಮದ (ಗ) [6] ಸರ್ವಕ್ಕೆ ನೀತಿಯಿದೆಂದನಾ (ಕ), ಸರ್ವೇಶ್ವರನ ಮತವೆಂದನಾ (ಖ ಜ ಣ ತ ನ) [7] ಹೋಹುದು ಹಲವು (ಖ) [8] ತಿಹರವರಲ್ಲದೇ ಹೇಳೆಂದನಾ ಮುನಿಪ (ಕ ಮ), ತಿಹುದಲ್ಲದೆ ವಿಚಾರಿಸೆ ಸುಗತಿಯಿಲ್ಲೆಂದ (ಗ), ತಿಹರವನೀಶ ಚಿತ್ತೈಸೆಂದನಾ ಮುನಿಪ (ಚ ಬ)

ದೈವದಾಧೀನ[1]ದಲಿ ಜಗವಾ[1]
ದೈವ ಮಂತ್ರಾಧೀನ ಮಂತ್ರವು
ಭೂವಿಬುಧರಾಧೀನವಾಗಿಹುದಾಗಿ ಲೋಕದಲಿ।
ದೈವವೇ ಬ್ರಾಹ್ಮ[2]ಣನದ[2]ಲ್ಲದೆ
ಭಾವಿಸಲು ಬುಧರಿಂದ[3]ಧಿಕವಹ[3]
ದೈವ[4]ವೆಂಬುದದಾವುದೈ ಹೇಳೆಂದನಾ ಮುನಿಪ[4] ॥೫೦॥

ಕೆಲಸಗತಿಯಲಿ ಕಡೆದ ಶಿಲೆಯನು
ಕಲುಕುಟಿಕನಿಳುಹುವನದಲ್ಲದೆ
ಹಲವುಪರಿಯಿಂದದನು ಲೋಕಕೆ ದೈವವನು ಮಾಡಿ।
[5]ಸ[5]ಲಿಸುವವರುಂಟೇ ಸುರಾಸುರ
ರೊಳಗೆ ವಿಪ್ರೋತ್ತಮರುಳಿಯೆ ಜಗ
ದೊಳಗೆ ದೈವವದಾವುದೈ ಹೇಳೆಂದನಾ ಮುನಿಪ ॥೫೧॥

ಎಣಿಸಬಹುದುರ್ವರೆಯ ಸೈಕತ
ಮಣಿ[6]ಯನೋರಂದದಲಿ[6] ಗಗನಾಂ
ಗಣದಲೈತಹ ವೃಷ್ಟಿಬಿಂದುವ [7]ಲೆಕ್ಕ[7]ಗೊಳಬಹುದು।
ಎಣಿಸಬಾರ[8]ದ[8]ದೊಂದು ದಿವಿಜರ
ಗಣ[9]ಕೆ[9] ಗೋಚರ[10]ವಾಗಿ[10] ಸದ್ಬ್ರಾ
ಹ್ಮಣನನೊಬ್ಬನ ರಕ್ಷಿಸಿದ ಫಲವರಸ ಕೇಳೆಂದ ॥೫೨॥

ಜಾತಿಧರ್ಮವನನುಕರಿಸಿ ವರ
ಮಾತೃಪಿತೃಪರಿಚರಿಯದಲಿ ಸಂ
ಪ್ರೀತಿವಡೆಯುತ ಪರಗುಣಸ್ತುತಿನಿಂದೆಗಳನುಳಿದು।
ಭೂತನಾಥನ ಭಕ್ತಿಯಲಿ ವಿ
ಖ್ಯಾತ[11]ವ[11]ಹ ಗುರು[12]ದೈವದ[12]ಲಿ ಭಯ
ಭೀತಿ [13]ಹಿರಿದಿರಲದುವೆ ಕೇಳ್ ಸುಕೃತಕ್ಕೆ ಕಡೆಯೆಂದ[13] ॥೫೩॥

---

[1] ವು ಜಗವು ತಾ (ಕ ಮ), ದಲಿಹುದು ಜಗ (ಚ ಬ) [2] ಣರದ (ಗ ಜ ಡ ಣ ಪ), ಣ್ಯವ (ಚ ನ) [3] ಲಧಿಕವು (ಟ ದ) [4] ವೆಂಬುದ ಕಾಣೆವೈ ನಾವೆಂದನಾ ಮುನಿಪ (ಗ ಡ), ವನು ತಾ ದೇಖಿ ಕಾಣೆನು ಭೂಪ ಕೇಳೆಂದ (ಣ) [5] ನಿ (ಗ ಚ ಡ ಣ) [6] ಗಳೋರಾಧಾರೆ (ಕ ದ ನ ಮ) [7] ನೆಣಿಕೆ (ಚ ಜ ಡ ಣ ಪ ಬ) [8] ದಿ (ಗ ಮ) [9] ನೆ (ಚ ಟ ತ ದ ಮ), ವ (ಬ) [10] ವಹುದು (ಜ), ವೆನಿಪ (ತ) [11] ನ (ಖ ಗ ಚ ಡ ಪ ಬ ಮ), ರ (ಜ ಣ) [12] ವಿಪ್ರರ (ಜ ಣ) [13] ಗಳು ಹಿರಿದಾಗಿರಲು ಬೇಕೆಂದನ ಮುನಿಪ (ಕ ಮ)

ಅರ್ಥದಿಂದಹ ಸಿದ್ಧಿಯಾವುದ
ನರ್ಥವೆಂಬುದದೇನು ತನಗೆ
ಸ್ವಾರ್ಥವೇನು ಪರಾರ್ಥ[1]ವಾವುದು ಧರ್ಮಮಾರ್ಗದಲಿ[1] ।
ತೀರ್ಥವಾವುದು ವಿಪ್ರರೊಳಗೆ ಸ
ಮರ್ಥರಾರು ಸಭಾ[2]ಶ್ರಯದತಿ[2]
ವ್ಯರ್ಥಜೀವಿಗಳಾರು ಚಿತ್ತೈಸೆಂದನಾ ಭೂಪ ॥೫೪॥

ಧನವನುಳ್ಳ ಮಹಾತ್ಮನಾವುದ
ನೆನೆ[3]ದೊಡ[3]ದು ಕೈಸಾರುವುದು ನಿ
ರ್ಧನಿಕ ಬಯಸಿದ ಬಯಕೆ ಬಯಲಹುದಲ್ಲದೇ [4]ಬೇಯ[4] ।
ಧನಿಕನಂತೆ ಸಮಸ್ತ[5]ಸುಖ[5] ಸಂ
ಜನಿಸುವುದೆ ಸರ್ವಕ್ಕೆ ಸಾಧನೆ
ಧನವದಲ್ಲದೆ ಭುವನದೊಳಗನ್ಯತ್ರವಿಲ್ಲೆಂದ ॥೫೫॥

ವ್ಯರ್ಥರುಗಳೊಡನಾಟ ತ[6]ಪ್ಮ[6]
ಸ್ವಾರ್ಥವಿಲ್ಲದರುಗಳ ಕೂಟ ಪ
ರಾರ್ಥದಿಂ ಜೀವಿಸಿದಡಾತನ ಬದುಕು ಲೋಕದಲಿ ।
ಅರ್ಥವಿಲ್ಲದ ಸಿರಿಯ ಸಡಗರ
ವರ್ಥಿಯಿಲ್ಲದ ಬಾಳುವೆಗ[7]ಳಿವ
ನರ್ಥಪಾರಂಪರಿಯಲ್ಲೈ ಭೂಪಾಲ ಕೇಳೆಂದ[7] ॥೫೬॥

* ಮಾಡುವುದು ಧರ್ಮವನು ಸುಜನರ
ಕೂಡುವುದು ಪರಪೀಡೆಯೆಂಬುದ
ಮಾಡಲಾಗದು ಕರಣಮೂರಿಯೊಳಲ್ಲದಾಟವನು ।
ಆಡಲಾಗದು [8]ದಸ್ಯುಜನವನು
ಕೂಡ[8]ಲಾಗದದೆಂಬ ಮಾರ್ಗವ
ನೋಡಿ ನಡೆವುದು ತನಗೆ ಪರಮಸ್ವಾರ್ಥ ಕೇಳೆಂದ ॥೫೭॥

---

[1] ದಿಂದಹುದಾವುದವನಿಯಲಿ (ಗಾ ಬ), ವೆಂಬುದದಾವುದವನಿಯಲಿ (ದ ಟ) [2] ಸ್ಥಳದೊಳ (ಗ ಡ ಣ ಪ), ವಳಯದಲಿ (ಟ ದ) [3] ಯಲ (ಕ) [4] ವೋಣು (ಗ ಚ ಡ ಪ) [5] ಗುಣ (ಕ ಬ ಮ) [6] ನ್ನಾ (ಗ), ನ್ನ (ಚ ಜ ಡ ಪ ಬ) [7] ಳು ನಿರರ್ಥವಹವೈ ರಾಯ ಚಿತ್ತೈಸೆಂದನಾ ಮುನಿಪ (ಕ ಮ) [8] ಶತ್ರುಜನವನು ಕೂಡ (ಖ ನ), ದುರ್ಜನರುಗಳ ಕೂಡ (ಚ), ಅಂತ್ಯಜನವನು ಬೇಡ (ಟ ದ)

* ೫೭ನೇ ಪದ್ಯವು (ಕ.ಮ) ಪ್ರತಿಗಳಲ್ಲಿಲ್ಲ

ಕರಿತುರಗಮೊದಲಾದ ವಸ್ತುಗ
ಳರಮನೆಗಳಲಿ ಪುತ್ರಮಿತ್ರರು
ತರುಣಿಯರು ಸಹ[1]ಭವರು[1] ಗೋತ್ರಜರಡವಿಯೊಳಗಿಕ್ಕಿ ।
[2]ತಿರುಗು[2]ವರು ನಿಜಸುಕೃತದುಷ್ಕೃತ
ವೆರ[3]ಡೆ ಬೆನ್ನಲಿ ಬಹವುವು[3]ಳಿದುದ
ನರಸ ಬಲ್ಲವ[4]ನಾವನೈ ಹೇಳೆಂದನಾ ಮುನಿಪ[4] ||೫೮||

* ಧರ್ಮದಾಧಾರದಲಿಹುದು ಜಗ
ಧರ್ಮವುಳ್ಳನನಾಶ್ರಯಿಸುವುದು
ಧರ್ಮವೇ ನೂಕುವುದು ಜನ್ಮಾಂತರದ ಪಾತಕವ ।
ಧರ್ಮವೇ ಸರ್ವ[5]ಪ್ರಧಾನವು[5]
ಧರ್ಮವೆಂಬುದು ಪರಮಪದವಾ
ಧರ್ಮವನು ಬಿಟ್ಟಿಹುದು [6]ಮತವಲ್ಲೆಂದನಾ ಮುನಿಪ[6] ||೫೯||

ಪರಿಪರಿಯ ಯಜ್ಞವನು ವಿರಚಿಸಿ
ಸುರಪತಿಯ ಸಂತುಷ್ಟಿವಡಿಸಲು
ಸುರಿವನೈ ಸಂಪೂರ್ಣವಾಗಿ ಸುವೃಷ್ಟಿಯನು [7]ಜಗಕೆ[7] ।
ಹರಿಹಯನು ಸಸ್ಯಾದಿಕಂಗಳ
ಹೊರೆಯಲೋಸುಗ ಮುಯ್ಗೆ ಮುಯ್ಯಾ
ಗಿರುತಿಹುದು ಭುವನ[8]ದ್ವ[8]ಯದೊಳವನೀಶ ಕೇಳೆಂದ ||೬೦||

ಎತ್ತಲಾನು ಸುತೀರ್ಥವೆಂಬುದ
ಚಿತ್ತವಿಸುವೊಡೆ ಸರ್ವತೀರ್ಥದ
ಸತ್ತ್ವವನು ಸನ್ನಿಹಿತನಾಗವಧರಿಸು [9]ನಿನಗ[9]ದನು ।
ಬಿತ್ತರಿಸುವೆನು ವಿಪ್ರಪಾದವಿ
ಮುಕ್ತವಿಮಲೋದಕವನಾವನು
ನೆತ್ತಿಯಲಿ [10]ಮಿಗೆ ಧರಿಸುವನು ಕೃತಕೃತ್ಯನವನೆಂದ[10] ||೬೧||

---

[1] ಚರರು (ಕ ಖ ಚ ಬ ಮ) [2] ಮರಳು (ಗ ಡ ಣ ಪ) [3] ಡು ಬೆಂಬಿಡ ವಲ್ಲದು (ಗ ಡ ಣ ಬ) [4] ರಾರು ಧರ್ಮವೆ ಪರಮಪದವೆಂದ (ಕ ಮ) [5] ಪ್ರತಿಷ್ಠಿತ (ಖ ಟ ದ ನ.ಬ) [6] ಬದುಕೇ ಭೂಪ ಕೇಳೆಂದ (ಟ ದ ನ ಬ) [7] ಧರೆಗೆ (ಕ ಮ) [8] ತ್ರ (ಕ ಚ ಜ ಣ ದ ಬ ಮ) [9] ನೀನ (ಗ ಚ ಣ ಪ) [10] ಧರಿಸಿದ ಕೃತಾರ್ಥನು ರಾಯ ಕೇಳೆಂದ (ಕ ಮ) ಧರಿಸುವನವನೆ ಕೃತಕೃತ್ಯ ಕೇಳೆಂದ (ಖ), ಮಿಗೆ ಧರಿಸುವವನು ಕೃತಾರ್ಥನಹನೆಂದ (ಚ ಡ ಣ ಬ)

* ೫೯ನೇ ಪದ್ಯವು (ಕ ಢ.ಮ) ಪ್ರತಿಗಳಲ್ಲಿಲ್ಲ

ಶರಧಿಯೊಳು ಹರಿ ಯೋಗನಿದ್ರೆಯೊ
ಳಿರಲು ಭೃಗುವೈತಂದು ಲಕ್ಷ್ಮೀ
ಧರನ ವಕ್ಷಸ್ಥಳವನೊದೆಯಲು ಮುನಿಯ ಚರಣವನು।
ಸಿರಿಯುರದೊ[1]ಳಚ್ಚೊತ್ತಿ[1] ಧರಣೀ
ಸುರ[2]ರ[2] ಮೆಱೆ[3]ದನು[3] ತೀರ್ಥ[4]ಪಾದವ[4]
ಧರೆಯೊಳಗೆ ಬುಧರಿಂದಧಿಕವಹ [5]ತೀರ್ಥ[5]ವಿಲ್ಲೆಂದ ||೭೨||

ಮಾಡುತಿಹ ಯಜ್ಞವನು ಪರ[6]ರಿಗೆ
ಮಾಡಿಸುವ ವೇದಾಧ್ಯಯನವನು
ಮಾಡುತಿಹ ತದ್ವಿಷಯದಲಿ ಯೋಗ್ಯರನು ಮಾಡಿಸುವ।
ಮಾಡುತಿಹ ದಾನವನು ಲೋಗರು
ನೀಡುತಿರಲೊಳಕೊಂಬ ಗುಣವನು[6]
ಕೂಡಿಕೊಂಡಿಹನೇ ಸಮರ್ಥನು ವಿಪ್ರರೊಳಗೆಂದ ||೭೩||

*ವೇದಪುರಷರ ದೇಹದೊಳಗೆ ವಿ
[7]ಭೇ[7]ದವಿಲ್ಲದೆ [8]ಜಲಜಸಂಭವ[8]
ನಾದಿಯಾದ ಸಮಸ್ತದೇವರು ನೆಲೆವನೆಗಳಾಗಿ।
[9]ನೇ[9]ದುಕೊಂಡಿಹರಂತು ಕಾರಣ
ವಾದಿಸದೆ ವಿಪ್ರೋತ್ತಮರನಭಿ
ವಾದಿಸುವುದುತ್ತಮವಲ್ಲೆ ಭೂಪಾಲ ಕೇಳೆಂದ ||೭೪||

*ಯುವತಿಯರು ಗಾಯಕರು ಕಿತವರು
ತವತವಗೆ ಕೈವಾರಿಸುವರಾ
ವವನನವನೇ [10]ಪಂಕ್ತಿದೂಷಕ[10]ನಿಹಪರಂಗಳಿಗೆ।
ಇವರು ಮೂವರು ನಿಂದಿಸುವರಾ
ವವನನವ ಸರ್ವಜ್ಞನೆನಿಸುವ
ನವನಿಪತಿ ಚಿತ್ತೈಸು ಧರ್ಮರಹಸ್ಯವಿಸ್ತರವ ||೭೫||

---

[1] ಳಚ್ಚೊತ್ತೆ (ಗ ಡ ಣ ಮ), ಳಾಂತೊತ್ತೆ(ಜ), ಳೊತ್ತಿದನು (ಬ) [2] ನ(ಗ ಚ), ರು(ಜ) [3] ದರು (ಜ), ಸಿದ (ಟ), ದುದು (ಡ ಪ) [4] ಪಾದವು (ಕ ಗ ಚ ಪ ಮ), ಪಾದನು (ಖ), ವಾವುದು (ಟ ದ ಬ) [5] ದೈವ (ಖ ಟ ದ) [6] ರಲಿ। ಮಾಡುತಿಹೆ ವೇದಾಧ್ಯಯನವನು। ಮಾಡಿಸುವ ಕಾಲದಲ ಸಕಲರೊಳೊಮ್ಮೆ ವಿನಯದಲಿ। ಮಾಡಿಸುತ ವಿಘ್ನಗಳು ಬರಲದ। ಕೂಡೆ ಪರಿಹರಿಸುತ್ತಲವರನು (ಚ) [7] ಷಾ(ಗ ಚ ಟ) [8] ಬಿಸಜಸಖ ತಾ (ಬ) [9] ಕಾ (ನ) [10] ಪತಿತ ದುಷ್ಕೃತ(ಣ), ಪತಿತ ದೂಷಕ (ನ), ಜಾತಿ ದೂಷಕ (ಪ ಬ)

* ೭೪, ೭೫ನೇ ಪದ್ಯಗಳು (ಕ ಮ) ಪ್ರತಿಗಳಲ್ಲಿಲ್ಲ

*ಜ್ಞಾತವೇನಜ್ಞಾತವಾವುದು
ನೀತಿಯಾವುದನೀತಿಯಾವುದು
ದ್ವೈತವೇನದ್ವೈತವಾವುದು ವೈದಿಕಾಂಗದಲಿ ।
ಖ್ಯಾತಿಯೇನಖ್ಯಾತಿಯಾವುದು
ಜಾತಿಯಾವುದಜಾತಿಯಾವುದು
[1]ಭೀತಿಯಾವುದಭೀತಿಯಾವುದು ಚಿತ್ತವಿಸಿಯೆಂದ[1] ॥೭೬॥

ಧರಣಿಯಮರರ ಸೇವೆಯನು ವಿ
ಸ್ತರಿಸಿ ಸತ್ಕಾರದಲವರನಾ
ದರಿಸಿ ಬಹುಮಾನವನು ವಿರಚಿಸಿದಾ ಮಹಾತ್ಮರಿಗೆ ।
ಎರವಹುದೆ ಸ್ವರ್ಗಾ[2]ಪವರ್ಗದ[2]
ಸಿರಿಯದೆಂಬುದನಱಿದು ನಡೆವಂ
ಗರಿ[3]ದೆನಿಸುವುದದಾವುದೈ ಹೇಳೆಂ[3]ದನಾ ಮುನಿಪ ॥೭೭॥

ಯೋನಿಮುಖವೆಂಬತ್ತುನಾಲ್ಕು ವಿ
ಯೋನಿಮುಖವೆಂಬತ್ತುನಾ[4]ಲ್ಕು ನ
ವೀ[4]ನಜನ್ಮಂಗಳಲಿ ಜನಿಯಿಸಿ ಕಡೆಯ ಕಣಿಯದಲಿ ।
ಮಾನವರ ಬಸುಱಿನಲಿ ಬಂದ
ಜ್ಞಾನ[5]ತರರಾ[5]ಗಳಿವುದಿದು ಕ
ರ್ಮಾನುಗತವಾಗಿಹುದಲೇ ಭೂಪಾಲ ಕೇಳೆಂದ ॥೭೮॥

*ಪಾನದಿಂ ಸೂಕರನು ಬುಧರವ
ಮಾನದಿಂ ಕ್ಷಯರೋಗಿ ಗುರುಜನ
ಹಾನಿಯಿಂ ಸಲೆ ಕುಷ್ಠಿ ಗರ್ವದಿ ಕುಕ್ಕುಟಾಹ್ವಯನು ।
ಹೀನಗತಿಯಿಂದುರಗ ನಾನಾ
ಯೋನಿಗಳಲಿ ಚರಾಚರವು [6]ಕ
ರ್ಮಾನುಗತವಾಗುದಯಿಸುವುದವನೀಶ[6] ಕೇಳೆಂದ ॥೭೯॥

---

1 ನೀತಿಯಿಂದ ಮುನೀಶ ಚಿತ್ತೈಸೆಂದನಾ ಮುನಿಪ (ನ) 2 ದಿ ಭೋಗದ (ಗ ಜ ಡ ಣ ಪ) 3 ದದಾವುದು ರಾಯ ಚಿತ್ತೈಸೆಂ (ಟ) 4 ಲುಕು ಹೀ (ಗ ಟ ಯ) 5 ಗತವಾ (ಕ ಮ) 6 ತಾನೇನಮಾಡಿಯು ಬೆನ್ನ ಬಿಡದಿಹುದರಸ (ಖ)

* ೭೬ ಮತ್ತು ೭೯ನೇ ಪದ್ಯಗಳು (ಕ ಮ) ಪ್ರತಿಗಳಲ್ಲಿ ದೊರೆಯುವುದಿಲ್ಲ

ಪರರ ಪಟುತರವಾದದಲಿ ಮೂ
ಕರವೊಲಿಹ ಪರ[1]ರುಗಳ ಕಟುಕೋ
ತ್ತ[1]ರದೊಳಗೆ ಬಧಿರತ್ವವನು ಪರದಾರದರುಶನವು ।
ದೊರಕಿದಡೆ ಜಾತ್ಯಂಧನೆನಿಸುವ
ಪುರುಷನಾವವನವನು ಸಾಕ್ಷಾ
ತ್ಪರಮಪುರುಷೋತ್ತಮನಲೈ ಧೃತರಾಷ್ಟ್ರ ಕೇಳೆಂದ ॥೭೦॥

ಇಷ್ಟಸಂತರ್ಪಣವ ಮಾಡಿ ವಿ
ಶಿಷ್ಟಪೂಜಾಪಾತ್ರರನು ಸಂ
ತುಷ್ಟಿಬಡಿಸುತ ಧರ್ಮದಲಿ ರಾಜ್ಯವನು ರಕ್ಷಿಸುತ ।
ಕೊಟ್ಟವರ ಕೊಂಡವರನೋತೊಡ
ಬಟ್ಟವರನನುಜಾತ್ಮಜರನೊಳ
ಗಿಟ್ಟು[2]ಕೊಂಡಿಹುದುಚಿತವಿದು ಭೂಪಾಲ ಕೇಳೆಂದ[2] ॥೭೧॥

ನುಡಿದುದನು ಪೂರೈಸಿ ಕಾಲದ
ಕಡೆಯ ಕಾಣಿಸಿ ಹೋಹವರ ಬೀ
ಳ್ಕೊಡುತ ಹಳೆಯರನಾಪ್ತರನು ಮನ್ನಿಸುತ [3]ತನ್ನುವನು[3] ।
ಬಿಡದ ಸೇವೆಯ ಮಾಡುವವರನು
[4]ಹಿಡಿದು[4] ನಾನಾತೆಱದ ಪದವಿಯ
ಕೊಡುತಿಹುದು [5]ನೃಪ[5]ನೀತಿ ಚಿತ್ತೈಸೆಂದನಾ ಮುನಿಪ ॥೭೨॥

ವಿಲಗಸಾಗರನಾಗಿ ದೇಶವ
ಹಿಳಿದು ಹಿಂಡುತ ದಾನಧರ್ಮವ
ನುಳಿದು ದೇವಬ್ರಾಹ್ಮರೆನ್ನದೆ [6]ಕಂಡವರು[6]ಗಳನು ।
ಘುಳಿಗೆ[7]ಸಂಖ್ಯೆ[7]ಗೆ ದಂಡದೋಷವ
ಕೊಳುತ ಕಡೆಯ[8]ಲಧೋಗತಿಗಳೊಳ
ಗಿಳಿದು ಹೋಹುದು[8] ನೀತಿಯೇ ಹೇಳೆಂದನಾ ಮುನಿಪ ॥೭೩॥

---

[1] ವಚನ ವಚನೋತ್ಕ (ಜ ಟ ಣ) [2] ನಡೆವುದು ನೀತಿ ಚಿತ್ತೈಸೆಂದನಾ ಮುನಿಪ (ಕ ಮ) [3] ತನ್ನವರ (ಚ ಬ) [4] ತಡೆದು (ಖ ಬ) [5] ನಯ (ಗ ಜ ಡ ದ ನ ಬ) [6] ಪುರಜನಂ (ಕ ಮ) [7] ಘುಳಿಗೆ (ಗ ಜ ಡ ಣ ಪ) [8] ಲ ಜವನ ಬಲೆಯಲಿ ಸಿಲುಕುವುದು ನೃಪ (ಕ ಖ ಮ), ಲಧೋಗತಿಗೆ ತಾನಿಳಿದು ಹೋಹುದು (ಗ ಟ)

ಯೋನಿಯಲ್ಲದ ರಾವುಗಳಲಿ ವಿ
ಯೋನಿಯುಹ ವಿಷಯಂಗಳಲಿ ಪಶು
ಯೋನಿಯಲಿ ಸಂಭೋಗಿಸುವ ಪಾತಕರ ಪದವಿಗಳ।
ಏನ ಹೇಳಲು ಬಹುದು ನರಕವಿ
ತಾನದೊಳಗೋಲಾಡಿ [1]ಬಳಿಕಾ[1]
ಶ್ವಾನಯೋನಿಗಳಲ್ಲಿ ಜನಿಸುವರೆಂಡನಾ ಮುನಿಪ ॥೭೪॥

ಜೀವ ಪರಮು[2]ನ[2]ಭೇದವನು ಸಂ
ಭಾವಿಸದೆ ವೇದಾಂತಶಾಸ್ತ್ರವ
[3]ನಾ[3]ವಮುಖವೆಂದಱಿಯದೇ ದಾಸೋಹವೆ[4]ಂದೆನುತ[4]।
ಕೋವಿದರ ಸಂಗವನುಳಿದು ಮಾ
ಯಾವಿಲಾಸದ [5]ನೆಲೆ[5]ಯ [6]ನೋಡದೆ[6]
ಸಾವುತಿಹು[7]ದೇ ದ್ವೈತವವನೀಪಾಲ ಕೇಳೆಂದ[7] ॥೭೫॥

ಉತ್ತಮರ ಸಂಗ[8]ದೊಳಗೋಲಾ[8]
ಡುತ್ತ ದುರ್ವಿಷಯಂಗಳನು ಮುಱಿ
ದೊತ್ತಿ ಸಕಲಚರಾಚರರದ ಸುಖದುಃಖವನು ತಾನು।
ಹೊತ್ತು ನಡ[9]ವುತ[9] ಪುಣ್ಯಪಾಪವಿ
ದೆತ್ತಣದು ತನಗೆಂಬ ಕಾಣಿಕೆ
ಯುತ್ತರೋತ್ತರಸಿದ್ಧಿ ಚಿತ್ತೈಸೆಂದನಾ ಮುನಿಪ ॥೭೬॥

ಬಲಿಯ ರಾಜ್ಯ ವಿಭೀಷಣನ ಸಿರಿ
ಜಲನಿಧಿಯ ಗಾಂಭೀರ್ಯ ಬಾಣನ
ಬಲುಹು ಹನುಮಾನುವಿನ ಭುಜಬಲ [10]ವೀರ[10]ರಾಘವನ।
ಛಲ [11]ದಧೀಚಿಯು[11] ದಾನ ಪಾರ್ಥನ
ಕೆಳೆ ಯುಧಿಷ್ಠಿರನೃಪನ ಸ್ಥೈರಣೆ
ಗಳವಡುವ ಬದುಕುಳ್ಳೊಡದು ವಿಖ್ಯಾತಿ ಕೇಳೆಂದ ॥೭೭॥

---

[1] ಕಡೆಯುಲಿ (ಕ ಮ) [2] ರ(ಖ ಚ ತ) [3] ದಾ (ಕ ಖ ಪ) [4] ಬುದನು (ಕ ಖ ಮ) [5] ಬಗೆ (ಗ, ಣ) [6] ನಱಿಯದೆ (ಕ ಮ ) [7] ದದ್ವೈತವವನೀಪಾಲ ಕೇಳೆಂದ (ಕ ಮ), ದದ್ವೈತವೇ ಹೇಳೆಂದನಾ ಮುನಿಪ (ಣ ರ), ದದ್ವೈತವಿದು ಕೇಳೆಂದನಾ ಮುನಿಪ (ನ) [8] ದಲಿ ನಲಿದಾ(ಪ ಬ). [9] ಸುತ (ಖ), ಸುವ (ಗ), ವುದು (ಣ ದ ಪ) [10] ದೇವ (ಕ) [11] ವು ಕರ್ಣನ (ನ)

*ಪೊಡವಿಯೊಳಗೆ ಪುರೋಹಿತರನವ
ಗಡಿಸಿ ಧರ್ಮದ ಬಲದಿ ನಾಕಕೆ
ನಡೆವ ರಾಯರ ಹೊಯ್ದುಳಿಗೆ ನೂಕುವರಧೋಗತಿಗೆ ।
ಕೆಡಿಸುವರು [1]ರಾಷ್ಟ್ರವನು ಕ್ಷಾತ್ರವ[1]
ತಡೆಗಡಿದು ಚತುರಂಗಬಲವನು
ಹುಡಿಹುಡಿಯ ಮಾಡುವರು ನಿರ್ಜರರರಸ ಕೇಳೆಂದ ॥೭೮॥

ಇರುಳುಹಗಲನವರತ ಪತಿಪರಿ
ಚರಿಯವನು ಮಾಡುತ್ತ ಪರಪುರು
ಷರನು ನೆನೆಯದೆ ಹಲವುಸಂತತಿಗಳಿಗೆ ತಾಯಾಗಿ ।
ಇರುತ ದೇವಬ್ರಾಹ್ಮರನು ಸ
ತ್ಕರಿಸಿ ತಾ ನೀನೆನ್ನದಂತಃ
ಪುರದೊಳೆಸೆಯೆ ಗೃಹಸ್ಥೆಯೆನಿಸುವಳರಸ ಕೇಳೆಂದ ॥೭೯॥

ಮಡದಿ ನಿಜನಿಳಯುವನು ಬಿಟ್ಟಡಿ
ಗಡಿಗೆ ಪರಗೃಹದೊಳಗೆ ಮಿಗೆ ಬಾಯ್
ಬಡಿದು ಮನೆಮನೆವಾರ್ತೆಯೆನ್ನದೆ ಬೀದಿಗಲಹವನು ।
ಒಡರಿಚುವ ಪತಿಯೊಬ್ಬನುಂಟೆಂ
ದೆಡಹಿ ಕಾಣದ ದಿಟ್ಟೆ ಹತ್ತನು
ಹಡದಡೆಯು ವರ್ಜಿಸುವುದುತ್ತಮಪುರುಷರುಗಳೆಂದ ॥೮೦॥

ಮುಡಿಯು[2]ನೋಸ[2]ರಿಸುತ್ತ ಮೇಲುದ
ನಡಿಗಡಿಗೆ ಸಡಿಲಸುತ ಮೌನವ
ಹಿಡಿದಧೋಮುಖಿಯಾಗಿ ಕಿಗ್ಗಣ್ಣಿಕ್ಕಿ ಕೆಲಬಲನ ।
ಬಿಡದೆ ನೋಡುತ ಮುಗುಳುನಗೆಯಲಿ
ಜಡಿದು ಜಾಟುವ ಜಾರವನಿತೆಯ
ಗೊಡವೆಗೊಳಗಾಗದವರುತ್ತಮಪುರುಷರುಗಳೆಂದ[3] ॥೮೧॥

ಗುರುವಿನಲಿ ತಂದೆಯಲಿ ತಾಯಲಿ
ಹಿರಿಯರಲಿ ದೈವದಲಿ ಪಾಪದ
ಪರಿ[4]ವಿಡಿ[4]ಗಳಲಿ ಗೋವಿನಲಿ ತೀರ್ಥದೀ ತನ್ನುವನು ।

---

* ೭೮ನೇ ಪದ್ಯವು (ಟ ದ ಬ ಮ) ಪ್ರತಿಗಳಲ್ಲಿಲ್ಲ

[1] ಕ್ಷಾತ್ರವನು ರಾಷ್ಟ್ರವ (ಖ ಚ ಡ ಣ ನ) [2] ನೇವ (ಗ) [3] ರೆ ಹತ್ತನು ಹಡದಡೆಯು ವರ್ಜಿಸುವರುತ್ತಮಪುರುಷರವರೆಂದ (ಕ ಮ) [4] ಗತಿ(ಖ ಟ ದ ನ).

ಹೊರ[1]ವ[1] ದಾತಾರನಲಿ ಮಂತ್ರದ
ಪರಮಸೀಮೆಗಳಲ್ಲ ಧರಣೀ
ಸುರರೊಳಂಜಿಕೆ ಹಿರಿದಿರಲುಬೇಕೆಂದನಾ ಮುನಿಪ ||೮೨||

ನೀತಿವಿದನಲ್ಲದ ಕುಮಂತ್ರಿಯು
[2]ಧೀತಿಪರನ[2]ಲ್ಲದ ಪುರೋಹಿತ
ರೀತಕವರಿಂದಾವ ಪುರುಷಾರ್ಥಂಗ[3]ಳೈದು[3]ವುವು ।
ಕಾತರಿಸಿ ಸಮರಾಂಗಣಕೆ ಭಯ
ಭೀತನಹ ಭೂಭುಜನ ದೆಸೆಯಿಂ
ಬೀತುಹೋ[4]ಗದೆ[4] ಸಕಲಸಂಪದವರಸ ಕೇಳೆಂದ ||೮೩||

ಧರ್ಮವಾವುದು [5]ಭುವನಗತಿಯೊಳ್[5]
ಧರ್ಮವಾವುದು ರಾಜಮಂತ್ರದ
[6]ಧ[6]ರ್ಮವಾವುದು ಮಾರ್ಗವಾವುದವಾರ್ಗವೆಂದೇನು ।
ಕರ್ಮವಾವುದು [7]ವಿಧಿವಿಹಿತ ದು
ಷ್ಕರ್ಮ[7]ವಾವುದದೆಂಬ ಭೇದವ
ನಿರ್ಮಿ[8]ಸಾ[8] ಸಾಕೆಂದು ಬಿನ್ನಹಮಾಡಿದನು ಭೂಪ ||೮೪||

ಸತಿಸಹಿತ ವಿರಚಿಸಿದ ಧರ್ಮ
[9]ಸ್ಥಿತಿ ಸವೃದ್ಧಿಕವಾಗಿ[9] ಸಲುವುದು
[10]ಪತಿಗದಲ್ಲದೆ ತನ್ನ[10] ಸ್ವಾತಂತ್ರ್ಯದಲಿ [11]ಮಾಡಿದುದು[11] ।
ಅತಿಶಯುವನೈದದು ಕಣಾ ಭೂ
ಪತಿಯೆ ಕೇಳಿಹಪರದ ಗತಿ ನಿಜ
ಸತಿಯ ದೆಸೆಯಿಂದಲ್ಲದೇ ಫಲಿಸುವುದು ಹುಸಿಯೆಂದ ||೮೫||

ಅತಿಥಿಪೂಜೆಯನುಳಿದ ಜೀವ
ನ್ಮೃತನ ಧರ್ಮಸ್ಥಿತಿಯನಪಹರಿ
ಸುತಲು ಬಹನಲ್ಲದೆ[12]ಯುವನ ನಿರ್ಯಾಣ[12]ಕಾಲದಲಿ ।
ಗತಿಗೆಡಿಸಿ ಕೊಂಡೊಯ್ದು ವೈವ
ಸ್ವತನು ನಾಯಕನರಕದೊಳಗ
ದ್ದುತ ಬಹನು ಕುಲಕೋಟಿಸಹಿತವನೀಶ ಕೇಳೆಂದ ||೮೬||

---

[1] ದ (ಗ ಡ ದ ನ) [2] ಭೀತಕಿತರ (ಕ ಮ) [3] ಳೊದಗು (ಕ ಮ) [4] ಹುದು (ಖ ಗ ಚ ಟ ಡ ಪ) [5] ಮೋಣು ಜಗದೊಳ (ಚ ಟ ದ ಣ) [6] ವ (ಖ ನ) [7] ವೈದಿಕದ ಸತ್ಕರ್ಮ (ಕ ಮ) [8] ಸಿರೆ (ಗ ಚ ಣ ಪ) [9] ವೃ ಅತಿಶಯದ ಗತಿಯಾಗಿ (ಕ ಮ) [10] ಪತಿಯುವಿರಹಿತವಾಗಿ (ಕ ಮ), ಸತಿಯರಿಲ್ಲದೆ ತನ್ನ (ಖ,ಗ ನ) [11] ಫಲವಿಲ್ಲ (ಗ) [12] ಯಮನು ನಿರ್ಯಾಣ (ಗ ಚ)

ತಮ್ಮ ಕಾರ್ಯನಿಮಿತ್ತ ಗರ್ವವ
ನೆಮ್ಮಿದಡೆ ತದ್ಗರ್ವದಿಂದುಱೆ
ದಿಮ್ಮಿತಹುದಾ ಕಾರ್ಯವಂತ್ಯಜರಾಲಯಂಗಳಿಗೆ।
ನಿರ್ಮಮತೆಯಲಿ ನಡೆದುಪಶ್ರುತಿ
ಗುಮ್ಮಹವನೈದುವವೊ[1]ಲೌಕುವ[1]
[2]ಮ[2]ರ್ಮಿಗಳನೊಳಹೊಯ್ದು ಕೊಂಬುದು ಭೂಪ ಕೇಳೆಂದ ॥೮೭॥

ಅರಸ ಕೇಳೈ ಮಾರ್ಗ ಮೂಱಾ
ಗಿರುತಿಹುದು ಸಂಪೂರ್ಣಧನಗುರು
ಪರಿಚರಿಯಪರಿವರ್ತನೆಗಳಂಬಿನಿತನತಿಗಳೆದು।
ತಿರುಗಿ ಬಂದಡೆ ನಾಲ್ಕನೆಯ [3]ಮತ[3]
ದೊರಕಲಱಿಯದು ಕಲೆಗಳನು ಸಂ
ವರಿಸುವ [4]ನರೋತ್ತಮರುಗಳಿಗ[4]ವನೀಶ ಕೇಳೆಂದ ॥೮೮॥

ಕಾದುದಕದಾಸ್ನಾನ[5]ವೆಂಬುದು[5]
ವೈದಿಕಾಂಗದ ಮಂತ್ರಸಾಧನ
ವೇದಹೀನರಿಗಿತ್ತ [6]ಧನವಾ[6] ಶ್ರಾದ್ಧ[7]ಕಾಲ[7]ದಲಿ।
ಐದದಿಹ ದಕ್ಷಿಣೆಗಳೆಂಬಿವು
ಬೂದಿಯಲಿ ಬೇಳಿದ ಹವಿಸ್ಸಿನ
ಹಾದಿಯಲ್ಲದೆ ಫಲವನೀಯವು ರಾಯ ಕೇಳೆಂದ ॥೮೯॥

ಇಹಪರದ ಗತಿ ದಾನಧರ್ಮದ
ಬಹಳತೆ[8]ಯು ಸಿರಿ ಸುಪ್ರಭಾವದ[8]
ವಿಹಿತಪುಣ್ಯದ ಬೆಳವಿಗೆಯು ಫಲವೊಂದು ನೂಱಾಗಿ।
ಬಹುದು ಸದ್ವಂಶದಲಿ ಜನಿಸಿದ
ಮಹಿಮ[9]ನಿ[9]ರೆ ಲೋಕಾಂತರದ ಸುಖ
ವಹುದು ಸಂತಾನಾಭಿವೃದ್ಧಿಯನೈದಬೇಕೆಂದ ॥೯೦॥

---

1 ತೊದಗುವ (ಕ) 2 ವ (ಕ ಖ ಟ ದ ಪ ಬ ಮ), ಧ (ಡ), ಕ (ನ) 3 ಪದ (ಕ) 4 ರು ಸತ್ಪುರುಷರುಗಳ (ಕ) 5 ಶುದ್ಧಿಯ (ಗ ಚ ಡ ಪ), ಸಿದ್ಧಿಯು (ನ ಬ) 6 ದಾನವು (ಚ ಡ ನ ಪ) 7 ಕರ್ಮ (ಡ ನ.ಪ) 8 ಗಳ್ತಪಃಪ್ರಭಾವದ (ಖ ಗ.ಡ), ಗಳುತ್ತಮ ಪರಾಪರ (ರ) 9 ೦ (ಖ ಗ ಡ ಪ ಬ)

ಚೋರನೆನು ಕಾಣುತ್ತ ಮರಳಿದು
ಚೋರನೆಂದಡೆ ಪತಿತನನು ನಿ
ಷ್ಠೂರತನದಿಂ ಪತಿತ[1]ನೆನೆ ಸಾಮಾನ್ಯ[1]ದೋಷವದು ।
ಸಾರುವುದು ಮಿಥ್ಯೋತ್ತರದಲಿ ವಿ
ಚಾರಿಸದೆ ನುಡಿವವರಿಗಿಮ್ಮಡಿ
[2]ನಾರಕದ ಫಲ ತಪ್ಪದವನೀಪಾಲ[2] ಕೇಳೆಂದ ॥೯೧॥

ವಿನುತಮಧುಕೈಟಭರ ಮೇದ
ಸ್ಸಿನಲಿ ಮೇದಿನಿಯಾದು[3]ದದ ತಾ[3]
ನನುಭವಿಸುವೊಡೆ ಪುಣ್ಯಕೀರ್ತಿಗಳೆಂಬ ಪರಿಮಳದ ।
ಹೊನಲಿನಲಿ ಸಲೆ ಹೊರೆದು ಲೇಸಾ
ಗನುಭವಿಸುವುದದಲ್ಲದಿದ್ದಡೆ
ದನುಜಮಾಂಸವ ಭಕ್ಷಿಸಿದ ಫಲವರಸ ಕೇಳೆಂದ ॥೯೨॥

ತನ್ನ ದಾನವನಪಹರಿಸಿಕೊಂ
ಡನ್ಯರಿತ್ತುದಕಡ್ಡಬೀಳುವ
[4]ಕುನ್ನಿಗಳು ಅ[4]ಱುವತ್ತುಸಾವಿರವರುಷಪರಿಯಂತ ।
ಭಿನ್ನವಿಲ್ಲದೆ [5]ವಿ[5]ಷ್ಠೆಯೊಳು ಕ್ರಿಮಿ
ಜನ್ಮದಲ್ಲಿಹರಿದನಱಿದು ನೀ
[6]ನಿನ್ನ[6] ಕೊಟ್ಟುದನುಳುಹಿಕೊಂಬುದು ಧರ್ಮವಲ್ಲೆಂದ ॥೯೩॥

ಕರಣಮೂಱಱೊಳಿತ್ತ [7]ವಸ್ತು[7]ವ
ನಿರಿಸಿಕೊಂಡಿರೆ ಮಾಸಮಾಸಾಂ
ತರದೊಳೊಂದಕೆ ನೂಱುಮಡಿಯಲಿ ಕೋಟಿಪರಿಯಂತ ।
ಕಿರಿದಹುದು ದಾನಪ್ರಶಂಸೆಯ
ನರಸ ಕೇಳ್ ಸ್ವರ್ಗನರಕವಿ
ದೆರಡಕೊಂದೇ ದಾನ ಕಾರಣವೆಂದನಾ ಮುನಿಪ ॥೯೪॥

ದ್ಯೂತದಲಿ ಮದ್ಯದಲಿ ಘನಕಂ
ಡೂತಿಯಲಿ ನಿದ್ರೆಯಲಿ ಕಲಹವಿ
ಘಾತಿಯಲಿ ಮೈಥುನದಲಾಹಾರದಲಿ ಬಳಿಸಂದು।

---

[1] ನೆಂದಡೆ ಸಾಮ್ಯ (ಗ ಚ ಛ ದ ನ) [2] ಸಾರುವುದು ಘನತರದ ನರಕವು ರಾಯ (ಕ ಮ) [3] ದಿದನೀ (ಖ ನ.ಬ) [4] ಧನ್ಯರುಗಳ (ತ ದ.ಪ ಯ ರ) [5] ನಿ (ಕ.ಮ). [6] ಮುನ್ನ (ನ) [7] ದಾನ (ಗ ಛ).

ಕೈತವ[1]ದಲು[1]ದ್ಯೋಗದಲಿ ದು
ರ್ನೀತಿಯಲಿ ಪರಸತಿಯರಲಿ ಸಂ
ಪ್ರೀತಿ ಬಲಿವುದು ಬೆದಕ ಬೆದಕಲು ರಾಯ ಕೇಳೆಂದ　　॥೯೫॥ *

ದುಷ್ಕೃತವನೆಸಗುವರು ಫಲದಲಿ
ಕೊಕ್ಕರಿಸುವರು ಸುಕೃತವೆಂಬುದ
ಲೆಕ್ಕಿಸರು ತತ್ಫಲವ ನಿಚ್ಚೈಸುವರು ಮಾನವರು।
ಇಕ್ಕದೆಱೆಯದೆ ಬಿತ್ತಿ ಬೆಳೆಯದೆ
[2]ಪುಕ್ಕಟೆಯೆ[2] ಸ್ವರ್ಗಾದಿ ಭೋಗವು
ಸಿಕ್ಕಲಱಿವುದೆ ರಾಯ ಚಿತ್ತೈಸೆಂದನಾ ಮುನಿಪ　　॥೯೬॥

† ವರಶ್ರುತಿಸ್ಮೃತಿಗಳು ಕಣಾ ಭೂ
ಸುರರ ದೃಷ್ಟಿಗಳವಱೊಳೊಂದಕೆ
ಕೊಱತೆಯಾಗಲು ಕಾಣನೆನಿಸುವನೆರಡನಱಿಯದಿರೆ।
ನಿರುತವಿದು ಜಾತ್ಯಂಧನೆನಿಸುವ
ನರಸ ಕೇಳೈ ಮಾಂಸದೃಷ್ಟಿಗ
ಳೆರವಲೇ ಸರ್ವತ್ರ ಸಾಧಾರಣವು ಲೋಕದಲಿ　　॥೯೭॥

ವಾಚಿಸದೆ ವೇದಾರ್ಥನಿಚಯುವ
ನಾಚರಿಸದಾಲಸ್ಯದಿಂದು
ತ್ಕೋಚನಾಗಿ ಪರಾನ್ನದೊಳು ಸಂಪುಷ್ಟತನುವಾದ।
ನೀಚನಹ ಭೂಸುರನ ಕರುಳನು
ಬಾಚುವಳಲ್ಲೈ ಮೃತ್ಯುವವನು ನಿ
ಶಾಚರನು ದ್ವಿಜನಲ್ಲ ಚಿತ್ತೈಸೆಂದನಾ ಮುನಿಪ　　॥೯೮॥

ಸರಸಿಜಾಕ್ಷನ ದಿವ್ಯನಾಮ
ಸ್ಮರಣವನು ಶ್ರುತಿಮೂಲವಾಕ್ಯೋ
ತ್ಕರುಷವನು ಭೂತಕ್ಕೆ ಹಿತವಹ ನುಡಿಯನತಿಗಳೆದು।
ಪರರ ವಚನವ ತ್ರಿಕರಣದೊಳು
ಚ್ಚರಿಸಲಾಗದು ಸರ್ವಥಾ ಸ
ತ್ಪುರುಷರಭಿಮತವಿದು ಕಣಾ ಭೂಪಾಲ ಕೇಳೆಂದ　　॥೯೯॥

---

[1] ಕದು (ಕ ಮ ಯು)　[2] ರಕ್ಕಿನಲ (ಚ ಡ ಣ ಪ), ಸೊಕ್ಕಿದರೆ (ಬ)
* ೯೫ನೇ ಪದ್ಯವು (ಗ ಡ ಪ) ಪ್ರತಿಗಳಲ್ಲಿಲ್ಲ　† (ಕ.ಮ) ಪ್ರತಿಗಳಲ್ಲಿ ೯೭, ೯೮, ೯೯, ೧೦೦ ಈ ನಾಲ್ಕು ಪದ್ಯಗಳಿಲ್ಲ

ಉತ್ತಮರುಗಳ ನಿಂದಿಸುತ ದು
ರ್ವೃತ್ತನಾಗಿಯಧರ್ಮಕೋಟಿಯೆ
ನಿತ್ಯವಿಧಿ [1]ತನಗಾ[1]ಗಿ ಧರ್ಮದ ತಾರತಮ್ಯವನು।
ಎತ್ತಲೆಂದಱಿಯದೆ ಜಗ[2]ಕ್ಕತಿ
ಮತ್ತನಾ[2]ಗಿಹ ವೇದಬಾಹ್ಯನ
ಮೃತ್ಯುದೇವತೆ ಮುಱಿದು ಮೋ[3]ದುವಳರಸ ಕೇಳೆಂದ[3] ॥೧೦೦॥

ಲೋಕಸಮ್ಮತವಾವುದದನು ನಿ
ರಾಕರಿಸುವವರುಗಳು ತಾವೇ
ನಾಕೆವಾಳರೆ ಜಗಕೆ [4]ತಮ್ಮನದಾರು[4] ಬಲ್ಲವರು ।
ಬೇಕುಬೇಡೆಂಬುದಕೆ ತಾವವಿ
ವೇಕಿ[5]ಗಳು ಮೊದಲಂಗೆ ಪ್ರಾವಾ
ಣೀಕರುಗಳವರಲ್ಲ ಚಿತ್ತೈಸೆಂದನಾ[5] ಮುನಿಪ ॥೧೦೧॥

* ಲೋಕದೊಳಗಣ ಪುಣ್ಯಪಾಪಾ
ನೀಕವನು ಯಮರಾಜನಾಲಯ
ದಾಕೆವಾಳಂಗಱುಹುವರು ಹದಿನಾಲ್ಕುಮುಖ[6]ಪಾಗಿ[6] ।
[7]ನಾಕುಕಡೆಯಲಿ[7] ಕವಿದು ಬರಿಸುವ
ರೌಕಿ ದಿನದಿನಗಳಲಿ ಗರ್ವೋ
ದ್ರೇಕದಲಿ ಮೈಮಱೆದು ಕೆಡಬೇಡೆಂದನಾ ಮುನಿಪ ॥೧೦೨॥

ಚಕ್ರಿಯೊಬ್ಬ[8]ಗೆ[8] ಹತ್ತುಕಡಿಕರ
ಲೆಕ್ಕ[9]ವಂತಾ[9] ಚಕ್ರಿಹತ್ತಱ
ಲೆಕ್ಕವೊಬ್ಬಧ್ವಜಿ [10]ಕಣಾ[10] ಧ್ವಜಿಹತ್ತಱ ಸಮಾನ।
[11]ಲೆ[11]ಕ್ಕ ವೇಶಿಗೆ ವೇಶಿಹತ್ತಱ
ಲೆಕ್ಕವೊಬ್ಬರಸಿಂಗೆ ಪಾತಕ
ವೊಕ್ಕಲಿಕ್ಕುವುದರಸುತನ ಸಾಮಾನ್ಯವಲ್ಲೆಂದ ॥೧೦೩॥

---

[1] ತಾನಾ (ಖ ಟ ದ ಣ), ಗತನಾ (ಗ) [2] ಕ್ಕೆ ಜಡಾತ್ಮರಾ (ಖ ದ) [3] ದದೆ ಬಿಡುವಳಲ್ಲೆಂದ (ಖ ಚ ಡ ದ ಪ) [4] ವಂದ್ಯರನಾರು (ಕ ಮ) [5] ಮೂಢರುಗಳು ಮಹಾತುಮರಾಕೃತಂಗಳನಱಿವರೇ ಹೇಳೆಂದನಾ (ಕ ಮ) [6] ದಿಂದ (ಗ ಚ ಡ ಪ ಯ ರ) [7] ರೇಖೆಯಲಿ ಕವಿ (ಕ ಮ) [8] ನು(ಖ ನ ಬ) [9] ವೊಂದಾ( ಟ ಡ ಪ). [10] ಗೆಯಾ (ಡ ಪ) [11] ಮಿ (ಖ ಗ ಟ ಪ ಬ)

*ಈ ಪದ್ಯವು (ಗ ಚ ಡ ಪ ಯ ರ) ಪ್ರತಿಗಳಲ್ಲಿ ೩೩ನೇ ಪದ್ಯವಾದ ಮೇಲೆ ಇದೆ

ಬಲುಕರಿಸಿ ಭೂಮಿಯೊಳಗೊಂದಂ
ಗುಲವ[1]ನೊತ್ತಿದವಂ[1]ಗೆ ಪಶುಸಂ
ಕುಲದೊಳೊಂದೇ ಗೋವನಪಹರಿಸಿದ ದುರಾತ್ಮಂಗೆ ।
ಅಳುಪಿ ಕನ್ಯಾರತ್ನದೊಳಗೊ
ಬ್ಬಳನು ಭೋಗಿಸಿ[2]ದಂ[2]ಗೆ ನರಕ[3]ದೊ
ಳಿಳಿವುದಲ್ಲದೆ ಬೇಱೆ ಗತಿಯಿಲ್ಲೆಂದನಾ ಮುನಿಪ[3] ॥೧೦೪॥

ದಾನವಿರಹಿತರಾಗಿ ಜನಿಸುವ
ಮಾನವರು ದಾರಿದ್ರ್ಯರದಱಿಂ
ಹೀನಸುಕೃತಿಗಳಾ ಸುಕೃತದಿಂ ಘೋರತರನರಕ ।
ಆ ನರಕದಿಂ ಮರಳಿ ಪಾತಕ
ಯೋನಿ ಮತ್ತೆ ದರಿದ್ರವದು ತಾ
ನೇನಮಾಡಿಯು ಬೆನ್ನ ಬಿಡದವನೀಶ ಕೇಳೆಂದ ॥೧೦೫॥

*ಆದಿಯಲಿ ಕಮಲಾಸನನು ಮಧು
ಸೂದನನು ಮಧ್ಯದಲಿ [4]ಮೇಲಣ
ಹಾದಿಯಲಿ ಗಿರಿಜೇಶನೀ[4] ತ್ರೈಮೂರ್ತಿಮಯವಾಗಿ ।
ಕಾದುಕೊಂಡಿಹರಖಿಳಲೋಕವ
ನೈದೆ ದರ್ಭಾಂಕುರದ ಮಹಿಮೆಯ
ಭೇದವನು ಬಣ್ಣಿಸುವನಾವನು ಭೂಪ ಕೇಳೆಂದ ॥೧೦೬॥

† ಬೆರಳ ಮೊದಲಲಿ ಭೂಸುರರು ನಡು
ವೆರಳೆಡೆಗಳಲಿ ಪಾರ್ಥಿವರು ತುದಿ
ವೆರಳೊಳಗೆ ವೈಶ್ಯರುಗಳೀಕ್ರಮದಲಿ ಪವಿತ್ರವನು ।
ಧರಿಸಬೇಹುದು ದಕ್ಷಿಣಕರಾಂ
ಬುರುಹದಲಿ ದಿನದಿನದ ಸಂಧ್ಯಾಂ
ತರದ [5]ಸಮಯದಲರಸ ಚಿತ್ತೈಸೆಂದನಾ ಮುನಿಪ[5] ॥೧೦೭॥

---

[1] ನಪಹರಿಸಿದಂ (ಬ) [2] ದವ (ಖ ಬ ಮ) [3] ದ ನಿಳಯವಲ್ಲದೆ ಬೇಱೆ ಸ್ವರ್ಗವದುಂಟೆ ಕೇಳೆಂದ (ಗ), ದೊಳಿಳಿವನವನೊಂಬತ್ತುಸಾವಿರವರುಷತನಕೆಂದ (ಚ) [4] ಅಂತ್ಯದಲ್ಲೈದಿಹನು ಶಂಕರನದಱಿಂ (ಕ ಮ)? [5] ನುಷ್ಠಾನಂಗಳಲಿ ಭೂಪಾಲ ಕೇಳೆಂದ (ಕ ಮ)

* (ಗ, ಚ ಡ ದ) ಪ್ರತಿಗಳಲ್ಲಿ ೧೦೬ನೇ ಪದ್ಯವಿಲ್ಲ

† ೧೦೭ ಮತ್ತು ೧೦೮ನೇ ಪದ್ಯಗಳು (ಗ ಡ ನ) ಪ್ರತಿಗಳಲ್ಲಿಲ್ಲ

ಗುರುಸುತನವೋಲಾಯು ನೀಲಾಂ
ಬರನವೊಲು ಬಲ ದಶರಥನವೊಲು
ಸಿರಿ ನದೀಜನವೋಲು ಶೌರ್ಯವು ರಾಘವನವೋಲು ।
ಅರಿವಿನಾಶನ ನಹುಷನವೊಲೈ
ಶ್ವರಿಯ [1]*ಮಾರುತಿಯವೊಲು ಗತಿ* ಸಂ
ಚರಿಸುವುದು ಹರಿಯೊಲಿದ ಮನುಜರಿಗಲ್ಲದಿಲ್ಲೆಂದ[1] ॥೧೦೮॥

ಶ್ರುತಿಯವೊಲು ಪಾವನತೆ ಕುರುಭೂ
ಪತಿಯವೋಲಭಿಮಾನ ಲಕ್ಷ್ಮೀ
ಪತಿಯವೊಲು ಸತ್ಕೀರ್ತಿ ವಿದುರನವೋಲು [2]ಸು[2]ಜ್ಞಾನ ।
ಕ್ಷಿತಿಯವೊಲು ಸ್ಥೈರಣೆ ಸುಹೃ[3]ತ್ಸಂ[3]
ತತಿಯವೊಲು ಪರಿಣಾಮ ಕುಂತೀ
ಸುತರವೊಲು [4] ಸತ್ಯಾಧಿಕರು ಮೂಜಗದೊಳಿಲ್ಲೆಂದ[4] ॥೧೦೯॥

ಗಗನದಗಲ[5]ದಿನು[5]ಗುವ ವೃಷ್ಟಿ[6]ಯೊ
ಳೊಗೆದ ಕೀಲಾಲವು ಸಮುದ್ರವ
ಹೊಗುವವೊಲು ನಾನಾಪ್ರಕಾರದ ರೂಪುಗಳಲೆಸೆವ[6] ।
ಒಗುಮಿಗೆಯ ದೈವದ ಪದಾಂಬುಜ
ಯುಗಳದರ್ಚನೆಪೂಜನೆಗಳಿವು
ಜಗದುದರನನು ಮುಟ್ಟುದಿಹವೇ ರಾಯ ಕೇಳೆಂದ ॥೧೧೦॥

ಜಲದೊಳಗೆ ವಾರಾಹ [7]ವಿಷ್ಣು[7]
ಸ್ಥಳದೊಳಗೆ ವಾಮನನು ವನಸಂ
ಕುಲದೊಳಗೆ ನರಸಿಂಹನಾಗಿಯೆ ಭಕ್ತನಿಕರವನು ।
ಸಲಹುತಿಹನೊಮ್ಮೆಯು ಜಗತ್ರಯ
ದೊಳಗುಹೊರಗೆಂದೆನ್ನ[8]ದೀಪರಿ[8]
ಜಲರುಹಾಕ್ಷನು ಕೃಷ್ಣ ಕೇಶವನಲ್ಲದಿಲ್ಲೆಂದ ॥೧೧೧॥

---

[1]ದೊಲು ಸಂಚನಿಸುವಿಂತಿವು ನರರ್ಗೆ ಯಾಶ್ವರನೊಲುವೆಯಿಲ್ಲದೊಳಿಲ್ಲ ಕೇಳೆಂದ (ಕ)* ದಲ ಕೌಬೇರನೊಲು (ಪ) [2] ವಿ (ಗ ಚ ಡ ಣ ಪ) [3] ಜ್ಞನ (ಕ) [4] ಸತ್ಯದಲ ಲೋಕದೊಳಿಲ್ಲ ಕೇಳೆಂದ (ಗ ಚ ಡ ಣ) [5] ದೊಳೊ (ಕ ಮ) [6] ಯ ಬಗೆ ಸಮುದ್ರನನಯ್ದುವಂತಿರೆ ಜಗದೊಳರ್ಜಿಸಿಕೊಂಬ ನಾನಾತೆಱದ ರೂಹುಗಳ (ಕ.ಮ). [7] ನಾಗಿ (ಚ ದ). [8] ದನುದಿವ (ಖ ಡ ಣ ಪ), ದೇ ನುಡಿ(ಗ)

ಕತ್ತ್ರಲೆಯ ಕಾಲಾಟ ಸೂರ್ಯನ
ನೊತ್ತುವುದೆ ದುಷ್ಕರ್ಮಕೋಟಿಗ
ಳೆತ್ತ ಮುಟ್ಟುವುವೈ ಮಹಾಪುರುಷರನು ಖಗಪತಿಯ।
[1]ಮುತ್ತುವುದೆ ವಿಷ[1] ಕೃಷ್ಣರಾಯನ
ಭಕ್ತರನು ಪರಿ[2]ಭವಿ[2]ಸುವುದು ತಾ
[3]ನೆತ್ತಣದು[3] ಜಡಜೀವ[4]ರಿಗೆ ಹೇಳೆಂದನಾ ಮುನಿಪ[4] ॥೧೧೨॥

ಅಱಿಯಬಾರದು ಮುಂದೆ ಬಹ ದಿನ
ಬಿಱಿಸು ನೀನೆಚ್ಚತ್ತು ನಡೆ ಮೈ
ಮಱೆಯದಿರು [5]ನಿನ್ನಾ[5]ತ್ಮಜರ ವೈರಾನುಬಂಧದಲಿ।
ಬಱಿದಹುದು ಬ್ರಹ್ಮಾಂಡವಿದು ನೀ
ನಱಿಯೆ ಮೇಲಣ ತಾಗುಬಾಗಿನ
ಹೊಱಿಗೆ ದೈವಾಧೀನವಾಗಿಹುದೆಂದನಾ ಮುನಿಪ ॥೧೧೩॥

ತೆಱಹುಗೊಡದೆ ಧರಿತ್ರಿಯೊಳಗಿಡಿ
ಕಿಱಿದ ದೈತ್ಯಸಹಸ್ರಕೋಟಿಯ
ತಱಿದು ಭೂಭಾರ[6]ವನಿಳುಹಿ[6] ನಿರ್ಜರರ ದುಗುಡವನು।
ಹಱಿದು ಹಾಯಿಕಿ ಭಕ್ತರನು ನೆಱೆ
[7]ಮೆ[7]ಱೆಯಲೋಸುಗ ಜನಿಸಿದನು ಹರಿ
ಯಱಿಯಲಾ ಶ್ರೀಕೃಷ್ಣರಾಯನು ಮನುಜನಲ್ಲೆಂದ ॥೧೧೪॥

ಆತನಾ ಪಾಂಡವರ ಹರಿಬವ
ನಾತು ಪಾರ್ಥನ ರಥಕೆ ತಾನೇ
ಸೂತನಾದನಲೈ ನಿಮಗೆ ಜಯವೆಂತಹುದು ಹೇಳು।
ಭೂತಳವನೊಪ್ಪಿಸುವುದಸುರಾ
ರಾತಿಯನು ಮಱೆವೊಕ್ಕು ಬದುಕುವು
ದೀತತುಕ್ಷಣವಲ್ಲದಿರ್ದಡೆ ಕೆಡುವಿರಕಟೆಂದ ॥೧೧೫॥

---

[1] ತತ್ತ್ವವಿಡಿದಿಹ (ಕ ಮ), ಕುತ್ತುವುದೆ ವಿಷ (ಖ ಚ ಡ ಪ), ಒತ್ತುವುದೆ ವಿಷ (ಬ) [2] ಹರಿ (ಗ ಡ) [3] ಪಥ್ಯವೇ (ಕ ಗ ಡ ಪ ಬ ಮ) [4] ರಿಂಗಳವಡುವುದಿಲ್ಲೆಂದ (ಚ) [5] ನೀನಾ (ಮ). [6] ವಿಳುಹಿದ (ಮ) [7] ಹೊ (ಚ ನ)

ಜಲಧಿಯೊಳು ದುಗ್ಧಾಬ್ಧಿ ತೀರ್ಥಾ
ವಳಿಗಳೊಳು ಸುರನದಿ ಮುನೀಶ್ವರ
ರೊಳಗೆ ವೇದವ್ಯಾಸ[1]ನಾವ್ರತಿಗಳೊಳು[1] ಹನುಮಂತ ।
ಜಲರುಹಾಕ್ಷನು ದೈವದಲಿ ಕೇ
ಳುಳಿದಭೂಮೀಪಾಲರೊಳಗ
ಗ್ಗಳೆಯನೈ ಧರ್ಮಜನು [2]ಪೃಥ್ವೀಪಾಲ ಕೇಳೆಂದ[2] ॥೧೧೬॥

ಈ ಪರಿಯ ಬೋಧೆಯಲಿ ನೃಪನನು
ತಾಪವನು [3]ಮಾಣಿಸಿ ಕು[3]ಬುದ್ಧಿ
ವ್ಯಾಪಕನು ಧೃತರಾಷ್ಟ್ರನೆಂಬಪಕೀರ್ತಿಯನು ಬಿಡಿಸಿ।
ಕಾಪಥಂಗಳ ನಿಲಿಸಿ ತತ್ತ್ವಕ
ಲಾಪವಿಮಲಜ್ಞಾನದುದಯದ
ರೂ[4]ಪು[4] ತಾನೆಂಬಂತೆ ಸೂರ್ಯೋದಯವ ಕಾಣಿಸಿದ ॥೧೧೭॥

ಧರಣಿಪನ ಸಂತೈಸಿ[5]ದನು ಮುನಿ[5]
ವರನು ತನ್ನಾಶ್ರಮಕೆ ತಿರುಗಿದ
ನುರುತರಪ್ರೇಮದಲಿ ಧೃತರಾಷ್ಟ್ರಾವನೀಶ್ವರನು।
[6]ಹರೆಯ[6]ದಮಲಾನಂದರಸದಲಿ
ಹೊರೆದು ಹೊಂಪುಳಿಯೋಗಿ ಲಕ್ಷ್ಮೀ
ವರನ ನೆನೆದನು [7]ರಾಯ ಗದುಗಿನ ವೀರನರಯಣನ[7] ॥೧೧೮॥

ನಾಲ್ಕನೆಯ ಸಂಧಿ ಮುಗಿದುದು

---

[1] ಯೋಗಿಗಳೊಳಗೆ (ಕ) [2] ಚಿತ್ತೈಸೆಂದನಾಮುನಿಪ (ಖ ಟ ದ) [3] ಪ… ಹರಿಸಿ (ಕ ಮ), ಮಾಣಿಸುತ (ಬ) [4] ಪ (ಡ ಪ) [5] ಸನ್ಮುನಿ (ಗ), ತನ್ಮು… (ಟ ಡ ದ ಬ) [6] ಕರಣ (ಗ.ಢ.ಟ ಣ). [7] ಕೇಳು ಜನಮೇಜಯಮಹೀಪಾಲ (ಬ…

# ಐದನೆಯ ಸಂಧಿ

---

**ಸೂಚನೆ ||** *ವೀರಪಾಂಡವರದಟನಾ ದನು
ಜಾರಿ ಹೇಳಿದ ವಚನರಚನೆಯ
ಕೌರವಗೆ ಬಂದಬುಹೆ ಕೋಪಿಸಿ ಸಂಜಯನ ಜಚಿದ ||

ಬೀಳುಕೊಂಡುದು ರಜನಿ ಕುರುಭೂ
ಪಾಲನುಪ್ಪವಡಿಸಿದನೋಲಗ
ಶಾಲೆಯಲಿ ನೆರಹಿದನು [1]ಸಭ್ಯರನಾಪ್ತಮಂತ್ರಿಗಳ[1] |
ಕೇಳುವೆವು ಕರೆ ಸಂಜಯನನವ
ರೋಲಗದ ಮೈಸಿರಿಯನೆಂದು ನೃ
ಪಾಲನಟ್ಟಿದ ದೂತನೊಡನೈತಂದ[2]ನೋಲಗಕೆ[2] ||೧||

ಬಂದು [3]ಕಾಣಿಕೆಗೊಟ್ಟು ಹರುಷದೊ
ಳಂದು ವೈಯಿಕ್ಕಿದನು ಕುಂತೀ[3]
ನಂದನನು ಬೆಸಗೊಂಡು ಕಳುಹಿದನುಚಿತವಚನದಲಿ |
ಎಂದು ಬಳಿಕಿನ ರಾಜಕಾರ್ಯವ
ನಂದು ಬಿನ್ನೈಸಿದನು ಚಿತ್ತೈ
ಸೆಂದು ಧೃತರಾಷ್ಟ್ರಂಗೆ ದುರ್ಯೋಧನಗೆ ಕೈಮುಗಿದು ||೨||

ಜೀಯ ಬಿನ್ನಹವಿಂದು ಪಾಂಡವ
ರಾಯರೈಶ್ವರ್ಯವನು ಸಾವಿರ
ಬಾಯ[4]ಶೇಷನು[4] ಹೊಗಳಲಳವಲ್ಲಿನ್ನ ಪಾಡೇನು |
ನಾಯಕರ ಕಡುಹುಗಳನವರವ
ರಾಯತವನನಿಬರಿಗೆ ಕಮಲದ
ಳಾಯತಾಕ್ಷನ ಕರುಣದಳತೆ ವಿಚಿತ್ರ[5]ವಾಯ್ತೆಂ[5]ದ ||೩||

---

* (ಕ) ಪ್ರತಿಯಲ್ಲಿ ಸೂಚನೆ ಪದ್ಯವಿಲ್ಲ ಉಳಿದ ಪ್ರತಿಗಳಲ್ಲಿ ಸೂಚನೆ ಪದ್ಯವು ನಾನಾವಿಧವಾಗಿರುವುದು ಆ ಪದ್ಯಗಳನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ

[1] ಸಚಿವರನಾಪ್ತಮನ್ನೆಯರ (ಐ) [2] ಸಂಜಯನು (ಗ) [3] ವೈಯಿಕ್ಕಿದನು ಕುರುನೃಪವೃಂದವನು ಪರಿವಾರವನು ಯವು (ಖ ಗ ಬ ಮ ಯು) [4] ಸರ್ಪನು (ಟ ಡ ಐ ಪ ರ) [5] ತರವೆಂ (ಝ ನ ಬ ಯು ರ)

ಓಲಗದೊಳುಬ್ಬಿ[1]ದ್ದು[1] ನುಡಿಗಳ
[2]ಹೂಳಿ[2] ತಮತಮಗೆ[3]ನ್ನ[3] ಜಱೆದರು
ಕಾಳಗಕೆ ಕೈ[4]ಗ[4]ಟ್ಟಿ [5]ಹಿಂ[5]ಡೆದ್ದೊದಱಿತವನಿಪರು ।
ಮೇಲೆ ಸಂತೈಸಿದನು ಧರ್ಮನೃ
ಪಾಲನಲ್ಲಿಂ ಬಳಿಕ [6]ಮುರಹರ
ನಾ[6]ಲಯಕೆ ಪರಿಮಿತದಲರ್ಜುನನೆನ್ನ ಕರಸಿದನು ॥೪॥

ದೇವನಿದ್ದನು ಸತ್ಯಭಾಮಾ
ದೇವಿಯರ ನಸುಮಲಗಿಯರ್ಜುನ
ದೇವನಂ[7]ಕ[7]ದ ಮೇಲೆ ಸಿರಿಪದ[8]ಪಂಕಜವ[8]ನೀಡಿ ।
ನಾವು [9]ಬರ[9]ಲೆಮಗುಚಿತದಲಿ ಸಂ
ಭಾವನೆಯ ಮಾಡಿ[10]ದರು ನಮಗಿ[10]
ನ್ನಾವುದನು ನೇಮಿಸಿ[11]ದಿ[11]ರೆನಲಿಂತೆಂದನಸುರಾರಿ ॥೫॥

ಎಮಗೆ ಸರಿಯಿತ್ತಂಡದಲ್ಲಿಯ
ಮಮತೆ [12]ಬೇಱೊಬ್ಬರಲಿ[12] ಪಕ್ಷ
ಭ್ರಮೆಯ ಮಾಡೆವು ಹಿತವ ಬಯಸುವೆವೆರಡುಸಂತತಿಗೆ ।
ಕಮಲಮುಖಿ [13]ಸುಲ[13]ವಡೆದು ಲಕ್ಷ್ಮೀ
ರಮಣ ಲಕ್ಷ್ಮೀರಮಣ ಲಕ್ಷ್ಮೀ
ರಮಣ ಎಂದೊಱಲಿದರೆ ಸಂಜಯ ನೊಂದೆ ನಾನೆಂದ ॥೬॥

ಕಾವುದೈ ಗೋವಿಂದ [14]ಸಲಹೈ[14]
ದೇವಕೀಸುತ ಗಂಡರೈವರ
ಭಾವ ಬೆಟ್ಟಿತು ನೀನಲ್ಲೈ ದೇಸಿಗ[15]ರ ದೇವನಲ್ಲೈ[15] ।
ದೇವ ಕೆಟ್ಟೆನು ಕೆಟ್ಟೆನೈ ಕರು
ಣಾವಲೋಕನದಿಂದ [16]ಸಲಹೈ[16]
ಜೀವ[17]ನವ[17]ನೆಂದೊ[18]ಱಲಿದರೆ ಹಂಗಿಗನು ತಾ[18]ನೆಂದ ॥೭॥

---

[1] ದ್ದ (ಚ) [2] ಕೇಳಿ (ಚ) [3] ದ್ದು (ಗ) [4] ಶ (ಬ) [5] ಮಿಂ (ಚ ಟ ರ ನ)
[6] ಮಱುದಿನವಾ (ಝ) [7] ಗ (ಕ ಗ ಚ ಬ ಮ) [8] ಕಮಲವನು (ಗ ಟ ದ)
[9] ಹೊಗ (ಮ) [10] ಸಿದನವನಿ (ಕ), ಸಿದನೆಮಗಿ (ಚ ಟ ಯ) [11] ದ (ಕ ಖ ಚ ಡ ಪ)
[12] ಬೇಱೊಂದಿಲ್ಲ (ಮ) [13] ಬಡಿ (ಕ ಖ ಚ, ಬ ಯ) [14] ಕರುಣಿಸು (ಕ ಮ)
[15] ರಿಗಧಿದೈವ (ಖ ಗ ಚ ಣ ಯ ರ) [16] ತಡೆಯೆಮ್ಮ (ನ ಬ) [17] ಎದ (ಣ ಯ ರ)
[18] ದಱದಳು ಹಂಗಿಗನು ತಾ (ಖ), ಱರೆ ಸಂಜಯ ನೊಂದೆ ನಾ (ಗ ಚ, ಟ ಣ ಯ)

ಭಂಟರಾವ್ [1]ಭಜಕ[1]ರಿಗೆ ನೆನೆವ[2]ರ[2]
ನಂಟ[3]ರೆಮಗೊಲಿ[3]ದಂತೆ ಹೊಗಳಿದ
ರೆಂಟುಮಡಿ ಮೆಚ್ಚುವೆವು ಮೆಚ್ಚೆವು ತರ್ಕಸಾಧಕರ।
ಉಂಟು ಪಾಂಡವರೈವರಲಿ ಬಲು
ನಂಟತನ ಮಱೆಯೇ[4]ಕೆಯಿ[4]ವರಿಗೆ
ಕಂಟಕರು ನಮಗಾದ ಕಂಟಕರೆಂದನಸುರಾರಿ ॥೮॥

ನೆನೆವುದೆಂದನು ಪಾರ್ಥನಾ ಕಾ
ನನದೊಳಗೆ ಗಂಧರ್ವರಲಿ ಬಂ
[5]ಧನವನಾ[5] ಗೋಗ್ರಹಣದಲಿ ಮಾಡಿದ [6]ಪರಾಭವವ[6]।
ವನಜಮುಖಿಯನು ಬಯಸಿದಡೆ ಬಿ
ಲ್ಲನಲಿ ಬಡಿವಡೆದುದನು ಕೌರವ
ಜನಪ ಮಱೆದಿರಲಾಗದೆಂದರಸಂಗೆ ಹೇಳೆಂದ ॥೯॥

ವೀರಭೀಮನ ಗದೆಯ ಹೊಯ್ಲಿನ
ಭಾರಣೆಯ ನಮ್ಮತುಳಚಾಪದ
ಸಾರಶಸ್ತ್ರಾವಳಿಯ ಮಳೆಗಾಲದ ಮಹಾ[7]ದ್ಭುತವ[7] ।
ಧೀರನಕುಲನ ಸಾತ್ಯಕಿಯ [8]ಬಲು
ಕೂರಸಿಯ[8] ಸಹದೇವ ಮತ್ಸ್ಯರು
ದಾರತೆಯ ನಿಮ್ಮರಸ[9]ನಱ[9]ದಿಹುದೆಂ[10]ದು ಹೇಳೆಂದ[10] ॥೧೦॥

*ಅಂದು ಜೂಜಿನ ಸಭೆಯೊಳಗೆ ನಾ
ವೆಂದ ಮಾತುಗಳುಂಟು ತಾವದ
ಮುಂದೆ ನೋಡಲಿ ಕರ್ಣಶಕುನಿ[11]ಜಯದ್ರಥಾ[11]ದಿಗಳು ।
ಇಂದು ನೆನೆವುದು ದೇಶಕಾಲವ
ಹಿಂದುಗಳೆಯದೆ ಬೇಗ ಮಾಡುವೆ
ವೆಂದು ಬಿನ್ನಹಮಾಡಹೇಳಿದನರ್ಜುನನು ನಿಮಗೆ ॥೧೧॥

---

[1] ಭಕ್ತ (ಖ ಗಾ ರ ಬ) [2] ರು (ಗ) [3] ರೆವಗಾ (ಕ ಮ), ರಹೆವೊಲ (ಚ, ಡ ಬ) [4] ತಕ (ಟ ದ) [5] ದನುವನಾ (ಚ ಟ ದ), ದನುವರವ (ಠ ಣ ಪ ಯ ರ) [6] ಪಲಾಯನವ (ಕ ಖ ಗ ಪ ಮ), ಪರಾಕ್ರಮವ (ಚ ಬ) [7] ಧ್ವನಿಯ (ಕ ಮ) [8] ಸಂಧಾರಣೆಯ (ಕ ಮ), ಸಂಧಾರವನು (ಖ ಣ ರ) [9] ನೆನೆ (ಕ ಚ ಡ ಬ ಮ) [10] ದನಾಪಾರ್ಥ (ಖ ಗ ದ ನ ಫ) [11] ಸುಯೋಧನಾ (ಖ ಗ)

* ೧೧ನೇ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ

ತೊಡೆಗಳಿಗೆ ಸುಕ್ಷೇಮವೇ ವಿ
ನ್ನೊಡೆಯನವನೊಡವುಟ್ಟಿದನ ಮೈ
ಜಡಿದುದೇ ಪಾಲಿಸಿದಡನಿಬರಿಗಹುದು [1]ರಕ್ತ[1]ಜಲ |
ಒಡನೆ ಹುಟ್ಟಿದ[2]ನೂಱುವರು[2] ಮೈ
[3]ಗೆಡರೆಲೇ[3] ಬೆಸಗೊಂಬುದಂಜ[4]ದೆ
ಯೊ[4]ಡೆಯರಿಗೆ [5]ಹೊಣೆಗೊಂಡೆ[5] ಹೇಳೆಂದಟ್ಟಿದನು ಭೀಮ ||೧೨||

ಸಾಕು ಸಂಜಯ ಗಳಹದಿರು ಘಡ
[6]ನೂಕು ನೂಕಾರಿವನನ[6]ಟ್ಟಿದ
ರಾಕುರಾರರ ಬಯಲಗಗ್ಗಹಗರ್ಜನೆಯ ಗರ ಹೊಡೆದು |
[7]ತೇಕಿ[7] ತಲೆಕೆಳಗಾದನಿವನವಿ
ವೇಕಸಾಗರನೆಲೆ ನೃಪತಿ ಜಗ
ದೇಕವೀರನು ಕರ್ಣ ತಾನಿರೆ ಸಂಧಿಯೇಕೆಂದ ||೧೩||

ಮಂ[8]ದಿ[8]ಯಲಿ ಮೈಮಱೆದು ಬಾಹಿರ
ರೆಂದ ಮಾತನು ರಾಜಸಭೆಯಲಿ
ತಂದು [9]ಹರ[9]ಹುವನಿವನು ಶಿಷ್ಟನೆ ಜಗದ ಭಂಡ[10]ನಲ[10] |
ಇಂದುಮೌಳಿಯನೊಂದುಬಾರಿಗೆ
ಹಿಂದುಮುಂದನು ಮಾಡುವೆನು [11]ತಾ
ಮಂದಿ[11] ಕುಂತೀಮಕ್ಕಳದಿರೇ ಎಂದನಾ ಕರ್ಣ ||೧೪||

ಭಂಡನೇ ಸಂಜಯನು ಲೋಕದ
ಭಂಡ ನೀನೆಲೆ ಕರ್ಣ ನಿನಗಾ
ಪಾಂಡವರ ಪರಿಯಂತವೇ ನಿನಗವರ ಸೇನೆಯಲಿ |
ಪುಂಡನೊಬ್ಬನೆ ಸಾಕು ಕೆದಱು[12]ವೆ[12]
ಗಂಡುಗರ್ವದ [13]ಮಾತ ನಿನ್ನನು[13]
ದಿಂಡುದಱಿವನು ಮುನಿದಡರ್ಜುನನೆಂದನಾ ಭೀಷ್ಮ ||೧೫||

---

[1] ರುಧಿರ (ಗ ನ) [2] ನೂರ್ವರೂ (ಕ ಮ), ರನಿಬರೂ (ಖ ಬ), ನೂರ್ವರುಱ (ಡ ಯ) [3] ಗುಡರೆ (ಕ ಮ) [4] ದೆ ನಿನ್ನೊ (ಕ ಮ) [5] ನೀ ಹೋಗಿ (ಕ ಮ), ಹಣೆಗೊಂಡೆ (ಖ ಬ) [6] ನೂಕಿವನನಾರಲ್ಲಿಗ (ಗ ಟ ದ ಪ ಯ) [7] ಲೋಕ (ಕ ಮ) [8] ದೆ (ಚ ಟ ನ ಮ), [9] ಗೆಳ (ಟ ದ ಪ) [10] ನಿವ (ಕ ಚ ಟ ಪ ಬ), ನವ (ಮ) [11] ತನಗಿಂದು (ಝ) [12] ವ (ಕ ಖ ಚ ಬ ಮ) [13] ನುಡಿಯ ನಿಮಿಷಕೆ (ಚ ಬ ಮ).

* ಖುಲ್ಲನಿವನೀ ಕರ್ಣನಿವ [1]ದಿಟ[1]
ಬಲ್ಲದ[2]ನು[2] ಬವರದಲ [3]ಹಿಂ[3]ದಿಪ
ನಲ್ಲ ನಂಬುಗೆಯುಂಟೆ ಮರುಳೇ ಹೇಳಿ ಫಲವೇನು ।
ಇಲ್ಲ ನೋಡರ್ಜುನಗೆ ಪಡಿ ನರ
ರಲ್ಲಿ ನಿರ್ಜರರಲ್ಲಿ ಪನ್ನಗ
ರಲ್ಲಿ ಕೈವಾರಿಗಳೆ ನಾವಿನ್ನೆಂದನಾ ಭೀಷ್ಮ ॥೧೬॥

[4]ಮುಱಿ[4]ಯದಿರು ಗಾಂಗೇಯನೆಂದುದು
ಪರಮ[5]ತತ್ತ್ವವು[5] ಪಾರ್ಥನನು ಸಂ
ಗರದೊಳಾನುವರಿಲ್ಲ ಕೇಳಮರಾಸುರಾಳಿಯಲಿ ।
ದುರುಳರಾಡುವ ಹೊಳ್ಳುನುಡಿಗಳು
ಹಿರಿಯರಭಿಮತವಲ್ಲ ಸಂಧಿ[6]ಗೆ[6]
ಕೊರಳುಗೊಳಿಸುವುದುಚಿತವೆಂದನು ದ್ರೋಣನರಸಂಗೆ ॥೧೭॥

ಹುರುಳುಗೆಡಿಸುವಿರಾವು ನುಡಿದರೆ
ಕರಗಿ ಕುಂತೀಮಕ್ಕಳೆಂದರೆ
ಹರಹಿಕೊಂಬಿರಿ ಡಿಂಬವೆಮ್ಮಲಿ ಜೀವವವರಲ್ಲಿ ।
ಭರತಸಂತತಿಗಳಲಿ ಕೆಲಬರು
ನರರೆ ಕೆಲಬರು ಸುರರೆ ಸಾಕಂ
ತಿರಲಿ [7]ಸಮ[7]ರದೊಳೆ[8]ಮ್ಮ[8] ನೋ[9]ಡೆಂದನು ಸುಯೋಧನನು[9]
॥೧೮॥

ಬೇಡ ಮಗನೇ ಕೃಷ್ಣರಾಯನು —
ರೂಢಿಸಿದ ಕಟ್ಟಾಳು ಕೆಲಕೆಲ
ರಾಡುವರು ಸಾಕ್ಷಾತುಲಕ್ಷ್ಮೀಕಾಂತ ಹರಿಯೆಂದು ।
ಕೂಡಿಕೊಂಡಿಹನಾತನವರನು
ಕೇಡ[10]ನವರಿಗೆ ಬರಿಸ[10]ಲೀಯನು
ನಾಡನೊಪ್ಪಿಸು ಮಗನೆಯೆಂದನು ಬೆದಱಿ ಧೃತರಾಷ್ಟ್ರ ॥೧೯॥

---

* ೧೬ನೆಯ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ

1 ದಿರು (ಚ ಬ) 2 ರು (ಚ ಬ). 3 ಯೆಂ (ಖ ಟ ಣ ಪ ಬ) 4 ಮಱಿ (ಚ) 5 ಮಂತ್ರವು (ಣ ಯ) 6 ಯ (ಕ ಖ ಚ ಬ ಮ) 7 ಬವ (ಡ) 8 ನ್ನ (ಕ ಚ ಪ ಬ ಮ) 9 ಡುವುದೆಂದನಾ ಧೂಪ (ಟ.ಣ ಪ ಯ) 10 ನೊಂದನು ಮಾಡ (ಗ ಣ ಪ ಯ ರ)

ಮರುಳುಗಳಲಾ ಬೊಪ್ಪನವರೀ
ಮುರಹರನು ಹ[1]ರಿ[1]ಯೆಂದು ಮುನ್ನವೆ
ಅಱಿದಿಹೆನು ನೀವಂಜದಿರಿ ನಿಮಗಾಗದವಸಾನ ।
ಗುರುನದೀಸುತಮುಖ್ಯರಿ[2]ರಲೀ[2]
ಕುರುಕುಲಕೆ [3]ಕೇಡಹುದೆ ಕೊಲುವಡೆ[3]
ಸುರಪತಿಯಸುತ[4]ನಳವೆ[4] ಎಂದನು ಕೌರವರರಾಯ ॥೨೦॥

ಭಾರ ಹೆಚ್ಚಿದಡೊಱಲಿ ಧರಣೀ
ನಾರಿ ಬಿನ್ನಹಮಾಡಿದಡೆ ದೈ
ತ್ಯಾರಿ ಬಿಜಯಂಗೈ[5]ದನಿಲ್ಲಿಗೆ[5] ಮನುಜವೇಷದಲಿ ।
ಭೂರಿ[6]ದನುಜ[6]ರನೊರಸಿದನು ಕೈ
ಯಾರೆ ಬಳಿಕರ್ಜುನನ ಕೈಯಲಿ
ಕೌರವರ ಕೊಲಿಸುವನು ನಾವಿ[7]ದಕಂ[7]ಜಲೇಕೆಂದ ॥೨೧॥

ಕಾವ[8]ನಾತನೆ[8] ಕೊಲುವ[8]ನಾತನೆ[8]
ಸಾವೆನಾತನ ಕೈಯಬಾಯಲಿ
ನೀವು ಪಾಂಡವರೊಡನೆ ಸುಖದಲಿ ರಾಜ್ಯ[9]ವಾಳು[9]ವುದು ।
[10]ಸಾವಿಗಾನಂಜಿದೆನೆ ಬದುಕುವ[10]
ನೀವು ಚಿಂತಿಸ[11]ಲೇಕೆ[11] ನಿಮ್ಮನು
ಕಾವನೈ ಕರುಣದಲಿ ಗದುಗಿನ ವೀರನಾರಯಣ ॥೨೨॥

ಐದನೆಯ ಸಂಧಿ ಮುಗಿದುದು

---

[1] ಗೆ (ಕ ಮ) [2] ರುತಿರೆ (ಕ ಚ ಮ) [3] ಕೇಡುಂಟೆ ಮುನಿದಡೆ (ಚ)
[4] ಎದಿರೆ (ಚ), ಗಳವೆ (ಯ ರ) [5] ವನವನಿಗೆ (ರ) [6] ದೈತ್ಯ (ಗ ಚ ಡ ನ).
[7] ನ್ನಂ (ಖ ಗಾ.ರ) [8] ಡಾತನು (ಚ ರ ಯ ರ) [9] ಮಾಡು (ಟ ರ ದ ಪ.ಬ)
[10] ಸಾವವರು ನಾವಂಜಿ ಬದುಕೆವು (ಗ ಟ ದ ನ ಪ), ಸಾವಡಂಜೆನು ತಾನು ಬದುಕುವ (ತ). [11] ಬೇಡಿ (ಗ ಟ.ಡ ಣ ರ)

# ಆರನೆಯ ಸಂಧಿ

---

ಸೂಚನೆ॥ ಸಮರದನುಸಂಧಾನದಲಿ ಸಂ
ಭ್ರಮಿಸೆ ಶೌರಿ ಸಮೀರಸುತನನು
ಸಮತೆಯಲಿ ಸೇರಿಸಿದನಂದು ಸಮಗ್ರಸೂಕ್ತಿಯಲಿ ॥

ಕೇಳು ಜನಮೇಜಯಧರಿತ್ರೀ
ಪಾಲ ಧರ್ಮಜನಹಿತಮಂತ್ರಿಯ
ಬೀಳುಕೊಟ್ಟನು ಬಂದನಸುರಾರಾತಿ[1]ಯೋಲಗಕೆ[1] ।
ಮೇಲಣನುವಿನ್ನೇನು ಲಕ್ಷ್ಮೀ
ಲೋಲ ಕರುಣಿಸು ಕೌರವಕ್ಷಿತಿ
ಪಾಲನಲಿ ನಮಗೇನು ಘಟಿಸುವುದೆಂದು ನೃಪ ನುಡಿದ ॥೧॥

ಕ್ಷಮೆಗೆ ಸೇರುವರಲ್ಲ ಮೂರ್ಖರು
ಕುಮತಿಗಳು ಮುಂದಱಿಯ[2]ರ[2]ವರ
ಕ್ರಮ[3]ದಿ ನೆಗಳಿದಡ[4]ಳಿವುದನ್ವಯದಮಳಕೀರ್ತಿಗ[4]ಳು[4]।
[5]ಎ[5]ಮಗೆ ಹದನಿನ್ನೇನು ಸಂಧಿಯೊ
ಸಮರವೋ ಚಿತ್ತೈಸಿ ಬೆಸಸೈ
ಕಮಲಲೋಚನ ಎಂದು ಬಿನ್ನೈಸಿದನು ಯಮಸೂನು ॥೨॥

ಏನು ನಿನ್ನಭಿಮತವು ವರಸಂ
ಧಾನವೋ ಸಂಗ್ರಾಮವೋ ನಯ
ವೇನು ಮನ[6]ದೋವರಿಯೊಳಿರಿಸದೆ[6] ಹೇಳು ನಿಶ್ಚಯವ ।
ನೀನೊಲಿದ ಹದನಾವುದದನೊಲಿ
ದಾನು ಘಟಿಸುವೆನೆಂದು ಕುಂತೀ
ಸೂನುವನು ಬೆಸಗೊಂಡನಸುರಾರಾತಿ ನಸುನಗುತ ॥೩॥

---

[1] ಯರಮನೆಗ (ಚ), ಯಿದ್ದೆಡೆಗೆ (ಮ) [2] ದ (ಗ ಜ ಡ ನ ಪ) [3] ದ ನೆಗಳಿಕೆಯ (ಗ ಟ ಣ ಪ ಬ) [4] ಳೆ (ಗ ಡ ಞ ಪ) [5] ನ (ಗ ನ ಪ) [6] ದೊಳು ವಂಚಿಸದೆ ನೀ (ಟ ದ).

ಅಳಿವುವೊಡಲುಗಳವನಿಸಾಗರ
ವಳಿಯಲುಳಿವುದು ಕೀರ್ತಿ ಸೋದರ
ರೊಳ[1]ಗೊಳಗೆ ಕದಡಾಗಿ ಕಾದಿದರೆಂಬ[1] ದುರ್ಯಶದ ।
ಹಳಿವು ಹೊಱುವುದು ದೇವ ಸುಡಲೀ
ನೆಲನನಾ ಕೌರವನ ಕೈಯಲಿ
ಕೆಲವು ನಗರಂಗಳನು ಕೊಡಿಸಿಯೆ ಸಂತವಿಡಿಯೆಂದ ॥೪॥

ವರಕುಶಸ್ಥಳವನು ವೃಕಸ್ಥಳ
ಪುರವ ವಾಸಂತಿಯನು ಕೌರವ
ಧರಣಿಪಾಲನೊಳೀಸಿ ಕೊಡುವುದು ವಾರಣಾವತವ ।
ಶರಧಿಮೇರೆಯೊಳೈದನೆಯ ಪುರ
ವರವನೊಲಿದುದ ಕೊಡಲಿ ಮನಮ
ತ್ಸರವ [2]ಮಱೆದೋಲೈ[2]ಸುವೆವು ಧೃತರಾಷ್ಟ್ರಭೂಪತಿಯ ॥೫॥

ನೀವು ಬಿಜಯಂಗೈದು ಸಂಧಿಯ
ನಾವಪರಿಯಲಿ ಘಟಿಸಿ ಕುರುಭೂ
ಪಾವಳಿಯಲೆಮ್ಮರವು ಸಂ[3]ಭವಿಸುವ[3]ವೊಲೆಸಗುವುದು ।
ಲಾವಕರ ನುಡಿ[4]ಗಳಲಿ[4] ಕೆಡುವುದು
ಕೋವಿದರ ಮತವ[5]ಱರ[5]ಮೇಲೆಮ
ಗಾವ ಮನಮುನಿಸಿಲ್ಲ ಸಂಧಿಯ ರಚಿಸಿ ಸಾಕೆಂದ ॥೬॥

ಎನೆ ಮುರಾಂತಕನಳುಕಿ ಯಮನಂ
ದನನ [6]ಮತಿ[6] ಸಂಧಾನದಲಿ ಸಂ
ಜನಿಸಿತಾದಡೆ ಕಾಣೆನವನಿಯ ಹೊಱಗೆ ಹಱಿವುಗಳ ।
ಮನದೊಳನುಸಂಧಾನವಂತಕ
[7]ತನಯನಲಿ ತೊದಲಾಯ್ತು[7] ತೋಟಿಯ
ನೆನಹು ತಾನೆಂತೆನುತ ಚಿಂತಿಸುತಿರ್ದನಸುರಾರಿ ॥೭॥

---

[1] ಗೆ ತಾವ್ ಹಗೆಯಾಗಿ ಕಾದಿದರೆಂಬ (ಕ ಮ), ಗೆ ನೆಱೆ ಕಡಿದಾಡಿ ಬದುಕಿದನೆಂಬ (ಗ), ಗೆ ಕಡಿದಾಡಿದರು ಪಾಂಡವರೆಂಬ (ಟ ದ) [2] ಬಿಟ್ಟೋಲಗಿ (ಖ ಡ) [3] ಭಾವಿಪ (ಡ ಬ) [4] ಗೇಳಿ (ಟ ಡ ಪ ಬ) [5] ಲ್ಲ (ಕ ಮ). [6] ನುಡಿ (ಕ ಮ). [7] ತನುಜನಲ ತೊಳಸಾಯ್ತು (ಗ ಛ ಟ ದ)

ಎಲೆ ಕೃತಾಂತಜ ವೈರಿಭೂ[1]ಭುಜ[1]
ಕುಲಕೃತಾಂತ ಸರಾಗನಹೆ ನಿ
ರ್ಮಲಿನ[2]ಧರ್ಮದಲಾ[2] ಸುಯೋಧನನಧಿಕಕಲ್ಮಷನು ।
ನೆಲನ ಕೊಡಲರಿಯನು ವೃಥಾ ಕ
ಕ್ಕುಲಿತೆಯಲ್ಲದೆ ಕಾಣೆನಿದರಲಿ
ಫಲವನೆಂದಸುರಾರಿ ನುಡಿದನು ಧರ್ಮನಂದನಗೆ ॥೮॥

ಅರಸನಭಿಮತವಿಂದು ಸಂಧಿಗೆ
[3]ತೆರಳಿ[3]ತೆಲೆ ಪವಮಾನಸುತ ನಿ
[4]ನ್ನರಿತ[4]ವಾವುದು ಮನವ ವಂಚಿಸಬೇಡ ಹೇಳೆನಲು ।
ಧರಣಿಪತಿ ತಪ್ಪುವನೆ ಕರ್ಕಶ
ತರದ ಕದನದಲೇನುಫಲ ಸೋ
ದರರ [5]ವಧೆ[5]ಗೊಡಬಡುವನಲ್ಲಸುರಾರಿ ಕೇಳೆಂದ ॥೯॥

ಹಗೆಯ[6]ಲೆಮ್ಮವರುಗಳಲೆದೆ[6]ಗಿ
ಚ್ಚುಗಳ ಖುಲ್ಲಕುರಾರರವನಂ
ಬುಗೆಯು [7]ಬಳಸಿ[7]ದರದು ಪುರಾಕೃತಕರ್ಮ[8]ದವಶೇಷ[8] ।
ಬಗೆಯೆ ನ[9]ವ[9]ಮಾನವನು ಕೌರವ
ರಗಡುಮಾಡಿದರೆಂಬ ಚಿತ್ತದ
ದುಗುಡ[10]ವೆಮಗಿನ್ನಿ[10]ಲ್ಲ ಸಂಧಿಯ [11]ರಚಿಸಿ ಸಾಕೆಂದ[11] ॥೧೦॥

ಎಲೆ ಮಹಾದೇವಾಯ್ತು ಹಾಲಾ
ಹಲ ಸುಧಾರಸವುಕ್ಕಿ ದುರಿಯು
ಗ್ಗ[12]ಳವು[12] ಸೀತಳವಾಯ್ತು ಸಿಡಿಲಾಟೋಪ ನಯವಾಯ್ತು ।
ಕೊಳುಗುಳಕೆ ಪವಮಾನನಂದನ
ನಳುಕಿದನು ಮಝು ಮಾಯೆ ಕುಂತೀ
ಲಲನೆ [13]ಹೆತ್ತಳು ಸುತರನೆಂದನು ಶೌರಿ ನಸುನಗುತ[13] ॥೧೧॥

---

1 ಮಿಪ (ಖ ಗ ಡ ಣ ಪ) 2 ನೀನಹೆಯಾ (ಚ ನ ಪ), ಧರ್ಮನು ನೀ (ಟ ದ ಬ) 3 ತಿರುಗಿ (ಕ ಖ ಮ), ಮರಳಿ (ಚ ಡ ಪ) 4 ನ್ನೈಜಕ (ಖ ಡ ನ.ಬ) 5 ಕೊಲೆ (ಕ ಣ ಮ) 6 ನಮ್ಮವರಲ್ಲಿಯೆಡೆ (ಮ) 7 ಮಾಡಿ (ಖ ಚ.ಣ ಬ) 8 ಫಲಶೇಷ (ಝ), ಫಲಭೋಗ (ಟ ದ) 9 ಪ (ಕ) 10 ವೆನ್ನೊಳಗಿ (ಕ ಮ) 11 ಘಟಿಸಿ ಸಾಕೆಂದ (ಖ ಟ ದ ಬ), ರಚಿಸಿ ನೀವೆಂದ (ಚ ರ ನ), ರಚಿಸಬೇಕೆಂದ (ಪ) 12 ಳದ (ಚ ಟ ದ ನ ಪ), ಳಿಕೆ (ರ) 13 ಪಡೆದಳೊ ಮಗನನೆಂದನು ದಾನವಧ್ವಂಸಿ (ಗ ಟ ದ ನ ಪ)

ಈತನಭಿಮತವಿದು ಜಗದ್ವಿ
ಖ್ಯಾತಸಾಹ[1]ಸ[1] ಪಾರ್ಥ ಹೇಳೆನೆ
[2]ನೂತ[2]ನಾಳಾಪವನು ಕೇಳ್ವೆವು ಶ್ರುತಿರಸಾಯನವ ।
ಭೀತಿ ಬೇ[3]ಡಿನ್ನೆನಲು ಬೇಱೆನ
ಗೇ[3]ತಱಭಿಮತವೇನ [4]ಬೆಸಸಿ[4]ದ
ಡಾತುಕೊಂಬೆನು ಶಿರದೊಳೆಂದನು ಪಾರ್ಥ ಕೈಮುಗಿದು ॥೧೨॥

ನಕುಲ [5]ಹೇಳೆನೆ ಹದನ ನಿನ್ನಯ
ಯು[5]ಕುತಿ [6]ಸಾಮವೊ[6] ಮೇಣು ಸಮರವೊ
ಸುಕರಮಂತ್ರವನಱವೆ ನೀನೆಮಗಂಜಬೇಡೆನಲು ।
ಯುಕುತಿ*[7]ಯಿದಕಿನ್ನೇನುಭಯ[7]ರಾ
ಜಕವ ಸಂತೈಸುವುದು ಬೇಱೆನ*
ಗುಕುತಿಯೆಲ್ಲಿಯದೆಂದನಾ ಮಾದ್ರೇಯ ವಿನಯದಲಿ ॥೧೩॥

ಆವುದಭಿಮತವೇನು ಹದ ಸಹ
ದೇವ ನೀ ಹೇಳೆನಲು [8]ಕೇಳೆಲೆ[8]
ದೇವ ಸೇರದು ಸಂಧಿ ಸಂಗರವೆನಗೆ ಸಮ್ಮತವು ।
ಆವ ವಿಧದಲಿ ಸಮರ[9]ವನೆ[9] ಸಂ
ಭಾವಿಸುವುದೆನೆ ನಗುತ [10]ವರ[10]ರಾ
ಜೀವ[11]ನಾಭನು ಕಳುಹಿ[11]ದನು ದ್ರೌಪದಿಗೆ ಚರರುಗಳ ॥೧೪॥

ದೇವಿ ಚಿತ್ತೈಸುವುದು ವರವಸು
ದೇವನಂದನನಟ್ಟಿದನು ಸಂ
ಭಾವಿಸುವುದರಿರಾಯರಲಿ ಸಂಧಾನಸೌರಂಭ ।
ನೀವು ಬಿಜಯಂಗೈದು ಚಿತ್ತದೊ
ಳಾವ ಹದ[12]ನಾ ಹದನನಾ[12] ರಾ
ಜೀವ[13]ನಾಭಂಗಱುಹಿಯೆಂದರು ಚರರು ಕೈಮುಗಿದು[13] ॥೧೫॥

---

[1] ಸಿ (ಚ ಡ ಣ ರ) [2] ಮಾತಿ (ಕ ಬ ಮ) [3] ಡೆಂದೆನಲು ನಮಗಿನ್ನೇ (ಗ) [4] ಹೇಳಿ (ಗ ಟ ರ ಣ ದ ಪ) [5] ನೀ ಹೇಳೇನು ಹದ ನಿನ್ನು (ಗ ಟ ರ ಣ ಪ), ಹೇಳನುಮತವ ನಿನ್ನಯ ಯು (ಬ) [6] ಸಂಧಿಯೊ (ತ) [7] ಯೇ ಹಾಗಹುದುಭಯ (ಗಾ.ಬ), ಯಂತಹ ದುಭಯರಾಯರ (ಝ ರ) * ಯಂತಕತನುಜನೊಲಿದಂತ ಕುತರಾಜ್ಯವ ಸಂತವಿಸು ಬೇಱುವ (ಡ) [8] ದೇವರ (ಕ ಮ) [9] ವನು (ಗ ಚ ಡ), ವೇ (ಣ ತ ಯ ರ) [10] ಲಾ (ಣ ಯ ರ) [11] ಲೋಚನನಟ್ಟಿ (ಖ ಚ ಟ ದ) [12] ನಾದುದನು ವರ (ಕ), ನಿದ್ದುದನು ವರ (ಣ ಯ ರ), ನಾ ಮತವನಾ (ಬ) [13] ನಾಭಂಗಱುಹುವುದು ಮತವೆಂದರವರಂದು (ಕ ಮ), ನಾಭಾದಿಗಳಿಗಱುಹುವು ದೆಂದರಾ ಚರರು (ಖ ಡ ಣ.ಬ).

ಏನುಹದ[1]ನೇನೇನು[1] ವರಸಂ
ಧಾನವೇ ಕೌರವರೊಳಗೆ ಸು
ಮ್ಮಾನವೇ ಪತಿಗಳಿಗೆ ಪಾಪಿಗಳಿಱಿದರೋ ಸತಿಯು ।
ದಾನವಾಂತಕನೆಸಗುವನೆ ತ
ಪ್ಪೇನು ತಪ್ಪೇನೆನುತ ನಸುಮುಸು
ಳ್ದಾನನಾಂಬುಜದಬಲೆ ಬಂದಳು ಕೃಷ್ಣನೋಲಗಕೆ ॥೧೬॥

ಭ್ರೂಲತೆಯು ಸುರಚಾಪ[2]ದು[2]ರುಕೇ
ಶಾಳಿಗಳ ಕಾರ್ಮುಗಿಲಪಾಂಗದ
ಸಾಲ ಕುಡಿಮಿಂಚುಗಳ ನೂಪುರರವದ ಮೊಳಗುಗಳ ।
ಆ ಲತಾಂಗಿಯು ಗಮನವೇ ಮಳೆ
ಗಾಲದಂತಿರೆ ಧಾರ್ತರಾಷ್ಟ್ರಕು
ಲಾಳಿ ನಿಲುವುದೆ ಪವನಜನ ಸಂಪ್ರತಿಯು ಸೇರುವೆಗೆ ॥೧೭॥

ಕವಿದ ಚಿತ್ರಾವಳಿಯ ದಡ್ಡಿಯು
ವಿವಿಧಭಟರುಗ್ಗಡಣೆಯಲಿ ವರ
ಯುವತಿ ಬಂದಳು ಸ[3]ಖಿ[3]ಯರೊಯ್ಯಾರದಲಿ ನೃಪಸಭೆಗೆ ।
ನವಬಲಾಹಕದೊಳಗೆ ಮಿಂಚಿನ
ಗವಿಸಹಿತ ಮುಱಿಮೇಘಪಾವಿ
ರ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ ॥೧೮॥

ಎಲೆ ಸಮೀರಕುಮಾರ ಸಂಪ್ರತಿ
ಗೆಳಸಿದ್ಯೆ ಕಲಿ[4]ತನವ ನೀರಲಿ
ಕಲಕಿದ್ಯೆ[4] ಕೃಪಾರವಾದುದೆ ಕೌರವೇಂದ್ರನಲಿ ।
ಕಲಿಸಿದ್ಯೆ ಕೃಷ್ಣಂಗೆ ನೀತಿಯು
ಬಳಸಿದ್ಯೆ ಬಹುಮತವ ನರಕದೊ
ಳಿಳುಹಿದ್ಯೆ ಶಶಿಕುಲವನೆಂದನಿಲಜನ ನೋಡಿದಳು ॥೧೯॥

---

[1] ನಿನ್ನೇನು (ಕ ಡ ದ ಪ ಬ ಮ) [2] ವು (ಕ ಖ ಬ ಮ) [3] ತಿ (ಖ ಗ ಚ ಟ ಡ ಣ ದ) [4] ಮನವ ಕುಲವನು ಕಲಕಿದ್ಯೆ (ಝ), ಮಲವ ಕುಲದಲಿ ಕಲಸಿದ್ಯೆ (ರ ಣ ಬ).

ಬೇಡಲಟ್ಟುವನೇ ಮಹೀಪತಿ
ನಾಡೊಳೈದೂರುಗಳನವೆ[1]ರಲಿ[1]
ಮಾಡುವಾತನು ಕೃಷ್ಣನೇ [2]ಸಂಧಾನ[2]ವನು ನಿಮಗೆ ।
ಕೇಡುಗ[3]ರು[3] ಕೌರವನೃಪಾಲರ
ಕೂಡಿ ಬದುಕುವ ಭೀಮಸೇನನೆ
ರೂಢಿಸಿತಲಾ ನಿಮ್ಮ ಸಿರಿ ಸೋದರರ ಸೇರುವೆಗೆ ॥೨೦॥

ಯತಿಗಳಾದಿರಿ ನೀವು ರೋಷ
ಚ್ಯುತರಲೇ ಬಳಿಕೇನು ಧರ್ಮ
ಜ್ಞತೆಯ ನೆಲೆಗಳನಱಿದ ಮನವೆಱಗುವುದೆ [4]ರೌರವಕೆ[4] ।
ಕ್ಷಿತಿಯ ಪಾಲಿಸುವುದು ವಿರೋ[5]ಧಿ[5]
ವ್ಯತಿಕರವ ಬಿ[6]ಡಿಸು[6]ವುದು ಕುಂತೀ
ಸುತರು ಕೌರವರೊಡನೆ ಸುಖದಲಿ ರಾಜ್ಯ[7]ಮಾಡು[7]ವುದು ॥೨೧॥

ಭೀಮ ಬಲ[8]ವದ[8]ರಾತಿಸೇನಾ
ಭೀಮ ಕುರುಕುಲಕುಸುಮಮಾರ್ಗಣ
ಭೀಮ ಮಱೆದೈ ಮಾನಿನಿಯ ಘನಮಾನಹಾನಿಗಳ ।
ರಾಮನಬಲೆಗೆ ಕುದಿದ ಬಲುಸಂ
ಗ್ರಾಮವನು [9]ನೀ ಕೇಳದಱಿಯಾ[9]
ಪ್ರೇಮದಲಿ ನೋಡೆನ್ನನೆಂದಳು ದ್ರೌಪದೀದೇವಿ ॥೨೨॥

ಧರೆಗೆ ಕಟ್ಟಭಿಮಾನ ಹೆಂಡಿರ
ಹರಿಬವಾ ಹರಿಬದಲಿ ಕೆಡುಹುವ
ರರಿಯನವಗಡಿಸಿದರೆ ಸಾವರು [10]ಪಂಥವು[10]ಳ್ಳವರು ।
ಸುರನರೋರಗರೊಳಗೆ ನಿಮ್ಮೈ
ವರಿಗೆ ಸರಿಯಿ[11]ಲ್ಲೈವರಬಲೆಯ[11]
ಹರಿಬದಲಿ ಹಂಗಾದಿರೆಂಬಪದೆಸೆಯ [12]ನೋನು[12]ವರೆ ॥೨೩॥

---

[1] ರಿಗೆ(ಝ ನ ಪ) [2] ಸಮ್ಮೇಳ(ಖ ಗ ಚ ಣ ಪ) [3] ರ(ಗ ನ) [4] ಕಾಳಗಕೆ (ಗ) [5] ಧ(ಗ ಟ ಣ ದ) [6] ಸುಡು (ಗ ಟ ಣ ಪ) [7] ವಾಳು (ಗ ಚ ಡ ಮ) [8] ವಾ (ಕ ಗ ಚ ಟ ಮ) [9] ಕೇಳ್ದಱಿಯರಾ ಸು (ಕ ಖ ಮ) [10] ವಾಸಿಯು (ಗ ಠ ಣ ಪ) [11] ಲ್ಲವರ ಸಾರುವ (ಕ ಮ), ಲ್ಲವರ ಬಳಿಯಲಿ (ಖ), ಲ್ಲೀಗಲ ಬಲೆಯ (ಚ, ಟ ದ ಬ) [12] ಸೇರು (ಕ ಮ), ನೋಡು (ಝ ಬ).

ಸೋಲಗೆ[1]ಲವೇ ಕೌರವರ[1]ವಂ
ಶಾಳಿಯಲಿ ಸೋದರರು ನೀವ್ ಪಾಂ
ಚಾಲರಾವೇ ಹೊಱಗು ನಿಮ್ಮೊಳು ಸಲುಗೆ[2]ಯೇಕೆಮಗೆ[2] ।
ಮೇಳವೇ ಸಿರಿ ಗಳಿಸಲರಿದು ಜ
ನಾಳಿ ಹೆಂಡಿರಪೂರ್ವವೇ ಕ್ಷಿತಿ
ಪಾಲಕರು ನೀವಾಗಲೆಮಗದು ಪರಮಪರಿಣಾಮ ॥೨೪॥

ಮುಂದಲೆಯ ಹಿಡಿದೆಳೆದು ಸಭೆಯಲಿ
ತಂದು ಸೀರೆಯ [3]ಸೆಳೆ[3]ದರವದಿರ
ಮುಂದೆ ಮೌನದೊಳಿದ್ದರಲ್ಲದೆ ಪತಿಗಳುಸುರಿದರೆ ।
ಅಂದು ನೀ ಹಿಂದಿಕ್ಕಿಕೊಂಡುದ
ನಿಂದು ಮಱೆದೈ ಸಂಧಿಗೋಸುಗ
ಮುಂದುವರಿ[4]ವರೆ[4] ಕೃಷ್ಣ ಎಂದಳು ದ್ರೌಪದೀದೇವಿ ॥೨೫॥

ತನಯರೈವರು ವೀರಸಹದೇ
ವನು ಘಟೋತ್ಕಚನೀ ಸುಭದ್ರಾ
ತನಯನೆನ್ನಯ ತಂದೆ ಮೂಱಕ್ಷೋಹಿಣೀಸೇನೆ ।
ಇನಿಬ[5]ರೇ[5] ಕಾದುವರು ದುಶ್ಶಾ
ಸನನ [6]ಕರುಳನು ತೆಗೆದು[6] ಕುರುಕುಲ
ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ ॥೨೬॥

ವರಸತಿಯ ಬಿಸುಸುಯ್ಲ ಗಾಳಿಯೊ
ಳುರಿ ಚಡಾಳಿಸಿ ರೋಷಮಯದು
ಬ್ಬರದೊಳಾಡೊತ್ತಿದನು ಹಿಡಿದನು ಖತಿಯನಹಿತರಲಿ ।
ತರುಣಿ ಸೈರಿಸು ಸೈರಿಸಿನ್ನೀ
ಸುರಿವ ಕಂಬನಿಗಳಿಗೆ ಶತಸಾ
ವಿರಮಡಿಯ ಕಂಬನಿಯ ಸುರಿಸುವೆ ಹಗೆಯ ಹೆಂಡಿರಲಿ ॥೨೭॥

---

[1] ಲ್ಲವದೇಕೆ ಕುರು (ಗ ಚ ದ ನ ಪ ಬ) [2] ನಮಗೇಕೆ (ಗ ಠ ಜ ಪ).
[3] ಸುಲ (ಖ ಡ ಜ ಬ ಮ) [4] ದೈ (ಚ) [5] ರೂ (ಕ ಖ ಬ ಮ), ರುರೆ (ಜ)
[6] ರಕುತವ ಸುರಿದು (ಖ ಝ), ರಕ್ತವ ಕುಡಿದು (ಛ ರ ದ)

ಉರಿಯೊಗುವ ಮೀಸೆ[1]ಯನು[1] ಬೆರಳಲಿ
ಮು[2]ರಿದು[2] ನೆಗಹಿದ ವಾಮಕರದೊಳು
ತರುಣಿಯನು ಸಂತೈಸಿ ಕಿಡಿಕಿಡಿ[3]ಯಾಗಿ ಖಾತಿಯಲಿ[3] ।
ನರಕಮರ್ದನ ಕೇಳು ಕೌರವ
ನರಿಗಳಿದಿರೇ ಕೀಳುವೆನು ಕುಲ
ಗಿರಿಗಳನು ತೊಡೆವೆನು ಕೃತಾಂತನ ಬಾಳದಕ್ಕರವ ॥೨೮॥

ಯಮಸುತನ [4]ಹರುವೆಂ[4]ತುಟೆಂದಾ
ಕ್ರಮಕೆ ಮೊಗ[5]ದಿರುಹಿದೆನು ದಿಟವೀ
ಕಮಲವದನೆಯ ಹರಿಬವೆನ್ನದು [6]ಪತಿಗಳನಿಬರಲಿ[6] ।
ಎಮಗೆ ಸಂಪ್ರತಿ[7]ಗಿ[7]ಲ್ಲ ಮಾ[8]ನ[8] ಘನ
ಸಮರವೇ ಸರ್ವಾರ್ಥ ಕೋಪ
ಶ್ರಮಕೆ ರಿಪುರುಧಿರಾಂಬುಪಾನವೆ ವಿಪುಳಫಲವೆಂದ ॥೨೯॥

ಕೆಡಹಿ ರಿಪು[9]ಗಳ[9] ಕರುಳದಂಡೆಯ
ಮುಡಿಸುವೆನು ಮಾನಿನಿಗೆ ರಕುತವ
ಕುಡಿ[10]ಯಲೆರೆ[10]ವೆನು ಶಾಕಿನಿಯರಿಗೆ [11]ತತ್ಸ[11]ಹೋದರರ ।
[12]ನಡದು[12] ಸಂಧಿಯ ಮಾ[13]ಡು[13] ಮುರರಿಪು
ಕೊಡಿಸು ನಾಲ್ಕೂರುಗಳನಿವರಿಗೆ
ತಡೆಯದೆರಡೂರುಗಳ ಕೊಂಬೆನು ಕೌರವೇಂದ್ರನಲಿ ॥೩೦॥

ಆರನೆಯ ಸಂಧಿ ಮುಗಿದುದು

---

[1] ಗಳ (ಕ ಗಾ ಬ ಮ) [2] ರುಹಿ (ಕ ಚ ಮ) [3] ಯೋದನಾ ಭೀಮ (ಖ), ಯೋಗಿ ಖಾತಿಯಲಿ (ಗ ಚ ಟ, ಡ ಣ), ಯೋದ ಖಾತಿಯಲಿ (ಝ) [4] ಬಗೆಯಂ (ಗ ಟ ದ ನ ಪ), ಹದನೆಂ (ಚ ಣ), ಮನವೆಂ (ರ) [5] ಮನ (ದ) [6] ಪತಿಗಳೈವರಲಿ (ಚ ಠ ಡ), ಹಗೆಗಳನಿಬರಲಿ (ಝ ಮ) [7] ಯಿ (ಕ ಗ ಪ ಬ ಮ) [8] ತ (ಖ ಟ ಡ ಣ ಬ) [9] ವನು (ಖ ಗ ಟ ಠ ಣ) [10] ಸು (ಖ ಬ) [11] ಸಲೆ ತತ್ಸ (ಖ), ಕೌರವನ (ಬ) [12] ನುಡಿದು (ಕ ಮ) [13] ಡಿ (ಕ ಖ, ಗ, ಣ, ಪ, ಮ)

# ಏಳನೆಯ ಸಂಧಿ

---

ಸೂಚನೆ॥ ದುರಿತವಿಪಿನಕೃಶಾನು ಯದುಕುಲ
ವರ[1]ಕುಶೇಶಯ[1]ಭಾನು ನಿಜಪದ
ಶರಣಜನಸುರಧೇನು ಹೊಕ್ಕನು ಹಸ್ತಿನಾಪುರವ ॥

ದೇವ ಸಂಧಿಯ[2]ನೊಲಿ[2]ದು ಮಾಡುವು
ದಾವು ಮುಖದಿರುಹಿದವರೀ ಸಹ
ದೇವನೀಯಭಿಮನ್ಯುವೀ [3]ದ್ರೌಪದಿ[3] ಘಟೋತ್ಕಚ[4]ರ[4] ।
ಭಾವವೆಮ್ಮಯ ಭಾವವರ್ಜುನ
ದೇವ ಧರ್ಮಜ ನಕುಲರೆಂದುದ
ನಾವು ಮಿಸುಕುವರಲ್ಲ ಚಿತ್ತೈಸೆಂದನಾ ಭೀಮ ॥೧॥

ಕೆಲರು ಸಂಪ್ರತಿಗೊಲಿವರಿದಱೊಳು
ಕೆಲರು ವಿಗ್ರಹಕೆಳಸುವರು ನಿ
ಮ್ಮೊಳಗೆ [5]ನಿಶ್ಚಯ[5]ವಿಲ್ಲದಿರೆ ನೃಪಕಾರ್ಯವೆಂತಹುದು ।
ತಿಳಿದು ಹೇಳವನೀಶ ಪರಮಂ
ಡಲಕೆ ಪಯಣವ ಮಾಡು[6]ವೆವು[6] ನಾ
ವಳುಕಿದವರಲ್ಲೆನಲು ಕೃಷ್ಣಂಗರಸನಿಂತೆಂದ ॥೨॥

ವಿದಿತವೈದೂರುಗಳ ಕೊಟ್ಟರೆ
ಹದುಳವಿಡುವುದು ಮು[7]ನಿ[7]ದರಾದಡೆ
ಕದನವ[8]ನೆ[8] ಜೋಡಿಸುವುದುಚಿತಾನುಚಿತದನುವಱಿದು ।
ಹದನ ನೀನೇ ಬಲ್ಲೆ ಸಾಕಿ
ನ್ನಿದು ನಿ[9]ಧಾ[9]ನವು ಬಗೆಯಲೆಮ್ಮ
ಭ್ಯುದಯ ನಿನ್ನಾಧೀನವೆಂದನು ಧರ್ಮನಂದನನು ॥೩॥

---

[1] ಸರಸಿರುಹ (ಕ ಮ). [2] ನಱು (ಗ ರ ನ) [3] ದ್ರುಪದನು (ಗ ಟ ಞ.ದ).
[4] ರು (ಕ ಖ ಚ ದ ಮ) [5] ನಿರ್ಮಳ (ಖ ಗಾ ಚ ಬ) [6] ವರೆ (ಗ ಟ ಣ ನ.ಪ).
[7] ಱು (ಖ ಚ ಟ ಬ) [8] ನು (ಖ ಗ ಚ ಟ ಪ) [9] ದಾ (ಖ ಗ ಡ)

ಪಯಣವನು ನಿಶ್ಚೈಸಿ ದನು[1]ಜಾ[1]
ರಿಯನು ಬೀಳ್ಕೊಂಡವನಿಪತಿ ಪಾ
ಳಯದೊಳಗೆ ಸಾಱಿಸಿದನಗ್ಗದ ಮಂಡಲೀಕರಿಗೆ ।
ನಯ[2]ವಿದನು[2] ಮಱುದಿವಸ ಮಂಗಳ
ಮಯಮುಹೂರ್ತದ ಜೋಯಿಸರ ಜೋ
ಕೆಯಲಿ ನಿರ್ಗಮನಿರತನಾದನು ಕೃಷ್ಣನೊಲವಿನಲಿ ॥೪॥

ಮೊರೆಯೆ ದುಂದುಭಿ ಶಂಖ ಕಹ[3]ಳಾ
ವರ[3]ಮೃದಂಗಾದಿಗಳು ಭೂಸುರ
ಸುರಭಿಗಳ ಬಲವಂದು ದಧಿದೂರ್ವಾಕ್ಷತಾದಿಗಳ ।
ಧರಿಸಿ ಧರಣೀದೇವರನು ಸ
ತ್ಕರಿಸಿ ಕರತಳದಿಂದ ನಾಸಿಕ
ದೆರಲ ಚಂದ್ರೋದಯುವನೀಕ್ಷಿಸಿ ದೇವ ಹೊಱವಂಟ ॥೫॥

ಘನಬಳಾಹಕ ಸೈನ್ಯ ಸುಗ್ರೀ
ವನನು ನಿರ್ಮಳ ಮೇಘಪುಷ್ಪ[4]ನ[4]
ನನುವಿನಲಿ ಹೂಡಿದನು ಸಾತ್ಯಕಿ ಹೇಮಮಯರಥ[5]ಕೆ[5] ।
ಧನುವ [6]ಶ[6]ಸ್ತ್ರ ಸುದರ್ಶನಂಗಳ
ಕನಕಕವಚ ಕೃಪಾಣವನು ಸೆಂ
ದನದೊಳಿರಿಸೆಂದಸುರರಿಪು ಸಾತ್ಯಕಿಗೆ ನೇಮಿಸಿದ ॥೬॥

ಇವರಿಗವದಿರು ನೆಟ್ಟನೇ ಮುನಿ
ವವರು ನಾವಿವರವರು ಮತ್ತಂ
ತಿವರಿಗವನಿಯನೀಸಿ ಕೊಡುವು[7]ದು[7] ನಮ್ಮ ಭರವಸಿಕೆ ।
ಅವಗಡಿಸಿದರೆ ಕಾದುವೆವು ಕೌ
ರವರು ಖುಲ್ಲರು ರಥದೊಳಗೆ ಕೈ
ದುವನು ತುಂಬೆಂದಸುರರಿಪು ಸಾತ್ಯಕಿಗೆ ನೇಮಿಸಿದ ॥೭॥

---

[1] ಶಾ (ಕ ಚ ದ ಬ ಮ). [2] ದಿನಾ (ಖ ಗಾ ಬ) [3] ಳಿಗಳುರು (ಗ ಚ ಣ ದ ಪ). [4] ವ (ಚ ರ) [5] ವ (ಕ ಖ ಗ ಢ ದ ಪ ಬ ಮ). [6] ನ (ಗ ಚ, ಚ, ಡ ಣ ದ ನ ಪ) [7] ದೆ (ಗ)

* ೭ನೆಯ ಪದ್ಯವು (ಕ, ಮ,) ಪ್ರತಿಗಳಲ್ಲಿಲ್ಲ

ಕಲಿತಸನ್ನಾಹದಲಿ ಸಾ[1]ತ್ಯಕಿ[1]
ಸುಳಿಸಿದನು ಹೊಂದೇರನರ್ಥಕೆ
ತಳಿತವಮಲಚ್ಛತ್ರ ಚಾಮರ ಸಿತಪತಾಕೆಗಳು ।
ಅಳುಕೆ ನೆಲನಕ್ಷೋಣಿಬಲವಿ
ಟ್ಟಳಿಸಿ ನೆರೆದುದು ರಥಕೆ ದಾನವ
ಕುಲದಿಶಾಪಟ ಕೃಷ್ಣ ಬಿಜಯಂಗೈದನೊಲವಿನಲಿ ॥೮॥

ಕಳುಹುತ್ತೈತಂದಖಿಳಪಾಂಡವ
ಬಲಕೆ ನೇಮವ ಕೊಟ್ಟು ಧರ್ಮಜ
ಫಲುಗುಣರ ನಿಲಿಸಿದನು ಸಹದೇವನನು ನಕುಲನನು ।
ಕಳುಹಿದನು ನೀ ಮರಳೆನಲು ಬೆಂ
ಬಳಿಯಲನಿಲಜ[2]ನೈದಿ[2] ಹಗೆಯಲಿ
ಕಲಹವನು [3]ಮಸೆಯೆಂ[3]ದು ನಂಬುಗೆಗೊಂಡು ಮರಳಿದನು ॥೯॥

ದೇವಿಯರು ನೀವ್ ಮರಳಿಯೆನೆ ರಾ
ಜೀವನಾಭನ ಹೊರೆಗೆ ದ್ರೌಪದಿ
ದೇವಿ ಬಂದಳು ಹಣೆಯ ಚಾಚಿದಳಂಘ್ರಿಕಮಲದಲಿ ।
ಸ್ಥಾವರಕೆ ಜಂಗಮಕೆ ನೀನೇ
ಜೀವಚೇಷ್ಟಕನವಧಿರಂತ
ಭಾರ್ಗವವನು ನೀ ಬಲಿಯಲಾಗದು ಸಂಧಿಕಾರ್ಯ[4]ದಲಿ[4] ॥೧೦॥

ಖಳರು ತಮ್ಮುನ್ನತಿಯ ಕೀಲನು[5]
ಕಳಚಿ ಕಳೆದರು ಮರಳಿ ಹೂಡುವ
ಡಳುಕಿದರು ನನ್ನವರು ಪತಿಗಳೆ ಪರಮವೈರಿಗಳು ।
ಹಳಿವ ನೀನೇ ಬಲ್ಲೆ[6]ಯೆನ್ನಯ
ವುಳಿವ ನೀನೇ ಬಲ್ಲೆ ಹಿರಿದಾ
ಗಳಲಿದೆನು ಸಲಹೆಂದು [7]ಹೊರಳಿದಳಬಲೆ ಚರಣದಲಿ[7] ॥೧೧॥

---

[1] ರಥಿ (ಖ ಗ ಡ ನ ಪ)　[2] ಬಂದು (ಕ ಗ ಟ ಮ)　[3] ಬಲಿಯೆಂ (ಕ ಮ), ಮಸಗೆಂ (ಗ)　[4] ವನು (ಝ ಪ ಬ)　[5] ಕೆಯನು ತಾವ್ (ಕ ಮ)　[6] ಯನ್ನೆನ್ನು (ಖ ಗ ಡ ನ), ಮರಳೆನ್ನು (ಚ ಟ ದ ಬ)　[7] ಕಂಬನಿದುಂಬಿದಳು ತರಳೆ (ಕ, ಖ ಚ, ಟ ಬ, ಮ).

ಏಳು ತಾಯೆ ಸರೋಜಮುಖಿ ವಿಪಿ
ನಾಲಯದೊಳತಿನವೆದೆ ನಿನ್ನವ
ರಾಳಿಗೊಂಡಂದವನು ಬಲ್ಲೆನು ನಿನ್ನ ಹರಿಬದಲಿ ।
ಕ್ಕಾಳೆಗವನೇ ಬಲಿದು ಬಹೆ[1]ನಿವ
ರೇಳಿಲವ ಮಾಡಿದರೆ[1] ರಿಪು[2]ಗಳ[2]
ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ ॥೧೨॥

ದೇವಕಿಯು ಮೇಲಾಣೆ [3]ವರ[3]ವಸು
ದೇವನಂಘ್ರಿಗಳಾಣೆ ಮನ್ಮಥ
ದೇವನಾಣೆ ನಿದಾನವನು ಕೇಳಬಲೆ ನಿನ್ನಾಣೆ ।
ನಾವು ಸಂಧಿಯನೆವದಲವದಿರ
ಭಾವವನು ಕಲಿಮಾಡಿ ಕೋಪವ
ತೀವಿ [4]ಸಂಧಿಯು ಮುಱಿದು ಬಹೆವಿದ ನಂಬು ನೀನೆಂದ[4] ॥೧೩॥

[5]ಮರಳಿದಳು *ತರಳಾಕ್ಷಿ* ಮುರರಿಪು
ಬರುತ[5] ಮುಂಬಟ್ಟೆಯಲಿ ಕಂಡನು
ವರಭರದ್ವಾಜಾ[6]ಖ್ಯ[6] ಗೌತಮ ಕಣ್ವ ಕೌಶಿಕರ ।
ಉರಗಮಾಲಿ ಮತಂಗ ಗಾರ್ಗ್ಯಾಂ
ಗಿರಸ ನಾರದ ಶುಕ ಪರಾಶರ
ಪರಶುರಾಮ ಶ್ವೇತಕೇತುಪ್ರಮುಖಮುನಿವರರ ॥೧೪॥

ಮುನಿವರರನುಪಚರಿಸಿದನು ಹ
ಸ್ತಿನಪುರಕೆ ಸಂಘಾತದಲಿ ಬಹೆ
ವೆನ[7]ಲು ಬರಹೇಳಿದನು[7] ಸಕಲಮಹಾ[8]ತಪೋಧನರ[8] ।
ಘನಕುಶಸ್ಥಳಪುರದಲೆಡೆಗೈ
ದನು ಸುಯೋಧನನಲ್ಲಿಗಟ್ಟಿದ
ವಿನುತದೂತರು ಬಿನ್ನವಿಸಿದರು ಮುರಹರನ ಬರವ ॥೧೫॥

---

[1] ನಿನ್ನೇಳಿಗೆಯ ದಿಟ ಮಾಡಿ (ಕ ಮ), ನಿದ ಕೇಳಿ ನೀ ದಿಟ ಮಾಡಿದರೆ (ಖ ಬ). [2] ವನು (ಖ ಝ ಬ) [3] ಕೇಳ್ (ಖ ಡ ಪ) [4] ಬಹೆವಿದಕಂಜಬೇಡೆಂದಸುರರಿಪು ನುಡಿದ (ಟ ದ ಬ) [5] ತಿರಿಗಿ ಕಳುಹಿದ ದ್ರೌಪದಿಯು ಮುರಹರನು (ಕ ಮ) * ಲಲಿತಾಂಗಿ (ಚ ಟ ದ, ಬ) [6] ತ್ರಿ (ಗ ಡ ಪ) [7] ಲನಿಬರನು ಬರಹೇಳಿ (ಚ), ಲನಿಬರನು ಬೆಸಸಿದನು (ದ ಟ ಬ) [8] ಮುನೀಶ್ವರರ (ಗ, ಟ ದ. ಬ).

ಕೇಳಿದನು ಧೃತರಾಷ್ಟ್ರನಾ ಸಿರಿ
ಲೋಲನಾಗಮನವನು ಚಿತ್ತವ
ಹೂಳಿ ಹೆಚ್ಚಿದ ಹರುಷ[1]ದಿಂದು[1]ಬ್ಬೆದ್ದನಡಿಗಡಿಗೆ ।
ಹೇಳಿದನು ವಿದುರಂಗೆ ಭಂಡಾ
ರಾಲಯದೊಳು[2]ಳ್ಳಖಿಳವಸ್ತು[2]ವ
ಜಾಳಿಗೆಯ ಪೆಟ್ಟಿಗೆಯಲಾಯ್ದರು [3]ಸಾರ[3]ವಸ್ತುಗಳ　　॥೧೬॥

ಎಲೆ ವಿದುರ ಕೇಳ್ಕೆ ಸುಯೋಧನ
ನುಳಿಯಲಖಿಳ[4]ಮಹಾಮಹೀಶರು[4]
ನಳಿನನಾಭನನಿದಿರುಗೊಳಲಿ ಕೃತಾರ್ಥರಾದವರು ।
ಹೊಳಲು ಗುಡಿತೋರಣದಲೆಸೆಯಲಿ
ಕಳಸ[5]ಗನ್ನಡಿಗಳಲಿ[5] ನಡೆಯಲಿ
ನಳಿನವದನೆಯರೆಂ[6]ದನಾ ಧೃತರಾಷ್ಟ್ರಭೂಪಾಲ[6]　　॥೧೭॥

[7]ತೆಗೆದ[7] ವಸ್ತುವನೀಯದಿರು ಹರಿ
ಹಗೆ ಕಣಾ ಕುಂತೀಕುಮಾರರು
ಹಗೆಗಳೇ ಮನ್ನಿಸಿದರೆಂದುಳುಹುವನೆ ಮುರವೈರಿ ।
ನಗರಿಗಾತನು ಬರಲಿ ಯಾದವ
ನಗಡುತನಕೌಷಧಿಯ ಬಲ್ಲೆನು
ಬಿಗಿದು ಕೆಡಹುವೆನೆಂದು ನುಡಿದನು ಕೌರವರರಾಯ　　॥೧೮॥

ಖಾತಿಗೊಂಡನು ಭೀಷ್ಮನೆಲೆ ಕಡು
ಪಾತಕಿಯೆ ನೀ ಕೃಷ್ಣನನು ಬಿಗಿ
ವಾತನೇ ಬಳಿಕೇನು ಬಲ್ಲೆನು ನಿನ್ನ ಸಾಹಸವ ।
ಈತ [8]*ನುಡಿವೀ* ಮಾತ ಕೇಳಲು[8]
ಪಾತಕ[9]ವು ಬಹುದೆಂದು[9] ಗಂಗಾ
ಜಾತನೋಲಗದಿಂದ ಸರಿದನು ತನ್ನ ಮಂದಿರಕೆ　　॥೧೯॥

---

[1] ಮಿಗಲು (ಕ ಮ), ದಲಯು (ಣ ಯ ರ) [2] ಮಳಮುತ್ತಿನ (ಖ ಬ) [3] ವಿವಿಧ (ಖ), ವರಸು (ಟ ಣ ದ ಪ ಬ) [4] ಪ್ರಧಾನರು (ಗ ಟ ಡ ದ ನ ಪ) [5] ಸಹಿತ (ಗ ನ ಬ), ವಿಡಿದು (ಚ) [6] ದನಾ ವಿದುರಂಗೆ ಧೃತರಾಷ್ಟ್ರ (ಖ ಚ ಟ ಡ ಣ ಬ , ದು ನೇಮಿಸಿದನು ಮಹೀಪಾಲ (ಗ) [7] ತೆಗಸು (ಕ ಖ ಮ), ತೆಗಸಿ (ಚ ಝ ಬ), ತೆಗದು (ಡ ಣ) [8] ನೊಡನೆಯ ಮಾತು ಹೊಱುವುದು (ಕ ಮ) * ನಾಡಿದ (ಗ), ನುಡಿದೀ(ಡ ಪ) [9] ವನೆಂದೆನುತ (ಕ ಮ).

ಪುರವ ರಚಿಸಿದರುದಯದಲಿ ವಿ
ಸ್ತರ ಮಿಗಲು ಗಾಂಗೇಯ ಗೌತಮ
ಗುರು ವಿದುರ ಶಲ್ಯಾದಿ ಸುಜನರು ಬಂದರಿದಿರಾಗಿ ।
ತರುಣಿಯರು ಕೆಂದ[1]ಳಿರ[1] ಕಲಶದ
ಕರತಳದ ಗರುವಾಯಿಯಲಿ ಪಂ
ಕರುಹನಾಭನನಿದಿರುಗೊಂಡರು ವಿ[2]ವಿಧ[2]ವಿಭವದಲಿ ॥೨೦॥

[3]ಥಳಥಳಿಸೆ[3] ದೂರದಲಿ ಗರುಡನ
ಹಳವಿಗೆಯು ಕಂಡಖಿಳಜನವಂ
ಜುಳಿಯನಿಟ್ಟುದು ಭಾಳದಲಿ ಪರಿಶುದ್ಧಭಾವದಲಿ ।
ನಳಿನನಾಭನ [4]ದಿವ್ಯ[4]ಮೂರ್ತಿಯ
ಲಲಿತಕಾಂತಿಯು ಕಡಲೊಳಗೆ [5]ನೆಱೆ[5]
ಮುಳುಗಿ ದವು ಪುರ[6]ಜನದ ಕಣ್ಮನವೊಂದುನಿಮಿಷದಲಿ ॥೨೧॥

ವಂದಿ ಮೆಯ್ಯಿಕ್ಕಿತು ಮುರಾಂತಕ
[7]ನಿಂ[7]ದು ಮನದೊಲವಿನಲಿ ಗಂಗಾ
ನಂದನದ್ರೋಣಾದಿಗಳನೆತ್ತಿದನು [8]ಕರುಣ[8]ದಲಿ ।
ಮಂದಿರದ ಸುಕ್ಷೇಮಕುಶಲವ
ನಂದು ಕೇ[9]ಳಿದು[9] ವೀಳಯವ[10]ನಾ[10]
ಮಂದಿಗಿತ್ತನು ದೇವ ಬಂದನು ಹಸ್ತಿನಾಪುರಿಗೆ ॥೨೨॥

ಗಿಳಿಯು ತುಂಬಿಯು ಹಂಸೆಗಳ ಕೋ
ಗಿಲೆಯು ಕೊಳರ್ವಕ್ಕಿಗಳ ಕೊಂಚೆಯು
ಕೊಳಲುವಕ್ಕಿಯು ಜಕ್ಕವಕ್ಕಿಯು ನವಿಲ ಪಾರಿವದ ।
[11]ಕಳರವದ[11] ಕರ್ಣಾಮೃತದ ತನಿ
ವಳೆಯು ಕಱೆದುದು ಯಾದವೇಂದ್ರನ
[12]ಬಲದ[12] ಕಿವಿಗಳಲಿಭಪುರಿಯ ಹೊಱವಳಯದುದ್ಯಾನ ॥೨೩॥

---

[1] ಳದ (ಗ ಚ ಬ) [2] ಧಿತ (ಗ) [3] ಹೊಳಹು ಮಿಗೆ (ಖ ಬ) [4] ಮಾಧುರ (ಗ ಚ ಟ ನ ಪ), ವಿಮಲ (ಝ) [5] ಸರೆ (ಣ ಬ) [6] ದುದು ಪರಿ (ಣ ಬ) [7] ನಂ (ಗ ಚ ಝ ಣ), ಗಂ (ಟ ದ ಬ) [8] ವಿನಯ (ಕ ಖ ಟ ಬ ಮ) [9] ಳುತ (ಗ ಡ ಣ ನ ಪ) [10] ತಾ (ಕ ಬ ಮ) [11] ಗೆಳರವದ (ಕ ಝ ಮ), ಕಳಕಳದ (ಖ ಗ), ಗಳರುಚಿಯ (ಟ ದ) [12] ದಳದ (ಕ ಮ)

ನಸುಬಿರಿದ ಪರಿಪಕ್ವದಾಡಿಮ
ರಸದೊಳಱವಟ್ಟಿಗೆಗಳನು ದರ
ಹಸಿತಪಂಕಜಗಳಿತ ಮಕರಂದದ ತಟಾಕವನು।
ರಸಭರಿತ ಖರ್ಜೂರ[1]ಪನಸ
ಪ್ರಸರಸತ್ರವ ರಚಿಸಿದು[1]ಪವನ
ವೆಸೆದುದೈ ಧಾರ್ಮಿಕನವೊಲು ಯದುರಾಯನಿದಿರಿನಲಿ ॥೨೪॥

ಎಳಲತೆಯನೆಱಗಿಸುತ ಮಲೆತರೆ .
ತಳಿರುಗಳನಲ್ಲಾಡಿ[2]ಸುತ[2] ಪರಿ
ಮಳದ ಕಪ್ಪವ [3]ಕೊಳುತ[3] ಮಱದುಂಬಿಗಳ ಗೀತವನು।
ಸಲೆ ಸೊಗಸಿ ಮಕರಂದನದಿಯಲಿ
ತಳ[4]ತು[4] ಬೀಡ[5]ನು[5] ಬಿಡುತ ವನದಲಿ
ಸುಳಿ[6]ದುದೈ[6] ತಂಗಾಳಿ ಭೂಮೀಪಾಲನಂದದಲಿ ॥೨೫॥

ಮಗಮಗಿಪ ಹೊಂಬಾಳೆಗಳ ರಸ
ವೊಗುವ ಮಧುರದ್ರಾಕ್ಷೆಗಳ ನಿಡು
ಮುಗಿ[7]ಲ[7] ತುಡುಕುವ ತೆಂಗುಗಳ ನೆಱೆ ಕಾತ ಹಲಸುಗಳ।
ಬಿಗಿದ ಪಣ್ಗೊನೆವಾಳೆಗಳ ಸೊಂ
ಪೊಗುವ [8]ಕರ್ಪೂರ[8]ದ್ರುಮೌಘದ
ಸೊಗಸು ಸೆಳೆದುದು ಮನವನಾ ಗಜನಗರದು[9]ಪವನದ[9] ॥೨೬॥

*ಲಲಿತಶುಕಚಯಚಂಚುಪುಟನಿ
[10]ರ್ದ[10]ಳಿತ ಜಂಬೂಪಕ್ವಫಲರಸ
ಲುಳಿತ ನವಮಕರಂದ ಮಧುರ ರಸಾನುಪಾನದಲಿ।
ತಳಿತ ಕಿನ್ನರಮಿಥುನಸುಖಪರಿ
ಮಿಳಿತ ಗೀತಶ್ರವಣಸನ್ನುತ
ಪುಳಿನಸುಪ್ತಮರಾಳವೆಸೆದುದು ಗಜಪುರೋದ್ಯಾನ ॥೨೭॥

---

[1] ಫಲದಿಂದೊಸದು ಹಾಱುವ ಗಿಣಿಗಳು (ಕ ಮ), ಫಲಸಂಪ್ರಸರ ಛತ್ರವನೆಸಗಿದು (ಗ) [2] ವರ (ಕ ಮ) [3] ಕೊಂಡು (ಕ ಚ ಬ ಮ) [4] ತ (ಕ ಖ, ಗ ಣ ಪ ಮ) [5] ನೆ (ಗ ಡ ಣ ಪ) [6] ದನ್ನೆ (ಕ ಗ ಚ ಮ) [7] ಲು (ಕ ಮ). [8] ಖರ್ಜೂರ (ಗ ಡ ಣ ಪ) [9] ದ್ಯಾನ (ಕ ಖ ಮ) [10] ರ್ಗ (ಚ ಬ)

* ೨೭ನೆಯ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ.

ಅರರೆ ಪಾತಾಳದ ವಿಳಾಸಿನಿ
ಯರಿಗೆ [1]ಚೌಕಿ[1]ಗೆಯೋ ಸುದುರ್ಗದ
ಹಿರಿಯಗಳೊ ಬಲುಗೋಂಟೆಯೋ ನಿಚ್ಚಣಿಗೆಯೋ ದಿವದ ।
ಮುರಿಮುರಿದ ಹುಲಿಮುಖದ ಹೇಮದ
ತರದ ತೆನೆಗಳ ವಜ್ರಮಯದು
ರ್ಧರಕವಾಟದ ಪುಟದೊಳೆಸೆದುದು ಹಸ್ತಿನಾನಗರ ॥೨೮॥§

ಹೊಗಳುತ್ತೈತಂದಸುರರಿಪು ಗಜ
ನಗರಿಯನು ಹೊಕ್ಕನು ಸುಯೋಧನ
ನಗಣಿತೈಶ್ವರ್ಯ[2]ವ[2] ಮಹಾದೇವೆನುತ [3]ತಲೆದೂಗಿ[3] ।
ಬಿಗಿದ ಬೀದಿಯ ನಯದ ನೆಲೆಗ
ಟ್ಟುಗಳ [4]ರತ್ನದ[4] ಹೇಮದುಪ್ಪರಿ
ಗೆಗಳ ಕೇರಿಗಳೊಳಗೆ ಬರುತಿರ್ದನು ಮುರಧ್ವಂಸಿ ॥೨೯॥

[5]ಮಂದದಲಿ ಸುಳಿವಾನೆ[5] ಕುದುರೆಯ
ಸಂದಣಿಯ ಕೀಲಿಸಿದ ಭೂಮಿಪ
ರಂದಣದ ಸಾಲುಗಳ ತೆಕ್ಕೆಯ [6]ಬಿರುದಿನಾ[6]ಳುಗಳ ।
ಮಂದಿಯಲಿ ಹೊಗಲನಿಲ[7]ಗುಬ್ಬಸ[7]
ವೆಂದರುಳಿದ[8]ರಿಗ[8]ಳವೆಯೆನುತರ
ವಿಂದನಾಭನು ಬಂದನಾಧೃತರಾಷ್ಟ್ರನರಮನೆಗೆ ॥೩೦॥

ಇದಿರುವಂದನು ಕಾಣಿಕೆಯನಿ
ಕ್ಕಿದನು ಕುಶಲಕ್ಷೇಮವನು ಕೇ
ಳಿದನು ಭಕ್ತಿಯಲೆರಗಿದನು [9]ಚರಣದಲಿ ಧೃತರಾಷ್ಟ್ರ[9] ।
ಸದನವನು ಹೊಕ್ಕಂತೆ ನಿಮಿಷಾ
ರ್ಧದಲಿ ಕುಳ್ಳಿರ್ದನಿಬರನು ಕಳು
ಹಿದನು ಕಾರುಣ್ಯದಲಿ ಗದುಗಿನ ವೀರನಾರಯಣ ॥೩೧॥

ಏಳನೆಯ ಸಂಧಿ ಮುಗಿದುದು

---

§ ೨೮ನೆಯ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ

[1] ಖಾರಿ (ಝ ಟ ಡ ಣ) [2] ಕೆ (ಚ ಝ ಟ ಣ ದ) [3] ನಲವಿನಲಿ (ಕ ಖ ಡ ಣ ಬ ಮ), ಕೊಂಡಾಡಿ (ಗ), [4] ಮಣಿಮಯ (ಚ ಝ ಡ ಣ ನ ಪ) [5] ಮುಂದೆ ಸುಳಿವಾನೆಗಳ (ಚ) [6] ಸುಳಿಯದಾ (ಗಾ), ಹಳಿಯದಾ (ಟ ದ ಬ) [7] ಗಸದಳ (ಗ ಚ ಡ ನ ಪ) [8] ವರ (ಖ ಚ ಝ ಟ ಬ) [9] ಧೃತರಾಷ್ಟ್ರ *ಹರಿಯಡಿಗೆ* (ಕ ಮ) * ಭೂಪಾಲ (ಗ ಚ ಣ), ನಾ ಹರಿಗೆ (ಟ ದ)

# ಎಂಟನೆಯ ಸಂಧಿ

ಸೂಚನೆ॥ ಶರಣದೇಹಿಕದೇವನೆಂಬೀ
ಬಿರುದ ಮೆಱೆಯಲು ರಾಯಭಾರವ
ಧರಿಸಿ ಕೌರವನರಮನೆಗೆ ನಡೆತಂದನಸುರಾರಿ ॥

ಕೇಳು ಜನಮೇಜಯಧರಿತ್ರೀ
ಪಾಲ ಮುರರಿಪು ಗುರುನದೀಜರ
ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು।
ಆಲಯಕೆ ವಿದುರಂಗೆ ಕೊಟ್ಟನು
ವೀಳಯುವ[1]ನೊಡನೈದಿ ಬಂದ ನೃ[1]
ಪಾಲರನು ಮೊಗಸನ್ನೆಯಲಿ ಕಳುಹಿದನು ಮನೆಗಳಿಗೆ ॥೧॥

ಶೌರಿ ಕಾಣಿಸಿಕೊಂಡನಾ ಗಾಂ
ಧಾರಿಯನು ಸುಕ್ಷೇಮಕುಶಲವ
ನಾರಯಿದು ಕಾಣಿಕೆಯ ಕೊಂಡನು ಕೊಟ್ಟನುಡುಗೊಱೆಯ।
ಕೌರವನು ತನ್ನರಮನೆಗೆ ಹರಿ
ಬಾರದಿರನೆಂದಖಿಳವಿಧದಲಿ
ಸಾರವಸ್ತುವ ತರಿಸಿಯಾರೋಗಣೆಗೆ ಮಾಡಿಸಿದ ॥೨॥

ನಡುವೆ ಮಣಿಮಂಚದಲಿ ಮೆಲ್ವಾ
ಸಡಿಕಿಲನು ಹಚ್ಚಡಿಸಿದರು ಮೇ
ಲಡ[2]ರಿದವು ಮಣಿಖಚಿತನಿರ್ಮಳ[2]ಮೇಲುಕಟ್ಟುಗ[3]ಳು[3]।
ಉಡುಗೊಱೆಯ ತರಿಸಿದನು ರಾಯ[4]ನ[4]
ಮಡದಿಯರು ಹೊಂಗಳಸಜಲವನು
ಪಡಿಗವನು ಹಿಡಿದಸುರರಿಪುವಿನ ಬರವ ಹಾರಿದರು ॥೩॥

---

[1] ತನ್ನೊಡನೆ ಬಂದ ನೃ (ಕ ಮ), ನುಳಿದಖಿಳಭೂಮಿಪಾ (ಚ) [2] ಕಿದರು ಮಣಿಖಚಿತ ಚಿತ್ರದ (ಖ), ಓದರು ನವರತ್ನ ಖಚಿತದ (ಗ ಟ ದ ಪ). [3] ಳ (ಬ) [4] ರ (ಕ ಮ)

ತವತವಗೆ ಗಾಂಗೇಯ ಗುರುಕೃಪ
ರವಿಸುತಾದಿಗಳಸುರರಿಪು ನಿಜ
ಭವನಕೈತಹನೆಂದು ಸವೆದರು ಸಾರವಸ್ತುಗಳ ।
ಅವನಿಪನ ಬೀ[1]ಳ್ಕೊಟ್ಟು[1] ಕೌರವ
ಭವನವನು [2]ಹೊಱವಂಟು[2] ವರಭಾ
ಗವತ[3]ಮಸ್ತಕರತುನವಿದುರನ ಮನೆಗೆ ನಡೆತಂದ[3] ॥೪॥

ತೊಲಗಿದವು ಜನವಮನದ ಬಲುಗ
ತ್ತಲೆಗಳಿದಿರಲಿ ಕಂಡ ಜೀವರ
ಹಲವು ಜನ್ಮಾಂತರದ ದುರಿತಾಂಭೋಧಿ ಬತ್ತಿದವು ।
ಬಳಿಯ ಮುನಿಗಳುಸಹಿತ ಕರುಣಾ
ಜಲಧಿ ವಹಿಲದಿ ಕೌರವೇಂದ್ರನ
ಹೊಳಲೊಳಗೆ ನಿಜಶರಣನರಮನೆಗಾಗಿ [4]ಬರುತಿರ್ದ[4] ॥೫॥

ಕರಣ ನಿರ್ಮಳವಾಯ್ತು ಮನವು
ಬ್ಬರಿಸಿತತಿಪರಿತೋಷ[5]ದೇಳಿಗೆ[5]
ಪರಮಸುಖದಲಿ ತನುವ [6]ಮುಸುಕಿತು[6] ನಯನಜಲವುಗಲು ।
ಎರಡುದೋಱದ ಗಾಢಭಕ್ತಿಯ
ಭರದ ಲವಲವಿಕೆಯಲಿ ನಿಜಮಂ
ದಿರವ ಹೊಱ[7]ವಡುವು[7]ತ್ತ ಕಂಡನು ವಿದುರನಚ್ಯುತನ ॥೬॥

ಸಿರಿಮೊಗದ ಕಿಱುಬೆಮರ ತೇಜಿಯ
ಖುರಪುಟದ ಕೆಂಧೂಳಿ ಸೋಂಕಿದ
ಸಿರಿಮುಡಿಯ [8]ಕೊನೆ[8]ಮಿಸೆಯಲಿ ಕೆಂಪಡರ್ದ ರೇಣುಗಳ ।
ಖರಮರೀಚಿಯ ಝಳಕೆ ಬಾ[9]ಡಿದ[9]
ತರುಣತುಳಸಿಯ ದಂಡೆಯೊಪ್ಪುವ
ಗರುವದೇವನ ಬರವ ಕಂಡನು ಬಾಗಿಲಲಿ ವಿದುರ ॥೭॥

---

[1] ಳ್ಕೊಂಡು (ಖ ಗ ಚ ಬ) [2] ಹಿಂದಿಕ್ಕಿ (ಗ ಡ ನ ಪ) [3] ವಿದುರನ ಮನೆಗೆ ನಡೆತರುತಿರ್ದನಸುರಾರಿ (ಟ ದ ಬ) [4] ನಡೆತಂದ (ಚ ಝ ಣ ಬ) [5] ಮಿಗೆ ತಾ (ಕ ಮ) [6] ಮಱೆದನು (ಕ ಬ ಮ) [7] ವಂಡು (ಕ ಛ.ಪ.ಬ), ವಡು[illegible] (ದ.ಮ) [8] ಕುಡಿ (ಟ ಡ.ದ ಬ) [9] ಡುವ (ಕ.ಬ ಮ)

ತನುವ ಮುಱಿದನು ಪುಳಕಜಲದಲಿ
ನನೆದು ನಾರಾಯಣನ ಪದದರು
ಶನದ ಹರ್ಷಾರಣ್ಯದಲಿ ಮನಹೊಲಬುದಪ್ಪಿದನು ।
ನೆನೆವ ಸನಕಾದಿಗಳಿಗಿ[1]ನ್ನುಂ[1]
ಮನಗೊಡದ ಮಹಿಮಾ[2]ತಿರೇಕನು[2]
ಮನೆಗೆ ಬಹ ಕರುಣಾಳುತನ ಹೊಸತೆನುತ [3]ಹಿಗ್ಗಿ[3]ದನು ॥೮॥

ವೇದದಱಿಕೆಗಳ[4]ಱಸುವು[4]ಪನಿಷ
ದಾದಿ ದಿ[5]ವ್ಯ[5]ಸ್ತುತಿಯ ಗಡಣಿಗೆ
[6]ಹೋದ ಹೊಲಬಳವಡದ[6] ಮುನಿಗಳ ಮನಕೆ ಮೈಗೊಡದ ।
ಕಾದಿ ಕಡುಗುವ ತಾರ್ಕಿಕರು ಬೆಂ
ಡಾದರಲ್ಲದೆ ನಿಜವನಱಿಯದ
ನಾದಿಸಿದ್ಧನ ಬರವು ಕೌತುಕ[7]ವೆನುತ ನಡೆತಂದ[7] ॥೯॥

ತೊಳಲುವುಪನಿಷದಱಿಕೆಯಿವು ಶ್ರುತಿ
ಗಳ [8]ಸ[8]ರಾಗದ ಬಳಕೆಯಿವು ಮುನಿ
ಗಳ ಸಮಾಧಿಗಳಾದಿಯಿವು ಯೋಗಿಗಳ [9]ಬಳಕೆಯಿವು[9] ।
ಎಲೆಲೆ ಭಕ್ತರ ಭಾಗ್ಯಶಾಲಿಯು
ಬೆಳೆಗಳಿವಲಾ ಎನುತ ಹರಿಪದ
ನಳಿನಯುಗಳದೊಳೊಡಲನೀಡಾಡಿದನು [10]ಭಕ್ತಿಯಲಿ[10] ॥೧೦॥

ನೋಡಿದನು [11]ಮನದಣಿಯೆ ಮಿಗೆ ಕೊಂ ✓
ಡಾ[11]ಡಿದನು ಬೀದಿಯಲಿ ಹರಿದೆಡೆ
ಯಾಡಿದನು ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ ।
ಕೂಡಿ ಕುಣಿದನು ಮನೆಯ ಮುಱಿದೀ
ಡಾಡಿದನು ಮೈಮಱೆದು ಹರುಷದ
ಗಾಡಿಕೆಯುಲಪ್ರತಿಮನೆಸೆದನು ಭಕ್ತಿಕೇಳಿಯಲಿ ॥೧೧॥

---

1 ನ್ನೂ (ಚ ಟ ಡ ನ)　2 ವಲಂಬನು (ಝ)　3 ಹೊಂಗಿ(ಖ ಝ ಡ ನ ಪ ಬ)　4 ಡಗದು (ಖ ಗಾ ಬ)　5 ವಿಜ (ಕ ಮ)　6 ವೇದವಿಶ್ರಮರಾದ (ಗ)　7 ವೆಂದನಾವಿದುರ (ಬ), ವೆನುತ ಹೊಗಳಿದನು (ಮ)　8 ಪ (ಖ ಚ ಟ ಣ ದ)　9 ಬಗೆಗಳಿವು (ಖ ಚ ಝ)　10 ಹರ್ಷದಲಿ (ಖ ಟ ಡ ಪ ಬ)　11 ಮನದಣಿಯದೆನೆ ಕುಣಿದಾ (ಖ ರ ಬ), ಕಂಗಳಲಿ ಕುಣಿಕುಣಿದಾ (ಮ)

ಹಸಿದು ನಾವೈತಂದಡೀಪರಿ
[1]ಮಸಗಿ ಕುಣಿದಾಡಿದರೆ ಮೇಣೀ[1]
ವಸತಿಯನು [2]ನೀ ಮುಱಿದು[2] ಬಿಸುಟರೆ ನಮಗೆ ತಣಿವಹುದೆ ।
ವಸುಮತೀ ನಲ್ಲಭನವರು ಪ್ರಾ
ರ್ಥಿಸಿದರೊಲ್ಲದೆ ಬಂದೆವೈ ನಾ
ಚಿಸದಿರೈ ದಾ [3]ವಿದುರ ಎನುತೊ[3]ಳಹೊಕ್ಕನಸುರಾರಿ ॥೧೨॥

ನೆಱೆಯೆ ಕೃತ್ಯಾಕೃತ್ಯಭಾವವ
ಮಱೆದು ಕಳೆದನು ಮನ ಮುರಾರಿಯು
ನಿಱಿಕಿ [4]ಬಿಗಿದುದು[4] ಕಂಗಳೊಡವೆಚ್ಚವು ಪದಾಬ್ಜದಲಿ ।
ಅಱಿವು ಮಯಣಾಮಯದ ಭಕ್ತಿಯ
ಲೆಱಗಿಸಿದ ಪುತ್ಥಳಿಯೆನಲು ಕಡು
ಪೆಱಗ ಕೇಣಿಯ ಕೊಂಡು ಮೋನದೊಳಿರ್ದನಾ ವಿದುರ ॥೧೩॥

ಒಲವರವು ಕೌತುಕವು ಪಾಲ್ಗಡ
ಲೊಳಗೆ ಮಲ[5]ಗಿಹ[5] ವಿಷ್ಣು ವಿದುರನ
ನಿಳಯದೊಳಗೊಕ್ಕುಡಿತೆಹಾಲಲಿ ಹಸಿವ ನೂಕಿದನು ।
ಹೊಲಬುಗೆಡಿಸಿದನಖಿಳನಿಗಮಂ
ಗಳನು ತನ್ನಱಿಕೆಯಲಿ [6]ಭಜಕಂ[6]
ಗೊಲಿದು ತಾನೈತಹುದು ಕರುಣದ ಘನತೆಯೆನೆ ಲೋಕ ॥೧೪॥

ಹರಿಯ ಪದಕಮಲಾಭಿಷೇಕದ
ವರಪಯೋಬಿಂದುಗಳು ಕೌರವ
ನರಮನೆಯನೊಳಕೊಂಬವೊಲು ಕಡಲಾಗಿ [7]ಹರಿತರಲು[7] ।
ಅರರೆ ಮುರಹರನೊಡನೆ ಹಾಲಿನ
ಶರಧಿ ಮೇರೆಯ [8]ಮುಱಿ[8]ದುದಿಳೆಗ
ಚ್ಚರಿಯೆ[9]ನುತ[9] ಭೀಷ್ಮಾದಿಗಳು ಹೊಗಳಿದರು [10]ಹರುಷದಲಿ[10] ॥೧೫॥

---

[1] ಗಸಣಿಗೊಂಬುವರುಂಟೆ ಮೇಣಾ (ಖ) [2] ಕಿತ್ತ್ತಿ (ಕ ಬ ಮ), ಕುಣಿದಾಡಿ (ಖ) [3] ಯೆನುತಲಂದೊ (ಗ), ವಿದುರಯೆಂದೊ (ಝ ಣ ಬ) [4] ಕೊಂಡುದು (ಕ ಟ ಮ). [5] ಗುವ (ಚ ಟ ಡ ಣ ದ ನ ಬ) [6] ಭಕ್ತ್ರಂ (ಕ ಮ) [7] ಹರಿವುತಿರೆ (ಗ ಚ ಬ), ಕೈಕೊಳಲು (ಝ ರ್ಡ ನ ಪ), ಹರಿದು ಬರೆ (ಟ ದ) [8] ನೊಡೆ (ಕ ಚ ಮ) [9] ನಲು (ಕ ಖ ಗ ಬ ಮ) [10] ಮುರಹರನ (ಣ).

ತೊಲಗಿದಸು ಬಂದಂತೆ ತರಣಿಯು
ಹೊಳಹು [1]ಸೋಂಕಿದ[1] ಚಕ್ಕವಕ್ಕಿಯ
ಬಳಗದಂತಿರೆ ಕೃಷ್ಣರಾಯನ ಬರವ ತಾ ಕೇಳ್ದು ।
ಪುಳಕ ಪಸರಿ[2]ಸೆ[2] ಪರಮಹರ್ಷವ
ತಳೆದು ದೇವನ ಕಾಣಿಕೆಯು ಕಂ
ಗಳಿಗೆ ಕಡುಲೋಲುಪತೆ ಮಿಗೆ ಹರಿತಂದಳಾ ಕುಂತಿ ॥೧೬॥

ಬರವ ಕಂಡಸುರಾರಿ ಮಂಚದೊ
ಳಿರದೆ ದಿಮ್ಮನೆ ನಿಂದು ನರರಾ
ಚರಣಿಗಳ ನಾಟಕವ ತಾನೇ ನಟಿಸಿ ತೋಱಿ[3]ದನು[3] ।
ಹಿರಿಯರಿಗೆ ತಾ ಹಿರಿಯನೆಂಬೀ
ಗರುವತನವನು ಬಿಸುಟು ಕುಂತಿಗೆ
ಕರವ ಮುಗಿದನು ಸಕಲಸನಕಾದಿಗಳು[4]ಘೇ ಎನಲು[4] ॥೧೭॥

ಅಮಿತಕರುಣಾಸಿಂಧುವಿನ ಪದ
ಕಮಲದಲಿ ತಾನೆಱಗಿ ಪುಳಕೋ
ದ್ಗಮದ ಪಾವನತರದ ಸುಖಸೌರಂಭದಲಿ ಮುಳುಗಿ ।
ಗಮಿಸಲಱಿಯವು ಗರುವವೇದ
ಪ್ರಮಿತಿಗಳು ನೀ[5]ನೆಂ[5]ತು ನಡೆತಂ
ದೆಮಗೆ ಗೋಚರ[6]ವಾದೆಯೆ[6]ನುತವೆ ಹೊಗಳಿದಳು ಕುಂತಿ ॥೧೮॥

ದೇವಕಿಯ ವಸುದೇವ[7]ನನು[7] ಬಲ
ದೇವ[8]ಸೌಭದ್ರಾದಿ[8]ಯದುಭೂ
ಪಾವಳಿಯ ಸುಕ್ಷೇಮಕುಶಲವ ಕುಂತಿ ಬೆಸಗೊಳಲು ।
ದೇವ ನಗೆಮೊಗದಿಂದ ವರವಸು
ದೇವ ದೇವಕಿಯಾದಿ ಯಾ[9]ದವ
ರಾ[9] ವಿಲಾಸಮಹೀಶರಿರವನು ಕುಂತಿಗಱುಹಿದನು ॥೧೯॥

---

[1] ಸಾರಿದ (ಕ ಖ ಝ ಪ ಬ ಮ) [2] ಸಿ (ಕ ಖ ಟ ಪ ಮ) [3] ಸಲು (ಖ ಝ), ಸಿದ (ಗ ಚ), ಸುತ (ಟ ಡ ಣ ನ ಪ) [4] ನಲಿದಾಡೆ (ಗ), ನಗುತಿರಲು (ಚ ಟ ಡ ಣ ನ ಪ) [5] ವೆಂ (ಚ ರ ಣ) [6] ವಾದಿರೆ (ಚ ರ ಣ), ನಾದೆಯೆ (ಟ ಡ ದ ನ ಪ) [7] ನಾ (ಚ) [8] ನನಿರುದ್ಧಾದಿ (ಗ ಡ, ಣ, ನ ಪ) [9] ಗಿರಲಾ (ಖ ಚ, ಟ, ಬ).

ಯಮತನುಜನಧಿಕನು ಹಿಡಿಂಬಾ
ರಮಣನತಿಬಲ್ಲಿದನು ಪಾರ್ಥನ
ವಿಮಳವಿಗ್ರಹ ಲೇಸು ಸಕಲಮಹೀಶಪರಿವೃತರು ।
ಯಮಳರಿರವತಿಚೆಲುವು ನೇಹದ
ರಮಣಿಯಾಕೆಯ ಸುತರು [1]ಮಹದು[1]
ದ್ಯಮರು ಕೇಳೆಂದಸುರರಿಪು ಕುಂತಿಗೆ ನಿಯಾವಿಸಿದ ॥೨೦॥

ನರನಮಗನಭಿಮನ್ಯು ಕುಶಲನು
ವರಸುಭದ್ರಾದೇವಿ ಮೊದಲಾ
ಗಿರ[2]ವು[2] ಬಾಂಧವರೆಲ್ಲ ಜೀವಂತರು ನಿದಾನಿಸಲು ।
ಪರಮಮಿತ್ರರು [3]ನ[3]ಮ್ಮೊಳೊಂದಾ
ದರು ದ್ರುಪದನಕ್ಷೋಣಿ[4]ಸೇನೆಯು[4]
ನೆರವು ಬಂ[5]ದುದು[5] ರಾಜಕಾರ್ಯದ [6]ಬಳಕೆ[6] ಲೇಸೆಂದ ॥೨೧॥

ಅದಿತಿ ಮಕ್ಕಳ ಹಡೆದುದೇ ಲೋ
ಕದಲಿ ಫಲ ಕೌಸಲೆ ಕುಮಾರ[7]ನ[7]
ಪದವ ಪಡೆದುದೆ ಸಫಲ ವಿನತೆಗೆ ಮಕ್ಕಳಾಯ್ತು ಫಲ ।
ಮುದದಿ ನೀನೇ ಮಕ್ಕಳನು ಪಡೆ
ದದುವೆ ಫಲ ಕೇಳೆಂದು [8]ಪರಿತೋ
ಷದಲಿ ಕುಂತಿಯ ಹೊಗ[8]ಳಿದನು ಮುರವೈರಿಯುಚಿ[9]ತದಲಿ[9] ॥೨೨॥

ಲೋಕ ಮೆಚ್ಚಲು ನಿನ್ನ ಸುತರು ದೃ
ಢೈಕಸತ್ಯರು ನುಡಿದ ಕಾಲವ
ನೂಕಿದರು ರಾಜ್ಯಾಭಿಲಾಷೆಗೆ ಬಲವ ನೆರಹಿದರು ।
ಆ ಕುಮಾರರಿಗರ್ಧರಾಜ್ಯವ
ನೀ ಕುರಾರನೊಳೀಸಿ ಕೊಡುವ ವಿ
ವೇಕದಲಿ [10]ತಾ ಬಂದೆನೆಂ[10]ದನು ಕುಂತಿಗಸುರಾರಿ ॥೨೩॥

---

[1] ಸುಮಹೋ (ರ ಡ ಣ ನ ಪ) [2] ಲು (ಖ ಚ ಟ ಣ ಪ ಬ) [3] ತ (ಖ ಗ ಚ ಟ ಣ ಪ) [4] ಯಿಪರಿಗೆ (ಗ ಚ ಡ ಬ), ಸೇನೆಯು (ರ ಣ ಪ) [5] ದನು (ಕ ಗ ಚ ಮ) [6] ಹದನು (ಕ ಮ) [7] ರ (ಕ ಖ ಮ) [8] ಕುಂತಿಯ ಹದು (ಮ) [9] ತಾನುಚಿತವಚನದಲಿ (ಮ) [10] ನಾವ್ ಬಂದೆವೆಂ (ಟ ದ),

ಪರಮ[1]ಪರಿ[1]ತೋಷದಲಿ ಕೃಷ್ಣನ
ವರಸುಧಾಮಯವಚನವನು ಪಂ
ಕರುಹಮುಖಿ ಕೇಳುತ್ತ ನನೆದಳು ನಯನವಾರಿಯಲಿ ।
ಮುರಮಥನನಾ ಕುಂತಿಗೆಲ್ಲವ
ನೊರೆದು ವಿದುರನ ಕರೆದು ಕೌರವ
[2]ನರಮನೆಯ[2] ಸಮಯವನು[3] ನೋಡಿದು ಹೇಳು ನಮಗೆಂದ[3] ॥೨೪॥

ಹೋಗು ನೀನಾತಂಗೆ ಪಾಂಡವ
ರಾಗ[4]ಸಮುದಯ[4] ಬಂದನೆಂಬುದ
ನೀಗಲರುಹುವುದಾತ ಮಾ[5]ಡುವ[5] ನಯದ ಬಳವಿಗೆಯ ।
ತಾಗುಬಾಗಿನ ಹವಣನಾತನ
ಲಾಗ ನೋಡುವೆವೆನಲು ಕುರುಕುಲ
ಸಾಗರಾಗ್ನಿಯ ಮನೆಗೆ ಬಂದನು ವಿದುರ ಹರಿ ಬೆಸಸೆ ॥೨೫॥

ಓಲಗದೊಳಿರ್ದಖಿಳಮೂರ್ಖರ
ಮೌಳಿಯನು ಕಂಡವಧರಿಸು ಸಿರಿ
ಲೋಲ ಬಿಜಯಂಗೈಯಲವಸರವುಂಟೆ ಹೇಳೆನಲು ।
ನಾಳೆ ಕಾಣಿಸಿಕೊಂ[6]ಬೆವಿಂದೇ[6]
ನಾಳಿಕಾಟಿನ ಬರವು ಹಗೆ[7]ಗಳ[7]
ಪಾಲಿ[8]ಸುವ ಭರ ಸಂಧಿ[8]ಕಾರ್ಯಕೆ ಬಾರದಿರನೆಂದ ॥೨೬॥

ನೋಡಿರೈ ಪಾಂಡವರು [9]ಪಾತಕ
ರಾ*ಡುವಾ*ಟವನಾಡಿದರ[9]ಯಿಾ
ನಾ[10]ಡಿನೊಳಗಿದು[10] ಸಲುವುದವನಿಯೊಳಧಿಕಲೇಸೆನಿಸಿ ।
ರೂಢಿಯೊಳಗಾಚಾರವಡಗಿತು
ಜೋಡೆ[11]ಯಲಿ ಜನಿಸಿದ್ವರನೀ[11] ಬೀ§
ಡಾಡಿ ಕೂಡಿದನೆಂದು ಹೊಯ್ದನು ರವಿಸುತನ ಕರವ ॥೨೭॥

---

[1] ಸಂ (ಕ ಗ ಮ) [2] ರರಸಸಿಹ (ಚ) [3] ಹೇಳಿದು ನೋಡಿ ನೀನೆಂದ (ಕ ಮ), ನೋಡಿಸಿ ಹೇಳು ನಮಗೆಂದ (ಖ ಣ ಬ) [4] ಬಯಸುವ (ಕ ಮ) [5] ಡಿದ (ಗ ಡ) [6] ಬುದಿನ್ನೇ (ಕ), ಬೆವಿನ್ನೇ (ಗ ಮ), ಬೆನಿಂದೇ (ಪ ಬ) [7] ಯರ (ಟ ರ ಣ ದ ಬ) [8] ಸುವ ಒಳಿಸಂಧಿ (ಕ, ಮ), ಸುವೆನೆಂದೆಂಬ (ಚ ಝ), ಸಲು ತಾ ಸಂಧಿ (ಟ ದ), ಸುವ ವರಸಂಧಿ (ಪ) [9] ಲೋಕದೊಳಾಡದಾಟವನಾಡಿದರು (ಕ ಮ) * ಡಿದಾ (ಚ ಬ) [10] ಡೊಳಗೆಯಿದು (ಕ ಖ ಪ ಮ) [11] ಜನ್ನನಿಗೆ ಜನಿಸಿದರ (ಗ ರ, ಡ, ಣ ಪ) § ರಿಗೀ ಕೇ (ಖ, ಟ, ದ)

ನಾಳೆ ಬರಹೇಳೆಂದು ವಿದುರನ
ಬೀಳುಕೊಟ್ಟನು ಬೇಹ ಭಟರಿಗೆ
ವೀಳೆಯವ ನೀಡಿದನು ಹರೆದುದು ನೃಪತಿಯಾಸ್ಥಾನ ।
ಜಾಳಿಸಿತು ತಮ ಮೂಡಣಾದ್ರಿಯ
ಮೇಲೆ [1]ತಲೆದೋಱಿದನು ರವಿ[1] ಭೂ
ಪಾಲ ಕೌರವ[2]ನಂದಿನೊಡ್ಡೋ[2]ಲಗವ ರಚಿಸಿದನು ॥೨೮॥

ಕರಸಿದನು ಮಣಿಮಕುಟಕಿರಣದ
ಗರುವರನು ಗಾಢಪ್ರತಾಪರ
ಬರಿಸಿದನು ತೂಕದ ಮಹಾಮಂಡಳಿಕಮನ್ನೆಯರ ।
ಧುರವಿಜಯ ಸಿದ್ಧರನು ಚಾಮೀ
ಕರದ ಗದ್ದುಗೆ[3]ಯ[3]ಖಿಳಸಾವಂ
ತರನು ಪೃಥ್ವೀಪಾಲರನು ನೆರಹಿದನು ಕುರುರಾಯ ॥೨೯॥

ಬಲದ ಗದ್ದುಗೆಗಳಲಿ ಭಟರ
ಗ್ಗಳೆಯ ರವಿಸುತ ನದಿಯಮಗ ನೃಪ
ತಿಲಕದುಶ್ಶಾಸನ ಕೃಪ ದ್ರೋಣಾದಿ ನಾಯಕರು ।
ಹೊಳೆವ ರತುನದ ಸಾಲ ಮಕುಟದ
ಚೆಲುವಿಕೆಯ ಸೌರಂಭದಲಿ ಗಜ
ಗಲಿಸಿದರು ಮಾಣಿಕ್ಯಮಯಭೂಷಣವಿಲಾಸದಲಿ ॥೩೦॥

ಸತಿಸಹಿತ ಧೃತರಾಷ್ಟ್ರಭೂಪತಿ
ಸುತನ ಬಲವಂಕದಲಿ ಕನಕೋ
ಚಿತದ ಪೀಠದಲೆಸೆದನಾತನ ಬಲದ ಭಾಗದಲಿ ।
ಚತುರಚತುರಾನನರು ತರ್ಕ
ಶ್ರುತಿಸಮಸ್ತಕಲಾಸ್ವತಂತ್ರರು
ನುತಗುಣರು ನೃಪಸಭೆ[4]ಯಲೆಸೆದುದು[4] ಸೂರಿಸಂದೋಹ ॥೩೧॥

---

[1] ಕೆಂಪೆಸೆಯಿತ್ತು ಕುರು (ಕ ಚ ಮ) [2] ನೊಲವು ಮಿಗಲೋ (ಟ ದ), ನುದಯದೊಡ್ಡೋ (ಡ ನ ಪ), ನಂದ ಮಿಗಲೋ (ಬ) [3] ಗ (ಗ. ಚ. ಟ. ರ), [4] ಯೊಳೆಸೆದರು (ಗ ಟ. ರ ದ. ಪ ಮ).

[1]ಮದವದ[1]ತಿಬಲ ಶಕುನಿ ಸೈಂಧವ
ನದಟ ನೃಪಕಾಂಭೋಜ[2]ನತಿ[2]ಸಂ
ಪದನು ಭೂರಿಶ್ರವ ಸುಲೋಚನ ವೀರವೃಷಸೇನ ।
ಕದನಕಾಲಾನಲರು ವರಹೇ
ಮದ ಮಕುಟ[3]ದವರರಸನೆ[3]ಡವಂ
ಕದಲಿ ಕುಳ್ಳಿರ್ದರು ಮಹಾಯಾಸ್ಥಾನರಚನೆಯಲಿ ||೩೨||

ತರುಣಶೃಂಗಾರದ ಸಭಾಬಂ
ಧುರದ ನೂರ್ವರು ಕೌರವೇಂದ್ರನ
ವರಕುಮಾರರು ಮುಂದೆ ಮೆಱೆದರು ಲಕ್ಷಣಾದಿಗಳು ।
ವರಕಿರೀಟದ ಕಾಲತೊಡರಿನ
ಕೊರಳ ಪದಕದ ಕೈಯ ಸುರಗಿಗ
ಳರಸನನುಜರು ನೂರ್ವರೆಡವಂಕದಲಿ ಮೋಹಿದರು ||೩೩||

ಮಿಸುಪ ತಮ್ಮ ಮುಖೇಂದುವನು ಸೈ
ರಿಸದ ಚಂದ್ರನ ಕಿತ್ತು ನಭದಲಿ
ಬಿಸುಟು [4]ಬೇರ್ಗಳ[4] ಹಿಡಿದರೋ ಹೇಳೆನಲು ಸಭೆಯೊಳಗೆ ।
ಶಶಿವದನೆಯರ ಕೈಯ ಸೀಗುರಿ
ಯೆಸೆದುದಿಕ್ಕೆಲದಲಿ ಸುಯೋಧನ
ವಸುಮತೀಶನ ವೈಭವದಲಾಸ್ಥಾನ ಚೆಲುವಾಯ್ತು ||೩೪||

ಕಲಹವಿಲ್ಲದೆ ನೂಲಿನೆಳೆಯಲಿ
ತಲೆಯನರಿವ ವಿರೋಧಿರಾಯರ
ನಳುಕಿಸುವ ಸಾಮದಲಿ ರಿಪುಭೂಭುಜರ ಬೆದಱಿಸುವ ।
ಒಲಿದಡೊಳಲಂಚದಲಿ ಭಿದ್ರಿಸಿ
ಕೊಲುವ ಮುನಿದರೆ ಮಂತ್ರಶಕ್ತಿ[5]ಯೊ
ಳಳುಕಿ[5]ಸುವ ಮಂತ್ರಿಗಳು ಮೆಱೆದರು [6]ವಾಮಭಾಗದಲಿ[6] ||೩೫||

---

[1] ಮೊದಲೊಳ (ಚ ತ ಬ)　[2] ರಥ (ಗ ಡ ಣ ನ ಪ), ರಣ (ಚ ಬ)
[3] ರಚನೆಯಲಲಿಯು (ಕ ಮ), ರಶ್ಮಿಗಳಲಿ (ಬ)　[4] ಬೆರಳಲ (ಕ ಜ, ಬ, ಮ),　[5] ಯನಳಲ (ಖ, ಡ, ನ, ಪ),　[6] ರಾಯಸಭೆಯೊಳಗೆ (ಗ),

ನಿಗಮ ತರ್ಕ ಪುರಾಣ ಕಾವ್ಯಾ
ದಿಗಳ ವಿಸಟಂಬರಿಗಳೊತ್ತೊ
ತ್ತೆಗಳಿಗಿಟ್ಟೆಡೆಯಾಗಿ ಹಿಗ್ಗಿದ ಜರರದಗ್ರಿಯರು।
ಬಗೆಯುಪನ್ಯಾಸದ ಸುಶಾಖಾ
ದಿಗಳ ಬೀಳಲು ಬೆಳೆದ ಗಡ್ಡದ
ವಿಗಡ ಭೂಯೋ[1]ವಿದ್ಯ[1]ರಿದ್ದರು ನೃಪನ ಸಭೆಯೊಳಗೆ ॥೩೬॥

ಸಲೆ ಸಮಸ್ಯ[2]ಕ[2]ನಂತಪದ್ಯವ
ಫಳಿಲನನ್ವಯಿಸುವ ಸುಕಾಂತಿಯು
ಲಲಿತ ಮಧುರ ಸಮಾಧಿ ಸುಕುಮಾರಾದಿ ರಚನೆಯಲಿ।
ಹಲವುಪಮೆಯುತ್ಪ್ರೇಕ್ಷೆ ರೂಪಕ
ಸುಲಲಿತಾಲಂಕೃತಿ ಚಮತ್ಕೃತಿ
ಗಳ ಚತುರ್ಭಾಷಾವಿಶಾರದ ಕವಿಗಳೊಪ್ಪಿದರು ॥೩೭॥

ನುಡಿದು ತಲೆದೂಗಿಸುವ ಮಱೆಗ
ನ್ನಡದಲಾಹಾ ಎನಿಸಿ ಮೆಚ್ಚನು
ಪಡೆವ ವಾ[3]ಗ್ಮಿ[3]ಗಳೋದಿ ಹೊಗಳಿಸಿಕೊಂಬ ಗಮಕಿಗಳು।
ಕೊಡುವ [4]ಪದ್ಯ[4]ಕೆ ಸುಪ್ರಮೇಯದ
ಗಡಣಕಬುಜಭವಾದಿ ವಿಬುಗಳು
ಬಿಡಿಸಲರಿದೆನಿಪತುಳತಾರ್ಕಿಕಕವಿಗಳೊಪ್ಪಿದರು ॥೩೮॥

ನುತಶುಭೋದಯ ಜೀಯ ಶತ್ರು
ಪ್ರತತಿಸಂಹಾರಕ ಸಮಸ್ತ
ಕ್ಷಿತಿಪತಿ ಬ್ರಹ್ಮಾಯುರಸ್ತು ಎನುತ್ತ ಕೈನೆಗಹಿ।
ನುತಗುಣ[5]ನ[5] ಬಿರುದಾವಳಿಯ ಸಂ
ಗತಿಯನಭಿವರ್ಣಿಸುತ ಸಮಯೋ
ಚಿತದ ಮನ್ನಣೆವಡೆದು ಮೆಱೆದುದು ಭಟ್ಟಸಂದೋಹ ॥೩೯॥

---

[1] ಪಾದ್ಯ (ಕ ಗ ಚ ಮ), ವೃದ್ಧ (ಣ ಬ) [2] ದ (ಗ ಠ, ಢ) [3] ಧಿ (ಕ ಮ)
[4] ಸಮಯ (ಕ, ಛ, ಜ, ಬ ಮ) [5] ವ (ಗ ಟ, ಡ ದ ನ), ದ (ಝ ರ), ರ (ಣ),

*ಬರೆದ ಬಳಿಕದು ವಿಧಿಯು ಸೀಮೆಯು
ಬರೆಹ ನಿಜಕಾರ್ಯಾರ್ಥಲಾಭವು
ದೊರಕಿದರೆ ಪತಿಯರ್ಥ ನೀರಲಿ ಬರೆದ ಲಿಪಿಯಂತೆ ।
ಕರಗುಪಿತ ಲೋಲು[1]ಪರು[1] ಲಂಚದ
ಪರಮಜೀವದ ಜಾಣರಾ ಸಿರಿ
ಕರಣದವರೊಪ್ಪಿದರು ಭೂಪಾಲಕನ ಸಭೆಯೊಳಗೆ ॥೪೦॥

ನಳನ ನಹುಷನ ಶಾಲಿಹೋತ್ರನ
ಬಲುಮೆಗಳು ಕಿಱಿದೆಂ[2]ಬ[2] ವಿದ್ಯಾ
ನಿಳಯ[3]ವರ[3]ಗೇವಂತರೇಱಾಟವನು ನಸುನಗುತ ।
ಬಲಿದ ದೃಢವಾಘೆಗಳ [4]ದೃಷ್ಟಾ
ವ[4]ಳಿಯ ಹಯ[5]ಪ್ರೌ[5]ಢಪ್ರತಾಪರು
ಹೊಳೆವ ಮುಕುಟದ ಸಾಲುಗಳಲೊಪ್ಪಿದರು ರಾವುತರು ॥೪೧॥

ಅತಿಮದದಿ ತನಿಸೊಕ್ಕಿದೈರಾ
ವತವ ಕಿವಿವಿಡಿದೆಳೆವ ದಿಗ್ಗಜ
ತತಿಯನಮಲಾಂಕುಶ[6]ದಲಂ[6]ಜಿಸಿ ಕೆಲಬಲಕೆ ಬಿಡುವ ।
ನುತಗಜಾರೋಹಕರು ಕುರುಭೂ
ಪತಿಯ ಹೊರೆಯಲಿ ಮೆಱೆದರಮರಾ
ವತಿಯ ರಾಯನ ಸಭೆಯ [7]ಗೆಲಿದುದು ಕೌರವಾ[7]ಸ್ಥಾನ ॥೪೨॥

ನಡೆದು ಪರಮಂಡಲದ ರಾಯರ
ಜಡಿದು ಕಪ್ಪವ [8]ಸೆಳೆವ[8] ಶಿಷ್ಟರ
ಗಡಣ[9]ವೆಸೆ[9]ದುದು ಪವನವೇಗದ ರಾಯಭಾರಿಗಳು ।
ಕಡುಗಿದರೆ ಕಾಲಂಗೆ [10]ಬಿರುದಿನ[10]
ತೊಡರನಿಕ್ಕುವ ಜವನ ದಾಡೆಯ
ತುಡುಕುವಗ್ಗದ ವೀರರೆಸೆದರು ದೃಷ್ಟಿ[11]ಸರಿಸದಲಿ[11] ॥೪೩॥

---

[1] ಪ್ತಿ (ಕ ಗ ಬ ಮ) * ೪೦ನೆಯ ಪದ್ಯವು (ಗ ಟ ಡ ಣ ದ ನ ಪ) ಪ್ರತಿಗಳಲ್ಲಿ ೩೫ನೆಯ ಪದ್ಯವಾದಮೇಲೆ ಇದೆ [2] ದು (ಗ) [3] ವಡ (ಕ), ಕರ (ರ), ದವ (ಣ) [4] ವಷ್ಟಿಯಲು (ಚ) [5] ಗಾ (ಗ ಚ ಡ ಣ ಶ) [6] ದಿನಂ (ಟ ಡ ದ ನ ಪ) [7] ವೊರೆಸೆದುದು ರಾಯನಾ (ಕ ಮ) [8] ಕೊಂಬ (ಕ ಮ) [9] ಮೆಱೆ (ಕ ಮ) [10] ಕಾಲಲಿ (ಣ ಬ) [11] ವಾರಿಯಲಿ (ಖ ಚ ಪ ಬ ಮ).

ಎಳೆಯ ಮಿಂಚಿನ ಕುಡಿಯ ಸೂಸುವ
ನಳಿನ[1]ದೃಶೆಯರು[1] ಶಶಿಯ ಬಿಂಬವ
ಹಳಿವ ಹುರುಡಿಸು[2]ವಬುಜ[2]ಮುಖಿಯರು ಕೋಮಲಾಂಗಿಯರು।
ಸೆಳೆನಡುವಿನಗ್ಗಳೆಯರೊಪ್ಪುವ
ಕಳಸಕುಚೆಯರು ಘನಜಘನೆಯರು
ಚಳದಳ[3]ಕೆಯ[3]ವರರಸನೆಡವಂಕದಲಿ ಮೋಹಿದರು ॥೪೪॥

*ಬಿಗಿದ ಮೊಲೆಗಳ ಮೆಱೆವ ಪೊಱವಾ
ಱುಗಳ ಬಿಂಬಾಧರದ ನಳಿತೋ
ಳುಗಳ ಕಮಲಾನನದ ಕೊಂಕಿದ ಕುರುಳ ತೆಳುವಸಿಱ।
[4]ನಗೆಮೊಗದ[4] ಬಲುಮುಡಿಯ ರಂಭೋ
ರುಗಳ ಮಿಾನವಿಲೋಚನದ ಚೆಲು
ವುಗಳ ಪದ್ಮಿನಿಯರುಗಳೆಸೆದರು ರಾಜಸಭೆಯೊಳಗೆ ॥೪೫॥

ಮಿಾನಲೋಚನ ಚಪಳದೃಷ್ಟಿ ವಿ
ತಾನಭಾಳ ವಿಶಾಲಸರಸಿರು
ಹಾನನದ ಕಿಱುಮುಡಿಯ ಕಂಬುಗ್ರೀವ ನಳಿತೋಳ।
ಆ ನಿತಂಬದ ಹೊಳೆವ ಮೊಲೆ ನಡು
ಮಾನಿನಿಯ ನಸುತೇಜವೆನಿಸುವ
ಮಾನರಾಣಿಯರೆಸೆವ ಚಿತ್ತಿನಿ ಸತಿಯರೊಪ್ಪಿದರು ॥೪೬॥‡

---

* (ಖ ತ ಯ) ಪ್ರತಿಗಳಲ್ಲಿ ೪೫ ರಿಂದ ೪೯ ಪೂರ್ತಿ ಪದ್ಯಗಳಿಲ್ಲ (ಬ) ಪ್ರತಿಯಲ್ಲಿ ೪೫, ೪೬, ೪೮, ೪೯ನೆಯ ಪದ್ಯಗಳಿಲ್ಲ

‡೪೬ನೆಯ ಪದ್ಯವು (ಗ ಟ ರ ಡ ಣ ದ ನ ಪ) ಪ್ರತಿಗಳಲ್ಲಿ ಈ ರೀತಿ ಇದೆ —

[5]ದಾನ[5]ಗಂಧದ ಕಿಱುವ ಮಡಿಯ ಕಮ
ಲಾನನದ ನಿಡುದೋಳ ಲತೆಯ ನ
ವೀನಕೋಮಲವಾಗಿ ತೋಱುವ ಕಿಱಿಯ ಕಣ್ಣುಗಳ।
ಆ ನಿತಂಬದ ಹೊಳೆವ ಮೊಲೆಗಳ
ನೂನಮಧ್ಯದೊಳೆಸೆವ ಬಾಸೆಯ
ಮಾನವತಿಯರೆನಿಪ್ಪ ಹಸ್ತಿನಿಯರುಗಳೊಪ್ಪಿದರು ॥

[1] ದೃಷ್ಟಿಯ (ಖ ಝ), ನಯನದ (ಗಾ) [2] ವಿಂದು (ಗ ಚ) ತೆಸೆವ (ಡ, ನ, ಪ, ಬ) [3] ಕದ (ಚ), [4] ಬಗೆಗೊಳಿಪ (ಗ ಟ ಡ, ಣ ದ, ನ ಪ) [5] ಆನೆ (ರ ಪ),

ತಳಿತಹುಬ್ಬಿನ ಕುರುಳಕೊಂಕಿನ
ಬಳಲುಮುಡಿಗಳ [1]ಕೊಳೆವಧರ ಪಿಂ
ಗಳವಿಲೋಚನ[1] ಗೌರವರ್ಣದ [2]ಮಂದ[2]ರಾಗತೆಯ ।
ಜಲಜ[3]ಪರಿಮಳ ಮಿಸುಪ[3] ರೋಮಾ
ವಳಿಯ [4]ಜಂಘೆಯ ದೊಡ್ಡ ನಡುವಿನ[4]
[5]ಲಲಿತವದನದ[5] ಶಂಖಿನಿಯರೆಸೆದರು [6]ವಿಲಾಸದಲಿ[6] ॥೪೭॥

ಗುರುನಿತಂಬದ ವಿತತವಕ್ಷದ
ಬೆರಳು ಕಿಱುಮುಡಿ ತೋ[7]ರ[7]ತೊಡೆ [8]ನಿಱು
ಗುರುಳ ಕೋಮಲಿಕೆಗಳ ಬಿಗುಹಿನ[8] ನಡುವಿನಿಂದೆಸೆವ ।
ಕಿಱುಮೊಲೆಯ ಮಧ್ಯಮದ ರತಿಗಳ
ಪರಮಸೌಭಾಗ್ಯದ ಸಮುದ್ರದ
ಗರುವಿಕೆಯ [9]ಹಸ್ತಿ[9]ನಿಯರೆಸೆದರು ರಾಜಸಭೆಯೊಳಗೆ ॥೪೮॥

*ಗರುವಿಕೆಯ ಗಾಡಿಕಯ ಸುರತಾ
ತುರದ ಚಿತ್ತದ ಸಂಚುಬುದ್ಧಿಯ
ತರಳತರ ಮೃದುಮಧುರವಚನದ ಚಪಲಚತುರತೆಯ ।
[10]ಸರಸಿಯರು[10] ಕಡುಚೆಲುವಿಕೆಯೊಳ
ಚ್ಚರಿಯರಿಗೆ ಹೊಯ್ಕೈಗಳೆನಿಸುವ
ತರಳನಯನೆಯರೊಪ್ಪಿದರು ಕರ್ಣಾಟವನಿತೆಯರು ॥೪೯॥

†ಮುರಿದು ನೋಡಿದರಖಿಳರಾಯರು
ಶಿರವ ಬಾಗಲು ಲಾಳ ಮಾಳವ
ತುರುಕ ಕೊಂಕಣ ಗೌಳ ಗುಜ್ಜರ [11]ವಂಗ[11] ಹಮ್ಮೀರ ।
ವರಕಳಿಂಗಾದಿಗಳು [12]ಬೆಸಸೆನು[12]
ತಿರಲು ಕೋಮಲಿಕೆಯರು ಸಿತಚಾ
ಮರವ [13]ಬೀಸಲು ಮಹಿಪ[13] ಮೆಱೆದನು ಸಿಂಹಪೀಠದಲಿ ॥೫೦॥

---

[1] ಕೆಂಪಿನಧರದ ಚಲಿತ ನಯನದ (ಗ ಟ ರ ಡ ಣ ದ ನ ಪ) [2] ನೂನ (ಗ ಟ ರ ದ ನ), ಮಾನ (ಡ ಪ) [3] ಗಂಧದ ಪೆಱೆವ (ಗ ಟ ರ ಡ ಣ ದ ನ ಪ) [4] ಪೀವರಮಧ್ಯಜಂಘೆಯ (ರ ಡ ಣ ನ ಪ) [5] ನಳಿನಮುಖಿ (ಕ ಮ) [6] ರಾಜಸಭೆಯೊಳಗೆ (ಕ ಮ) [7] ಳು (ಟ ದ ನ ಪ) [8] ನಿಡುಗುರುಳುಗಳ ಗಾಡಿಕೆಯ ಬೀಗಿದ (ಗ ಟ ಡ ಣ ದ ನ ಪ) [9] ಚಿತ್ರಿ (ಗ ಚ ಟ ಡ ಣ ನ ಪ) [10] ಸುರಸತಿಯ (ಕ ಮ) [11] ಮಗಧ (ಟ) [12] ಜೀಯೆನು (ಗ ಟ ರ ಡ ಣ ದ ಪ) [13] ಚಿಮ್ಮಲು ಭೂಪ (ಗ ಚ ರ), ತಿರುಹಲು ಭೂಪ (ಡ ಣ ದ ಪ)

* ೪೯ನೆಯ ಪದ್ಯವು (ಝ ಟ ಣ ದ) ಪ್ರತಿಗಳಲ್ಲಿಯೂ ಇಲ್ಲ

† ೫೦ನೆಯ ಪದ್ಯವು (ಚ ರ ತ ಬ) ಪ್ರತಿಗಳಲ್ಲಿಲ್ಲ

ಆವ ರೀತಿಯದಾವ ವಿಸ್ತರ
ವಾವ ದೇಶದ ಸಿರಿಯ ಸಡಗರ
ವಾವ ಪರಿಯ ವಿಲಾಸವಾವ ವಿಡಾಯಿ ತಾನೆನಲು ।
ಹಾವು ಹಳವಿಗೆಯಾದ ರಾಯನು
ರಾವಣಾರಿಯ ಕಾಣಿಕೆಗೆ ಬಲು
ರೀವಿಯನು ತೋಱಿದನು ಸಾಱುವ ಭಟ್ಟ[1]ರೋಳಿಯಲಿ[1] ॥೫೧॥

ಬರಲಿ ಕರೆ ಕೈತವದ ಶಿಕ್ಷಾ
ಗುರುವನೆಂದವನೀಶ ದೂತರ
ಹರಿಯಬಿಟ್ಟನು ಹರಿಯ ನಿಳಯಕೆ ಹರಿಯ ಬೇಗದಲಿ ।
ಚರರು ಹರಿತಂದಸುರರಿಪುವಿನ
ಚರಣದಲಿ ಮೆಯ್ಯಿಕ್ಕಿ ನೊಸಲಲಿ
ಕರಪುಟಾಂಜಲಿ ಮೆಱೆಯುತಿರೆ ಬಿನ್ನಹವ ಮಾಡಿದರು ॥೫೨॥

ದೇವ ದೇವರ ಸಮಯಾಪೆನೆ ರಾ
ಜೀವನಾಭನು ಮುಗುಳುನಗೆಯಲಿ
ಭಾವನವರಟ್ಟಿದರೆ ಹರಹರ ಬಹೆವು [2]ನಾವೆನುತ[2] ।
ರಾವಣನ [3]ಪರಿ[3] ನೆಲಸಿತಿವನಲಿ
ಸಾವಿಗಂಜುವನಲ್ಲ ಖಳ ಮಾ
ಯಾವಿದನು ನಮ್ಮುಕುತಿ ಕೊಳ್ಳದು ವಿದುರ ಕೇಳೆಂದ ॥೫೩॥

[4]ಎನುತ ಮಂಚವನಿಳಿದು[4] ವರಕಾಂ
ಚನವರೂಥಕೆ ಕೈಗೊಡುವ ಯದು
ಜನಪರುಗ್ಗಡಣೆಯಲಿ ಬಿಜಯಂಗೈದನಸುರಾರಿ ।
ಮುನಿನಿಕರ ಸಂದಣಿಸಿತಭ್ರದೊ
ಳನಿಮಿಷಾವಳಿ ನೆರೆದುದಿಭಪುರಿ
ಜನವೊಡನೆ ನಡೆತರಲು ಹರಿ ಬರುತಿರ್ದ[5]ನೋಲಗಕೆ[5] ॥೫೪॥

---

[1] ರೊಗ್ಗಿನಲಿ (ಗ) [2] ನಾವಿಂದು (ಗ), ನಡೆಯೆನುತ (ಚ, ಝ ಟ ಣ ಪ ಬ) [3] ಸಿರಿ (ಚ ಬ), ಪಡಿ (ಟ ಠ ಡ ದ ಪ). [4] ವಿನುತೆ ಗಜಗಮನದಲ (ನ) [5] ನರಮನೆಗೆ (ಕ ಮ)

*ಕಲಿಮ[1]ಲ[1]ದಿ ಹೊಲೆಗಲಸಿದಿಭಪುರಿ
ಯೊಳಗೆ ನಿರ್ಮಳವಾಯ್ತು ಕೃಷ್ಣನ
[2]ಸುಲಭ[2]ದರ್ಶನದಿಂದ ಬೆಂದವು ಜನದ ಭವಬೀಜ।
ಲಲನೆಯರು ತಂತಮ್ಮ ನಯನಂ
ಗಳಿಗೆ ದೇವನ [3]ತಂದು ಸಮ್ಮದ[3]
ಪುಳಕಿತಾಂಗಿಯರಾದರೆಲೆ ಜನಮೇಜಯಕ್ಷಿತಿಪ ॥೫೫॥

ಕಂಜಸಂಭವಪಿತನು ಬಂದನು
ನಂಜಿನಲಿ ಪವಡಿ[4]ಸುವ[4] ಬಂದನು
ಕುಂಜರನ ಮೊಱೆಗೇಳಿ ಸಲಹಿದ ದೇವ ತಾ ಬಂದ।
ಅಂಜಿದಸುರನ ಕಾಯ್ದು ಬಂದನು
ಭಂಜನೆಗೆ ಬಲುದೈವ ಬಂದ ನು
ಅಂಜನೆಯಸುತನಾಳ್ದ[5] ಬಂದನು ನೃಪತಿಯೋಲಗಕೆ ॥೫೬॥

ದೇವ ಬಂದನು ತನ್ನ ನೆನೆವರ
ಕಾವ ಬಂದನು ದೈತ್ಯಕುಲವನ
ದಾವ ಬಂದನು ಭಾಗವತಜನಲೋಲುಪನು ಬಂದ।
ಭಾವಿಸುವೊಡಘಹಾರಿ ಬಂದನು
ವೋವಿ ಭಜಿಸಲು ತನ್ನ [6]ಬೀಱುವ[6]
ದೇವ [7]ಗದುಗಿನ ವೀರ ನರಯಣ ಬಂದನೋಲಗಕೆ[7] ॥೫೭॥

ಅರಸ ಬಂದನು ಭಾಗವತಜನ
[8]ಪರುಸ[8] ಬಂದನು ಭಕ್ತವತ್ಸಲ
ಕರುಣಿ ಬಂದನು ತನ್ನ[9]ನೊದೆದರೆ ಪದವನಂಕಿಸಿದ[9]।
ಪರಮಪುರುಷೋತ್ತಮನು ಬಂದನು
ದುರಿತ ದುರ್ಗವಿಭಾಡ ಬಂದನು
ಸುರರ ಸಲಹುವ ದೇವ ಬಂದನು ನೃಪತಿ[10]ಯೋಲಗಕ[10] ॥೫೮॥

---

[1] ನ (ಗ ಝ) [2] ಚಲನ (ಚ ಡ ಪ ನ), ಲಲಿತ (ಟ ಬ). [3] ತೆಗದು ಸನ್ನುತ (ಣ ಬ) [4] ಸಿದ (ಣ ಪ) [5] ಧನಂಜಯಾದ್ಯರ ಭಾವ (ಚ) [6] ತೆತ್ತಿಹ (ಚ ಬ) [7] ಬಂದನು ವೀರನರಯಣ ನೃಪತಿಯರಮನೆಗೆ (ಮ) [8] ಪರಶು (ಖ ಮ), ಪುರುಷ (ತ) [9] ನೆನದರೆ ಪರಮಪದವೀವ (ಗ ರ ಣ ಪ ಯ) [10] ಯರಮನೆಗೆ (ಕ ಖ ಪ ಬ ಮ)

* (ಕ ಮ) ಪ್ರತಿಗಳಲ್ಲಿ ೫೫ನೆಯ ಪದ್ಯವಿಲ್ಲ (ಖ ಗ ಟ ಡ ಣ ದ ನ ಪ, ಬ) ಪ್ರತಿಗಳಲ್ಲಿ ೫೫ನೆಯ ಪದ್ಯವಾದ ಮೇಲೆ ೫೭, ೫೮, ೫೬ ಈ ಕ್ರಮದಲ್ಲಿ ಪದ್ಯಗಳಿವೆ.

*ಕ್ಷೀರವಾರಿಧಿಶಯನ ಬಂದನು
ವಾರಿಜೋ[1]ದರ ಕೃಷ್ಣ[1] ಬಂದನು
ಧಾರಿಣಿಯ ಹೊಱೆಗಳೆಯಲೋಸುಗ ಮನುಜವೇಷದಲಿ।
ಭೂರಿದೈತ್ಯರನೊರಸಿ ಕೌರವ
ವಾರಿಧಿಯ ಮುಕ್ಕುಳಿಸ[2]ಲೆಂದೇ[2]
ಘೋರನೈತರುತಿರ್ದನಂಧನೃಪಾಲ[3]ನೋಲಗಕೆ[3] ॥೫೯॥

ಬರಲು ಮುರ[4]ಹರ[4]ಗಿದಿರುವಂ[5]ದುದು[5]
ಸುರನದೀಜದ್ರೋಣಗೌತಮ
ಗುರುಸುತಾದಿ ಸಮಸ್ತಭೂಪಚಮೂಪಸಂದೋಹ।
ಚರಣದಲಿ ಚಾಚಿದ[6]ರು[6] ಭೂಮೀ
ಶ್ವರರು ಮಕುಟವನಂತತಾರಾ
ಪರಿವೃತೇಂದುವಿನಂತೆ ಮೆಱೆ[7]ದುದು[7] ಹರಿಯ [8]ಪದನಖವು[8] ॥೬೦॥

ಅರಿದಲೈ ಮುರವೈರಿ ಸನಕಾ
ದ್ಯರ ಸಮಾಧಿಗೆ ಸುಳಿಯದಂಘ್ರಿಯ
ದರುಶನದ ಫಲಭೋಗ ಸಾರಿ[9]ತು ನಮ್ಮ ಪುಣ್ಯವಲೆ[9]।
ಸುರನರೋರಗರೊಳು ಕೃತಾರ್ಥರು
ನಿರುತ [10]ನಾ[10]ವಲ್ಲದಡೆ [11]ನಿಮ್ಮಯ[11]
ಸರಸಿಜಾಂಘ್ರಿಯ ಸೇವೆ ದೊರಕುವುದಾವಮುನಿಗಳಿಗೆ ॥೬೧॥

ಎಂದು ಗಂಗಾನಂದನನು ನಲ
ವಿಂದ ಕೈಗೊಡೆ ಸುರಗಿರಿಯ ತುದಿ
ಯಿಂದ [12]ಮುರಿ[12]ಮಿಂಚುಗ[13]ಳ[13] ಮುಗಿಲಿಳಿವಂತೆ ಭೂತಳಕೆ।
ಅಂದು ನೀಲಾಚಲನಿಕಾಯದ
ಸುಂದರಾಂಗದ ಕೌಸ್ತುಭಪ್ರಭೆ
ಯಿಂದ ಕಾಂಚನರಥವನಿಳಿದನು ದಾನವಧ್ವಂಸಿ ॥೬೨॥

---

[1] ಧ್ವಜಜನಕ(ಗ), ಧ್ವಜಪಿತನು (ಯ) [2] ಲೋಸುಗ (ಖ ರ ರ). [3] ನರಮನೆಗೆ (ಖ ಚ ರ ನ ಶ ರ) [4] ರಿಪು (ಖ ಗ ಟ ರ ಣ ದ) [5] ದರು (ಕ ಖ ಗ ಬ ಮ) [6] ವು (ಚ ಡ ಣ ದ ನ ಬ). [7] ದವು (ಖ ಟ ಡ ಣ ಬ ರ) [8] ಚರಣದಲ (ಚ ಡ), ಪದಯುಗವು (ಪ) [9] ದುದಸ್ಮದಾದ್ಯರಿಗೆ (ಗ) ದುದಸ್ಮದಾದಿಗಳ (ಟ ಡ ಣ ದ ನ ಪ ಬ ರ) [10] ತಾ (ಗ ಚ ಪ ರ), ರಾ(ಡ ಣ.ಬ) [11] ಪುನರಪಿ (ಕ ಖ.ಬ ಮ) [12] ಮಱು (ಟ ರ ಡ ಣ ನ) [13] ಳು (ಝ ನ ಪ.ಮ).

* ೫೯ನೆಯ ಪದ್ಯವು (ಕ.ಬ.ಮ) ಪ್ರತಿಗಳಲ್ಲಿಲ್ಲ.

ಸಮರಸರ್ವಜ್ಞರುಗಳಂಘ್ರಿಗೆ
ನಮಿ[1]ಸಿದರು ಬಹಳೋ[1]ಲಗದ ಸಂ
ಭ್ರಮದ ಸಿರಿ ತಲೆವಾಗುತಿರ್ದುದು ನೊಸಲಕೈಗಳಲಿ ।
ಕಮಲ[2]ಗಣ್ಣನ[2] ದೇವನೇ ಸಾ
ಕೆಮಗೆ ಮಾಡುವುದೇನೆನುತ [3]ಕಡು
ಕು[3]ಮತಿ ಕೌರವನಿಳಿಯದಿರ್ದನು ಸಿಂಹ[4]ವಿಷ್ಟರವ[4] ॥೭೩॥

ಸೆಣಸು ಸೇರದ ದೇವನಿದಿರಲಿ
ಮಣಿಯದಾತನ ಕಾಣುತವೆ ಧಾ
ರಿಣಿಯ[5]ನೊತ್ತಿ[5]ದನುಂಗುಟದ ತುದಿಯಿಂದ ನಸುನಗುತ ।
ಮಣಿಖಚಿತ ಕಾಂಚನದ ಪೀಠದ
ಗೊಣಸು ಮುಱಿದುದು [6]ನಭದಿ[6] ಸುರಸಂ
ದಣಿಗಳಾ ಎನೆ [7]ಕೆಡೆದು[7]ಬಿದ್ದನು ಹರಿಯ ಚರಣದಲಿ ॥೭೪॥

ಧರಣಿಪತಿ ಸಿಂಹಾಸನದ ಮೇ
ಲಿರದೆ ಬಹರೇ ನಾವು ಬಂದೇ
ಹರಸುವೆವು ತಪ್ಪಾ[8]ವುದೆನುತೆ[8]ತ್ತಿದನು ಮಸ್ತಕವ ।
ಸುರನದೀಸುತ ಕೈಗೊಡಲು ಕೇ
ಸರಿಯ ಪೀಠಕೆ ದೇವ ಬಂದನು
ಕುರುಕುಲಾಗ್ರಣಿಗಳ ಸುಸನ್ಮಾನವನು ಕೈಕೊಳುತ ॥೭೫॥

ಹರಿಯ ಹರಿವಿಷ್ಟರದ [9]ಬಲದಲಿ[9]
ಧರಣಿಪತಿ ಕುಳ್ಳಿರ್ದನಾತನ
ಹಿರಿಯಮಗನೆಡವಂಕದಲಿ ಕರ್ಣಾದಿಗಳು ಸಹಿತ ।
ಹರಿಯ ನೇಮವ ಕೊಂಡು ಸನ್ಮುನಿ
ವರರು ಕುಳ್ಳಿರ್ದರು ನದೀಸುತ
ತರಿಸಿದನು ಪಡಿಗವನು ಹೊಂಗಲಸದ ಸುವಾರಿಗಳ ॥೭೬।

---

[1] ಸಿದರು ಬರಲೋ (ಗ ಟ ಡ ದ ನ ಪ), ಸುತ್ತೈತರಲೋ (ರ) [2] ಲೋಚನ (ಝ ಟ ದ) [3] ತತ್ಕು (ಖ ಗ ಟ ರ ಣ ಬ) [4] ಪೀಠವನು (ಬ) [5] ನೌಕಿ (ಗ) [6] ನಗುತ (ಖ), ಕವಿದು (ಚ), ನೆಲಕೆ (ರ), ಮೇಲೆ (ಣ) [7] ಕವಿದು (ಖ ಗ ಝ ಟ ರ ದ ಪ ಬ), ಹೊರಳಿ (ಣ) [8] ಯಿತೆನುತೆ (ಕ ಮ), ವುದೆಂದೆ (ಣ ಬ) [9] ಬಳಿಯಲಿ (ಗ ರ), ಕೆಲದಲಿ (ಚ ಪ)

ಚರಣ[1]ಯುಗಳ[1]ವ ತೊಳೆದು ತೀರ್ಥವ
ಶಿರದೊ[2]ಳಾಂತು[2] ಮಹಾನುಭಾವ[3]ನ[3]
ದರುಶನ[4]ದಿ ಮಮಜನ್ಮ[4] ಸಫಲವೆನುತ್ತ ಕೈಮುಗಿದು ।
ಪರಶುರಾಮಾದಿಗಳ ಮಿಗೆ ಸ
ತ್ಕರಿಸಿ ಗಂಧಾಕ್ಷತೆಗಳಿಂದುಪ
ಚರಿಸಿ ಹೊಂಬಟ್ಟಲಲಿ ವೀಳೆಯವಿತ್ತನನಿಬರಿಗೆ ॥೬೭॥

ಕುಶಲವೇ ಕುರುರಾಯ [5]ಬಾರೈ[5]
ಮುಸುಡದುಗುಡವಿದೇ[6]ನು[6] ಬಾ [7]ಎಂ[7]
ದಸುರರಿಪು ಕೌರವನ ಕರೆದನು ತನ್ನ ಸಮ್ಮುಖಕೆ।
ಉಸಿರಲಮ್ಮೆನು ಭಾವತನ[8]ದೊಂ[8]
ದೆಸ[9]ವ[9] ಸಲುಗೆಗೆ ನೇಮವಾದರೆ
ಬಿಸಜಲೋಚನ ಬಿನ್ನಹವನವಧರಿಸಬೇಕೆಂದ ॥೬೮॥

ನೀವು ಬಿಜಯಂಗೈವಿರೆಂದು ಮ
ಹಾವಿಲಾಸದೊಳಳವಡಿಸಿ ನಾ
ನಾವಿಧದ ಷಡುರಸವ ತರುಣಿಯರಿಂದ ಸವೆಸಿದೆನು ।
ದೇವ [10]ನಮ್ಮ[10]ರಮನೆಗೆ ಬಾರದೆ
ನೀವು [11]ವಿದುರನ[11] ಮನೆಯಲುಂಡಿರಿ
ಗೋವಳಿಗತನ ನಿಮ್ಮ ಮೈಸಿರಿ ತಪ್ಪದಾಯ್ತೆಂದ ॥೬೯॥

ಈ ಕೃಪನನೀ ದ್ರೋಣನೀ ಗಂ
ಗಾಕುಮಾರನ ಮನೆಯ ಹೊಗದವಿ
ವೇಕಿ ತೊತ್ತಿನಮಗನ ಮನೆಯಲಿ ಹಸಿವ ನೂಕಿದಿರಿ ।
ಸಾಕಿದಾತನು ನಂದಗೋಪನು
ಕಾಕಬಳಸಲು ಸಲ್ಲದೇ ನಿಮ
ಗೇಕೆ ರಾಯರ ರೀವಿಯೆಂದನು [12]ಕೌರವರ[12]ರಾಯ ॥೭೦॥

---

[1] ಕಮಲ (ಕ ಙ ಮ) [2] ಳಿಟ್ಟು (ಕ ಖ ಮ) [3] ರ (ಚ ಪ ಬ) [4] ದಿ ತಾ ಜನ್ಮ (ಕ ಮ), ದಿ ಮಜ್ಜನ್ಮ (ಖ ರ), ದಲೀ ಜನ್ಮ (ಗ ಝ ಡ ಙ ಪ ರ) [5] ನಿನಿಗೀ (ತ) [6] ಕೆ (ಢ ರ ನ ಬ) [7] ರೆಂ (ಖ ರ) [8] ದಿಂ (ಚ ಪ) [9] ಕ (ಖ), ಗೆ (ಗಾ ಬ). [10] ರೆನ್ನ (ಟ ರ ಡ.ದ ನ.ಪ ರ) [11] ತಿರುಕನ (ಕ ಮ) [12] ನಗುತ ಕುರು (ಚ.ಟ ರ.ಡ ಙ.ನ ಪ)

*ಕುರುಪತಿಯ ಬಿಱುನುಡಿಯ ಕೇ[1]ಳಿದು[1]
ಕರಣದಲಿ [2]ಕೋಪಾ[2]ಗ್ನಿಯುಕ್ಕಲು
ಕೆರಳಿ ನಿರ್ಭೀತಿಯಲಿ ನುಡಿದನು ವಿದುರ[3]ನರಸಂಗೆ[3] ।
ದುರುಳ ನೀ ನಿಂದಿಸಿದ ನುಡಿಗು
ತ್ತರವನೀಯಲದೇಕೆ ನಿಮ್ಮಯ
ವರಜನನಿಗಾದಿಯಲಿ ಗಂಡನದಾರು ಹೇಳೆಂದ ॥೭೧॥

[4]ತಾನಲೇ[4] ತೊತ್ತಿನ ಮಗನು ಕೇಳ್
ನೀನಲೇ ಅಜಪುತ್ರ ನಮ್ಮನು
ದಾನವಾಂತಕ ಬಲ್ಲನಿಬ್ಬರ ಹೆಚ್ಚುಕುಂದುಗಳ ।
ನೀನು ನಿನ್ನಯ [5]ಕೊಂಕುಕೊಱತೆಯ[5]
[6]ಹಾನಿವೃದ್ಧಿಯನಱಿಯದನಿಬರ[6]
ನೇನುಕಾರಣ [7]ಜಱೆ[7]ವೆ ಕುರುಪತಿಯೆಂದನಾ ವಿದುರ ॥೭೨॥†

ಕಡುಮುಳಿದು ಕಲಿಭೀಮ [8]ನಿನ್ನಯ
ತೊಡೆಗಳನು ಮುಱಿವಾ ಸಮಯದಲಿ[8]
[9]ಬಿಡದೆ[9] ನಿನ್ನನು ಕಾಯಬೇಕೆಂದುಳುಹಿದೆನು ಧನುವ ।
ಕೆಡೆನುಡಿಸಿಕೊಂಡಿನ್ನು ಕಾ[10]ವೆನೆ[10]
[11]ಪೊಡವಿಪತಿ ಕೇಳೆನುತ[11] ವಿದುರನು
ಹಿಡಿದ [12]ಬಿಲ್ಲನು[12] ಮುಱಿದನಾ ಕುರುಸೇನೆ ಕಳವಳಿಸೆ ॥೭೩॥

---

[1] ಳುತ (ಕ ಮ) [2] ರೋಷಾ (ಟ ರ) [3] ನರಸನನು (ಗಾ), ಕೌರವನ (ರ ಯ) [4] ನಾನೆಲ್ಲೈ (ಗ ಝ ಡ ನ ಪ), ನಾನಲಾ (ಚ ಣ) [5] ಕುಂದುಕೊಱತೆಯ (ಕ), ಹೆಚ್ಚು ಕುಂದಿನ (ಣ ಮ) [6] ನೇನುವನುಯಾಕ್ಷಿಸದೆಯುತರರ (ಗ) [7] ನುಡಿ (ಗಾ) [8] ನಿನ್ನಯ ತೊಡಯ ಮುಱಿವಾ ಸಮಯದಲಿ ದೃಢ (ಗ), ಸೇನನು ಕೆಡಹಿ ತೊಡೆಗಳನುಡಿವ ಸಮಯದಿ (ಟ ದ) [9] ಹಿಡಿದು (ಗಾ) [10] ಯೆನು (ಚ ಡ ಣ ಪ) [11] ನುಡಿದು ಫಲವೇನೆನುತ (ಯ ರ) [12] ಚಾಪವ (ಚ ಜ ಟ ಡ ಣ ರ)

*(ಖ ಬ) ಪ್ರತಿಗಳಲ್ಲಿ ೭೧, ೭೨, ೭೩, ೭೪ನೆಯ ಪದ್ಯಗಳಿಲ್ಲ (ರ) ಪ್ರತಿಯಲ್ಲಿ ೭೨ನೆಯ ಪದ್ಯವಿಲ್ಲ

† (ತ) ಪ್ರತಿಯಲ್ಲಿ ೭೨ನೆಯ ಪದ್ಯವು ಈ ರೀತಿ ಇದೆ,—

ತಾನು ತೊತ್ತಿನಮಗನರಾ ದಿಟ
ನೀನೆಲ್ಲೈ ನಿಜಪುತ್ರನಕಟಾ
ದಾನವಾಂತಕನಱಿಯನೇ ಶಿವಶಿವಮಹಾದೇವ ।
ತಾನೆ ತನ್ನನು ಹೊಗಳಿಕೊಂಬವ
ಮಾನನಿಧಿಯಾದನು ಕಣಾ ಫಡ
ಹೀನನೈ ಕುರುರಾಯ ಹೋಗೆನುತೆಂದನಾ ವಿದುರ ॥

ಧನು ಮುಱಿಯೆ ಗಾಂಧಾರಿಗತಲೋ
ಚನರು ಮಮ್ಮಲಮಱುಗಿದ[1]ರು ಭೂ
ಪನ ದುಗುಡ ಮಿಗಿಲಾಯ್ತು[1] ಭೀಷ್ಮದ್ರೋಣರಳಲಿದರು ।
ಮನದ ಹರುಷ[2]ದೊಳಂದು[2] ಮಧುಸೂ
ದನನು [3]ವಿದುರನ ತಿಳುಹಿ ಕೇಳಿಲೆ
ಜನಪ ಕೌರವರಾಯ[3] ನಮ್ಮಯ ಶೀಲ ಬೇಱೆಂದ ॥೨೪॥

ಪ್ರಿಯದಲುಂಬುದು ಮೇಣು [4]ವಿಪದಾ[4]
ಶ್ರಯದಲುಂಬುದು ಮಾನವರಿಗಿದು
ನಿಯತ[5]ವಂತಲ್ಲದುವೆ ಕೇಳ್ಳೈ[5] ಕೌರವರರಾಯ ।
ಪ್ರಿಯನು ನೀನೆಮಗಲ್ಲ ವಿಪದಾ
ಶ್ರಯವು ತಾ ಮುನ್ನಿಲ್ಲ ನಿನ್ನಾ
ಲಯದೊಳೆಂತೆಮಗೂಟ ಸಂಭವಿಸುವುದು ಹೇಳೆಂದ ॥೨೫॥§

ಹಗೆಯ[6]ನುಣಿಸುವುದಾಗದ್ವೈ ವೈ
ರಿಗಳ ನಿಳಯದೊಳನ್ನ[6]ಪಾನಾ
ದಿಗಳ ಕೊಳಲಾಗದು ನಿದಾನಿಸೆ ರಾಜನೀತಿಯಿದು ।
ಬಗೆಯೆ ನೀ ಪಾಂಡವರಿಗಹಿತನು
ವಿಗಡಪಾಂಡವರೆನ್ನ ಜೀವನ
ಹಗೆಯ ನಂಬು[7]ವೆನೆಂತು[7] ಹೇಳ್ಳೈ ಕೌರವರರಾಯ ॥೨೬॥

ಸೇರುವನು ಸಕಳಂಕಚಂದ್ರನು
ವಾರಿಧಿಗೆ ನೀನಖಿಳಗೋಪೀ
ಜಾರಜಾರೆಯ ಮಕ್ಕಳಿಗೆ [8]ನೀ ಜೀವ[8] ತಪ್ಪೇನು ।
ಆರು ತಮ್ಮಂದದ ಮಹಾತ್ಮರ
ಸೇರುವರಲ್ಲೈ ಪಾಂಡುಪುತ್ರರ
ಕೂರುಮೆಗೆ [9]ನಾನಂಜೆ[9] ನೀ ಬಂದನುವ ಹೇಳೆಂದ ॥೨೭॥

---

[1] ರು ನೃಪಮನದ ಖತಿ ಪಿರಿದಾಯ್ತು(ತ್), ರಾಗಲರಸನ ನೆನಹಿಗ್ಯೆವಡಿಯಾಗಿ (ಯ ರ) [2] ದಿ ನಗುತ (ಯ ರ) [3] ನುಡಿದನು ಮರುಳುಕೌರವಜನಪ ಕೇಳ್ಳೈ ಮಾತ್ತೆ (ಯ ರ) [4] ವಿಬುಧಾ (ಝ ತ ಪ ಯ) [5] ವಿಂತಲ್ಲದಿರೆ ಹೇಳ್ಳೈ (ಕ ಮ) [6] ನೊಳಗಿಡಲಾಗದ್ವೈ ವೈರಿಗಳ ನಿಳಯದೊಳನ್ನ (ಚ ಝ ರ ತ), ನೊಳಗಿಡಲಾಗದಹಿತಾಳಿಗಳ ಮನೆಯೊಳಗನ್ನ (ಮ) [7] ವುದೆಂತು (ಗ ಮ) [8] ನೀ ಹಿತವ (ಕ ಮ), ದಿಟ ಜೀವ (ಗ) [9] ನಾನೆನ್ನೆ (ಖ ಟ ರ ದ), ತಾನೆನ್ನೆ (ರ)

§ (ಕ ಮ) ಪ್ರತಿಗಳಲ್ಲಿ ೨೫ನೆಯ ಪದ್ಯದಿಂದ ೨೭ನೆಯ ಪದ್ಯ ಪೂರ್ತಿ ಕ್ರಮವಾಗಿದ್ದು ಅನಂತರ ೨೧ರಿಂದ ೨೪ ವರೆಗಿನ ಪದ್ಯಗಳಿವೆ

*[1]ಕುಲದವನ[1] ಹೃದಯಾಂಧಕಾರವ
ಕಳಚಲೆಂದು ಹಿಮಾಂಶು ಹರಹಿದ
ನೆಳೆಯಬೆಳದಿಂಗಳನೆನಲು ಸುರರಿಪುಕುಲಾಂತಕನು।
ತೊಳಪ ದಶನಮಯೂಖತತಿ ಹೊಳೆ
ಹೊಳೆಯೆ ನುಡಿದನು ತತ್ಸಭಾಮುಂ
ಡಲಮಹಾಂಬುಧಿ ನುಡಿದೆರೆಯ ತನಿಗಡಣವಡಗಿರಲು ॥೭೮॥

ಎಂಟನೆಯ ಸಂಧಿ ಮುಗಿದುದು

---

[1] ಖಳಮನದ (ಖ), ಕುಲಮಲಿನ (ದ ಪ)
* (ಕ ಮ) ಪ್ರತಿಗಳಲ್ಲಿ ೭೮ನೆಯ ಪದ್ಯವಿಲ್ಲ

# ಒಂಬತ್ತನೆಯ ಸಂಧಿ

ಸೂಚನೆ ॥ ಬಿಡು ನೆಲನ ಕೇಡುಗರ ಮಾತಿಂ
ಗೊಡಬಡದಿರಂತಕನ ನಗರಿಗೆ
ನಡೆಯಬೇಡೆಂದಸುರರಿಪು ಕೌರವನ[1]ನುಜಿ[1] ಜಱೆದ ॥

ಅವಧಿ [2]ಸವೆ[2]ದುದು ಪಾಂಡವರು ನಿ
ನ್ನವರು ವನವಾಸ[3]ಪ್ರಯಾಸದ
ಲವರು ನವೆದರು ಕೂಡಿಕೊಂಡಿಹು[3]ದಧಿಕಗುಣ ನಿನಗೆ ।
ಅವನಿಯರ್ಧವನೀವುದೀಯು
ಧ್ರುವದ ಬಾಳಿಕೆಯೊಳಗೆ ಪುರುಷಾ
ರ್ಥವನು ಸಂಚಿಸೆ ಕಲಿಯುಬೇಹುದು ನೃಪತಿ ಕೇಳೆಂದ ॥೧॥

ಅರಸುತನ ತನಗಧಿಕವಾಗುತ
ಬರಬರಲು ಕಣ್ಣಾಲಿಗಳು [4]ತರ
ಹರಿಸಿ ಕಾಣವು[4] ವರ್ತಮಾನದ ನೃಪರ ಬಳಕೆಯಿದು ।
ಸಿರಿಯಮದವೆಂಬಧಿಕತಾಮಸ
ದೊರಕಿ[5]ದಕ್ಷಿಗೆ[5] ನೀತಿಕಾಱರ
[6]ಪರಮವಚನಾಂಜನದಿ[6] ಪ್ರಜ್ವಲಿಸುವುದು [7]ನಯವೆಂದ[7] ॥೨॥

ಕೋಶ ಬ[8]ಲ[8]ತಳತಂತ್ರ ಹೆಚ್ಚಿದ
ದೇಶ ದುರ್ಗವಮಾತ್ಯ ಮಿತ್ರವು
ಹೀಶಜನವೆಂಬಿದುವೆ ಕೇಳ್ ಸಪ್ತಾಂಗಸನ್ನಾಹ ।
[9]ಈ[9]ಸು[10]ಬಲುಹುಂಟಲ್ಲಿ[10] ಮಿತ್ರವ
ಹೀಶರೆಂಬುದು ಕೊಱತೆ ಪಾಂಡವ
ರಾ ಸಹಾಯವು ಬರಲು [11]ಬಳಿಕಿದಿರಿಲ್ಲ ನಿನಗೆಂದ[11] ॥೩॥

---

[1] ಮಿಗೆ (ಕ ಮ) [2] ಸಂ (ಗ ಡ ಣ ಪ) [3] ಪ್ರವಾಸದಿ ನವೆದರವ*ರನು* ಕೂಡಿ ಬದುಕುವು (ಗ ಟ ಡ ದ ನ ಪ), [* ದಿರ(ಣ)] [4] ತರಹರಿಸಲಱಿಯವು (ಕ ಮ), ಗೋಚರಿಸಿ ಕಾಣವು (ಗ ಟ ಡ ದ ಪ) [5] ತಾಗವೆ (ಕ ಮ) [6] ನಿರುಪಮಿತ ವಚನದಲಿ (ಕ ಮ), ನಿರುಪಮಾಂಜನದಿಂದ (ಚ ಝ ರ ತ) [7] ಕೇಳೆಂದ (ಕ ಮ), ಮತವೆಂದ (ಚ ಬ) [8] ಲು (ಕ ಚ ಟ ಪ ಯ ರ) [9] ಏ (ಕ ಮ) [10] ನಿನಗುಂಟೀಗ (ಝ), ನಿನಗುಂಟಿಲ್ಲಿ (ಟ ದ) [11] ನಿನಗಿದಿರಿಲ್ಲ ಕೇಳೆಂದ (ಖ ರ್‌.ಣ ರ)

ಹೇಳಿದೀ ಸಪ್ತಾಂಗದೊಳಗೊಂ
ದೇಳಿ ದಿಟವಾಗಿರ್ದ ನೃಪತಿಯು
ಬಾಳಿಕೆಗೆ ಸಂದೇಹವಱಿಯಾ ರಾಜನೀತಿಗಳ ।
ಹೇಳಲಮ್ಮುವರಿಲ್ಲ [1]ಹಿತವರು[1]
ಹೇಳಿದರೆ ಕೈಕೊಳ್ಳೆ ಕುರುಕುಲ
ಮೌಳಿ ನಯ[2]ದಲಿ ನಡೆಯಕಟಯೆಂದಸುರರಿಪು ನುಡಿದ[2] ॥೪॥

ಸಾಮವೆಂಬುದು ರಾಜನೀತಿಗೆ
ತಾ ಮನೋಹರರೂಪು ಬದುಕುವ
ಭೂಮಿಪಾಲರ ವಿನುತವಿಭವಕೆ [3]ಮೂಲಬೀಜ[3]ವಿದು ।
ಸಾಮತಪ್ಪಿದ ಬಳಿಕ ನೀತಿವಿ
ರಾಮವಾಗದೆ ಬಿಡದು ದಂಡದ
ಸೀಮೆಯೆಂಬುದುಪಾಯದಲಿ ಸಾಮಾನ್ಯತರವೆಂದ ॥೫॥

ಮಾಡಿದಪ[4]ಕಾರಂ[4]ಗಳನು ಮಱೆ
ದಾಡ[5]ರ[5]ವರತಿಮೋಹದಲಿ ನೀ
ಗೂಡಿ ಬದುಕುವ [6]ನುಡಿಯ ನುಡಿ[6]ವರು ನಮ್ಮ ಮನ[7]ವಱಿಯೆ[7] ।
ಕಾಡಿನೊಳಗಾಡಿದರು ದುಃಖವ
ತೋಡಿದರು ನೀನವರಿಗುಚಿತವ
ಮಾಡಿ ನಾಡನು ಕೊಡುವುದೆಂದನು ದಾನವಧ್ವಂಸಿ ॥೬॥

ವಿದುರನುತ್ಸವ ಕೃಪನ ಸ[8]ನ್ಮುದ[8]
ನದಿಯಮಗನೊಲವಂಧನೃಪನ
ಹೃದಯ [9]ಕೇಳೆಂದಸುರರಿಪು ನಯನುಡಿಯ[9] ಗಡಣಿಸಲು ।
[10]ಮದದ ಮೈಗಾ*ಡಿ*ಕೆಯ ಮನಲೇ
ಪದ ಮಹಾಖಳ[10]ನಡ್ಡಮೊಗವಿ[11]ಡೆ
ಬೆದಱಿಯಿದ್ದಂತಿರ್ದುದಾಯಾಸ್ಥಾನಜನವೆಲ್ಲ[11] ॥೭॥

---

1 ಹಿರಿಯರು (ಝ ರ) 2 ದಲ ನಡೆಯ ಕಲ ನೀನೆಂದನಸುರಾರಿ(ಗ), ದಲ ನಡೆಯನಕಟಕಟೆಂದನಸುರಾರಿ (ಟ ದ), ನಡೆಗಳನು ಕಲಯೆಂದಸುರರಿಪು ನುಡಿದ (ರ) 3 ಬೀಜಮಂತ್ರ (ಖ ಗ ಡ ಣ ನ ಪ) ಬೀಜಭೂತ (ಚ ಬ), ಮೂಲಮಂತ್ರ (ಟ ರ ದ) 4 ರಾಧಂ (ಣ ತ) 5 ದ (ಕ ಪ ಬ ಮ) 6 ಹದನ ನೆನೆ (ಚ ಟ, ದ) 7 ಮೆಚ್ಚೆ (ಖ ಗ ಟ ಡ ಣ ದ ಪ ರ) 8 ಮ್ಮತ (ಖ ತ ಮ) 9 ವಾ ಮುರವೈರಿ ನಯನೀತಿಗಳ (ಗ ಡ ದ ನ ಪ) 10 ಮದವಾಂಖನು ಮತಿಗೇಡಿ ಕೃಷ್ಣನ ಸದವು ಳೋಕ್ತಿಯ (ಚ) * ಣಿ (ಖ ಗ ದ ನ ಪ ರ) 11 ಡಲದಟನಿರ್ದಂತಿರ್ದುದಾಯಾಸ್ಥಾನಜನವೆಲ್ಲ (ಗ ಡ ನ ಪ), ಡಲುದಧಿಯೊಳಗದ್ದಂತೆ ಮೌನದೊಳಿರ್ದುದಾಸ್ಥಾನ (ಚ), ಡೆ ಬೆದಱಿ ಭಯಗೊಂಡಿರ್ದುದಾಯಾಸ್ಥಾನ ಮೋನದಲಿ (ಟ, ಯ ರ), ಡೆ ಬೆದಱಿ ಭಯಗೊಂಡಿರ್ದುದಾಯಾಸ್ಥಾನಜನವೆಲ್ಲ (ಣ)

ಕಳಕಳಿಕೆ ತಗ್ಗಿದ ಸಭಾ[1]ವನ
ದೊಳಗೆ[1] ಸಿಂಹಧ್ವನಿಯುಲವನಿಪ
ಕುಲಕುಠಾರನು ಪರಶುರಾಮನು ನುಡಿದನರಸಂಗೆ ।
ಎಲೆ ಸುಯೋಧನ ಕೃಷ್ಣರಾಯನ
ನಳಲ[2]ಸದಿರ್ಕೈ ಲೋಭವತಿವೆ
ಗ್ಗಳದ ನಿರ್ಬಂಧವು ನಯಜ್ಞರಿ[2]ಗುಚಿತವಲ್ಲೆಂದ ॥೮॥

ದಿವಿಜರಿದಿರಿಲ್ಲೆಂದು ದಂಭೋ
ದ್ಭವನು ನರನಾರಾಯಣಾಖ್ಯರ
ನವಗಡಿಸಿ ಮುಱಿವಡೆದು ಕೆಟ್ಟನು ಗಾಢಗರ್ವದಲಿ ।
ಅವರೊಳರ್ಜುನ ನರನು ಯದುಸಂ
ಭವನು ನಾರಾಯಣನು ಬಿಡು [3]ಪಾಂ
ಡವರ[3] ವೈರವನೆಂದು ಭಾರ್ಗವ ನುಡಿದನರಸಂಗೆ ॥೯॥

[4]ತಪ್ಪಿ[4] ನುಡಿಯನು ಪರಶುರಾಮನು
ದರ್ಪವಿದು ಲೇಸಲ್ಲ [5]ನೃಪ ನೀ
ನೊ[5]ಪ್ಪಿಸುವುದರ್ಧಾವನೀತಳವನು ಸರಾಗದಲಿ ।
ತಪ್ಪಿ [6]ನುಡಿ[6]ದರೆ ಗರುಡದೇವನ
ದರ್ಪವನು ಹರಿ ಸೆಳೆದು ಬಿಸು[7]ಟನು[7]
ನೊಪ್ಪಿ ತಾಗದಿರೆಂ[8]ದು ನುಡಿದನು[8] ಕಣ್ವ[9]ನರಸಂಗೆ[9] ॥೧೦॥

ಅಹುದು ಕಣ್ವನ ಮಾತು ಕೃಷ್ಣನ
ಮಹಿಮೆ ಘನವಿದನಱಿದು ಗರ್ವ
ಗ್ರಹವಿಡಿದು ಮರುಳಾಗದಿರು ಮುನ್ನೊಬ್ಬ ಗಾಲವನು ।
ಬಹಳ ಗುರುದಕ್ಷಿಣೆಗೆ ತೊಳಲಿದು
ಮಹಿಯೊಳೆಲ್ಲಿಯು [10]ಗಳಿಸದಿ[10]ರಲವ
ನಹವ ಮುಱಿದನು ಬಳಿಕ ವಿಶ್ವಾಮಿತ್ರಮುನಿಯಿಂದು ॥೧೧॥

---

[1] ಮಂಡಲದಿ (ಕ), ಸ್ಥಳದೊಳಗೆ (ಚ ಪ) [2] ಪರೆ ನುಡಿದಂತೆ ಸಾಮದ ಲೊಲಿದು ಘಟಿಸುವುದಲ್ಲದಡೆ ನಿನ (ಕ ಖ ಮ) [3] ನೀನವರ (ಣ ತ) [4] ತಪ್ಪ (ಚ ತ ಮ) [5] ಕೃಷ್ಣಂಗೊ (ಕ ಖ ಚ ಣ ಬ ಮ) [6] ನಡೆ (ಝ ಟ) [7] ಡನೆ (ಗ ಟ ಡ ದ ನ ಪ) [8] ದನಾಗಳು (ಕ,ಮ) [9] ಮುನಿ ನಗುತ (ಖ ಝ ರ ಣ ಬ) [10] ಗಳಿಸುತಿ (ಗ ಚ ಟ ದ), ಘಟಿಸದಿ (ರ)

ನಿಮ್ಮ ಪೂರ್ವಯಯಾತಿ ನಾಕದೊ
ಳಿಮ್ಮ[1]ವೊಲದಾ[1]ರುಂಟು ಜಗದಲಿ
ಧರ್ಮಪರರೆನೆ ಸುರರು ಹ[2]ಗಱಿ[2]ಕ್ಕಿದರು ಹೆಡತಲೆಗ ।
ಧರ್ಮಪಥ ಹುಲುವಟ್ಟೆಯೆನಿ[3]ಸುವ[3]
ಹಮ್ಮಿನಲಿ ಕೆಡಬೇಡ ನೀತಿಯು
ನೆಮ್ಮಿದ[4]ವ[4] ಕೆಡನೆಂದು ನಾರದ ನುಡಿದನರಸಂಗೆ ॥೧೨॥

ಅವನಿಪತಿ [5]ಕೇಳಾವು[5] ಪಾಂಡವ
ರವರು ವನದಲಿ ಕಂದಮೂಲವ
ನಿವರು ಕೊಂಬರು ಋಷಿಗಳಿಗೆ ಹಂಗೇಕೆ ಭೂಮಿಪರ ।
ಇವ[6]ರದಾವನ[6] ಪಕ್ಷಪಾತ
ವ್ಯವಹರಣೆಯವರಲ್ಲ ಕೇಳಿಂ
ದಿವರನುಡಿಗಳನೆಂದು ನುಡಿದನು ಮತ್ತೆ ಮುರವೈರಿ ॥೧೩॥

ಬೆರಳ ಮೀಸೆಯಲಿಡುತ ಕಿಱುನಗೆ
ವೆರಸಿ ಕರ್ಣಾದಿಗಳ ವದನವ
ತಿರುಗಿನೋಡುತ ಹರಿಯ [7]ನುಡಿಗಳ[7] ಕಿವುಡುಗೇಳುತ್ತ ।
ಪುರುಳುತನದಾಳಾಪವೇತಕೆ
ಮುರಮಥನ ಪಾಂಡವರ ಕಥನವ
ನೊರೆಯದಿರು [8]ಕರ್ಣಕ್ಕೆ ಬಾಧೆಯಿದೆಂದನಾ ಭೂಪ[8] ॥೧೪॥

ಮಾವ ಮೊದಲು ಸಹಾಯ ಮಧ್ಯದೊ
ಳಾ ವಿರಾಟನ ಸಖ್ಯ ಕಡೆಯಲಿ
ನೀವು ಮಮ[9]ಜೀವಾ[9]ಹಿ ಎಂಬಿರಿ ನಿಮ್ಮ ಪಾಂಡವರ ।
ನಾವು ಕಡೆಯಲಿ ಹೊಱಗು ನಮಗಿ
ನ್ನಾವ ಭೂಪರ ಸಖ್ಯವಿದ್ದುದು
ದೇವ ನಾಚಿಸಬೇಡ ಸಂಧಿಯ ಮಾತ ಮಱೆಯೆಂದ ॥೧೫॥

---

[1] ವೋಲಾ (ಗ ಟ ಡ ಚ. ನ ಪ. ಬ) [2] ರಿದಿ (ಖ), ದರಿ (ರ ದ) [3] ಸಿದ (ಟ ಡ ದ ನ ಪ ಬ) [4] ನು (ಕ ಬ ಮ) [5] ಕೇಳುವುದು (ಖ), ಕೇಳ' ನಾವು (ಗ ಟ ಡ ದ ಪ) [6] ರು ಮಾನವ (ಟ ಯ. ರ) [7] ಮಾತನು (ಕ ಮ), ವಚನವ (ಝ ರ ದ ಬ) [8] ಕರಣಕ್ಕೆ ಖಾತಿಯನೆಂದು ನೃಪ ನುಡಿದ (ಕ ಮ), ಕರಣಕ್ಕೆ ಖಾತಿಯುದೆಂದೆನಾ ಭೂಪ (ಖ ಚ ಝ ಬ) [9] ಪ್ರಾಣಾ (ಗಾ ಚ ಬ)

ಅವರು ನಮ್ಮೊಳು ಸರಸವಾಡುವ
ಹವಣದಲ್ಲದೆ ರಾಜಕಾರ್ಯವ
[1]ನಿ[1]ವಗೆ ಯೋಚಿಸಿ ಕಳುಹಿದಂದ[2]ವೆ ಮೆಚ್ಚಿ ನಾನಿದನು[2] ।
ಬವರ ಬೇಕೇ ಬೇಡಿ[3]ಕೊಂಬುದು
ಅವನಿಗಿ[3]ವನಿಯು ಮಾತ [4]ನೀವಾ
ಡುವರೆ ಪಾಂಡವರೇಕೆ *ನಾವೇಕೆಂದು ಖಳ* ನುಡಿದ[4] ॥೧೬॥

ಮಾಡು ಸಂಧಿಯು [5]ನ[5]ಮ್ಮ ವಚನ[6]ಕೆ[6]
ಕೋಡದಿರು ಸವಿವಾತುಗಳ [7]ನಿನ
ಗಾ[7]ಡುವವರಿಗೆ ಚಿತ್ತಗೊಡದಿರು ಹಿಸುಣ ಹೊಗಿಸದಿರು ।
ನಾಡ ನಾಲಗೆಗೆಳಯರೆಂ[8]ದು[8]ದ
ಮಾಡದಿರು ಪಾಂಡವನೃಪಾಲರ
ಕೂ[9]ಡೆ ದಾಳಿಕೆ ಪಥ್ಯ ಕೇಳೆಂ[9]ದಸುರರಿಪು ನುಡಿದ ॥೧೭॥

ಅವರಿಗಿಂದ್ರಪ್ರಸ್ಥದಲಿ ರಾ
ಜ್ಯವನು ಕುಳಸಹಿತಿತ್ತು ನೀ ಪಾಂ
ಡವಪ್ರತಿಷ್ಠಾಚಾರ್ಯನೆಂಬೀ ಬಿರುದ [10]ಧರಿ[10]ಸಿದಡೆ ।
ಅವನಿಯಲಿ ನಿನ್ನೊಡನೆ ತಲೆದೋ
ಱುವ ನೃಪಾಲಕರಿಲ್ಲ ನುಡಿಗಳು
ಕಿವಿಗೆ ಕರ್ಕಶವೀಗಳಾದರ [11]ತುದಿಗೆ[11] ಲೇಸೆಂದ ॥೧೮॥

ನೀತಿಗಾಲಯು ನಿಮ್ಮ [12]ಸಿರಿ[12]ವಿ
ಖ್ಯಾತಿಗಿದು ನೆಲೆ ಸಕಲಸೌಖ್ಯ
ವ್ರಾತಕಿದು ಸದ್ಬೀಜವೆನಿಸಿತು ಕೌರವಾನ್ವಯವು ।
ಭೂತಳದ ಲೋಲುಪತೆಯಲಿ ಕುಲ
ಘಾತಕರು ತಾವೆಂಬಕೀರ್ತಿಗೆ
ಯೋತು ನೀ ನೆಲೆಯಾಗದಿರು ಕೇಳೆಂದನಸುರಾರಿ ॥೧೯॥ †

---

[1] ನೆ (ಖ ಝ) [2] ವನಜಖಯೆನೇ ತಾನು (ಟ ರ) [3] ಕೊಳಲನ್ನವರಿಗ (ರ). [4] ನಾಡುವರೆವಗೆ ತಾವೇಕೆಂದು ಘರ್ಜಿಸಿ ನುಡಿದು ಖಳ ಜಡಿದ (ಕ ಮ) *ರಣವೇಕೆಂದು ಖಳ (ಖ ಬ), ನೀವೇಕೆಂದು ನೃಪ (ತ ದ) [5] ನೆ (ಖ ಚ ದ ನ ರ) [6] ವ (ಗ ಬ) [7] ನೀನಾ (ಕ ಖ ರ ಮ) [8] ಬು (ಕ.ರ ಮ) [9] ಡಿ ಬಾಳ್ವುದು ಪಂಥ ನಿನಗೆಂ (ಗ ಟ ರ ದ ನ ಪ ರ) [10] ಸಲ (ಗ ಟ ಡ ತ. ನ ಪ) [11] ಮುಂದೆ (ಗಾ ತ). [12] ಕುಲ (ಖ ಚ ರ)

† (ಕ ತ ಬ ಮ) ಪ್ರತಿಗಳಲ್ಲಿ ೧೯ನೆಯ ಪದ್ಯವಿಲ್ಲ.

*ಧರೆಯ ನೃಪರಿಗೆ ಹಸ್ತಿನಾಪುರ
ದರಮನೆಯ ಬಾಗಿಲಲಿ ಸಮಯವು
ದೊರಕಲಂತದು ಪುಣ್ಯವೆಂಬೀ ಸಾರ್ವಭೌಮತೆಯ ।
[1]ಸಿರಿ[1]ಗೆ ಪಾಂಡವರನ್ಯರಾದರೆ
ಮೆಱೆಯ[2]ಬಲ್ಲುದೆ[2] ನಿನ್ನ ಸಿರಿ ಕಾ
ತರಿಗತನವನು ಮಾ[3]ಣು ಕೇಳೆಂದಸುರರಿಪು ನುಡಿದ[3] ॥೨೦॥

ಯಮಜ ನಿನಗೊಳ್ಳಿದನು ಪಾರ್ಥನ
ಮಮತೆ ನಿನ್ನಲಿ ಹಿರಿದು ಭೀಮನ
ತಮದ ನುಡಿ ಹಿಂಗಿದುದು ನಕುಲನು ನಿನ್ನೊಳೆರಡಱಿಯ ।
ತಮತಮಗೆ ತಮ್ಮೈವರುಱೆ ನಿ
ನ್ನಮಲವಚನವ ಹಾರುತಿಹರು
ಭ್ರಮಿತನ[4]ವ ಮಾಡದಿರು ನೀ[4] ಸೋದರರ ಸಲಹೆಂದ ॥೨೧॥

*ಧರ್ಮಜನ ಕಡುಮೋಹವೆಂಬುದು
ನಿಮ್ಮ ಚರಣದೊಳಿರಲಿ ಭೀಮನ
ಬಿಮ್ಮು ತಮ್ಮೊಳಗಿರಲಿ ಫಲುಗುಣನೊಲುಮೆಯಂತಿರಲಿ ।
ಎಮ್ಮ [5]ಭೂಮಿಯೊಳರೆಯ[5] ಬೇಡುವ
ರೆಮ್ಮ ಬಂಧುಗಳಲ್ಲ ಸಂಧಿಗೆ
ತಮ್ಮನೊಡಬಡನೆಂದು ದುಶ್ಶಾಸನನ ನೋಡಿದನು ॥೨೨॥

ಬಂಧುಕೃತ್ಯದ ಮಾತು ಸೂರ್ಯಂ
ಗಂಧಕಾರವು ಸೇರುವುದೆ ನಿ
ರ್ಬಂಧದಲಿ ನೀವೇಕೆ ನುಡಿವಿರಿ ರಾಜಕಾರಿಯವ ।
ಸಂಧಿಯಾಗದು ಪಾಂಡವರ ಸಂ
ಬಂಧ ನಮಗೇ[6]ಕೆಂದು[6] ಕರುಣಾ
ಸಿಂಧುವಿನ ಮೊಗನೋಡಿ ದುಶ್ಶಾಸನನು ಗರ್ಜಿಸಿದ ॥೨೩॥

---

[1] ಧರೆ (ಚ) [2] ಲಱಿಯದು (ಚ, ಟ), ಲಱಿವುದೆ (ಡ ನ ಪ) [3] ಡದಿರು ಸೋದರರ ಸಲಹೆಂದ (ಚ) [4] ದ ನುಡಿ ಬೇಡವೆಲೆ (ಕ ಮ) [5] ಧರಣಿಯೊಳರೆಯ (ಖ), ಧರೆಯೊಳಗೆರವ (ಚ) [6] ಕೆನುತ (ಖ ಗಾ ರ ಬ)

* (ಕ ತ ಬ ಮ) ಪ್ರತಿಗಳಲ್ಲಿ ೨೦ನೆಯ ಪದ್ಯವೂ (ಕ ಬ ಮ) ಪ್ರತಿಗಳಲ್ಲಿ ೨೨ನೆಯ ಪದ್ಯವೂ ಇಲ್ಲ

ಈ ಹರಿಯ ನುಡಿಗೇ[1]ಳು[1] ದೈವದ
ಮೋಹ ತಪ್ಪಿದ ಬಳಿಕ ಸುಭಟರ
ಸಾಹಸ[2]ಕೆ[2] ಹುರುಳಿಲ್ಲ ನಂಬದಿ[3]ರೆಮ್ಮ ಬಲುಹುಗಳ[3] ।
[4]ಆ ಹಿತವನೀಡಾ[4]ಡದಿರು ವೈ
ದೇಹಿಯನು ಸೆಱೆ[5]ಗೆಯ್ದ[5] ಸ್ವಾಮಿ
ದ್ರೋಹಿಯನು ಹೋಲದಿರು ಕೌರವ ಎಂದನಾ ಭೀಷ್ಮ ॥೨೪॥

[6]ನೆಲನ[6] ಬೇಡುವ ಪಾಂಡವ[7]ರ[7] ಭುಜ
ಬಲದೊಳಗೆ ಕುಂದಿಲ್ಲ [8]ನೀತಿ[8]ಯು
ತಿಳುಹಲೈತಂದಸುರರಿಪು ಸಾಮಾನ್ಯ[9]ಬಲ[9]ನಲ್ಲ ।
ಇಳೆಯೊಳರ್ಧವನೊಪ್ಪುಗೊಡು ಯದು
ಕುಲಲಲಾಮನ ನೇಮವನು ನೀ
ಸಲಿಸು ಕೆಡಿಸದಿರೀ ವಿಲಾಸವನೆಂದನಾ ದ್ರೋಣ ॥೨೫॥

ಹಲವು ಹೊಲ್ಲೆಹಗಳನು ಪಾಂಡವ
ರೊಳಗೆ ನೆನೆದೆನು ಮುಚ್ಚುಮಱೆಯೇ
[10]ಕ್ರಿ[10]ಳೆಯ ಲೋಭದಲವರ ಕೆಡಿಸುವ [11]ಬಗೆಯ[11] ನೆಗಳಿದೆನು ।
ನೆಲನ ಕೊಂಡೆನು ಜೂಜುಗಾಱರ
ವಿಲಗದಲಿ ಪಾಂಡವರ್ಗೆ ಪುನರಪಿ
ಹಳುವವೇ ಶರಣಲ್ಲದುಂಟೇ ಕೃಷ್ಣ ಹೇಳೆಂದ ॥೨೬॥

ತಾಗುವಪಕೀರಿತಿಗೆ ಹೇಸುವ
ರಾಗಿ ಸತ್ಯ[12]ವನುಳುಹಿ ಹಳುವವ[12]
ಭೋಗಿಸಿದರರದು ಕುಲಕೆ [13]ಕುಂದೇ[13] ಪಾಂಡು[14]ತನಯರಿಗೆ[14] ।
ನೀಗಿದರು [15]ವನವಾಸವನು[15] ಸರಿ
ಭಾಗದವನಿಯ ಕೊಂಬ ಛಲವನು
ಹೋಗಬಿಡುವನೆ ಭೀಮನೆಂದನು [16]ನಗುತ[16] ಮುರವೈರಿ ॥೨೭॥

---

1 ಳಿ (ಕ ಖ ಚ ಟ ಮ) 2 ದಿ (ಗ) 3 ರೆಂದ ಮಾತುಗಳ (ಕ ಪ), ರಿವರ ಬಲುಹಿನಲಿ (ಚ) 4 ಆಯಿತದನಿನ್ನಾ (ಕ ಮ), ಬಾಹಿರವ ನೀನಾ (ಖ), ಐಹಿಕವ ನೀನಾ (ಗ ಟ ಡ ನ ಬ ಯ ರ) 5 ವ್ರೊಯ್ದ (ಖ ಗ ಝ ರ ಬ ರ), ವಿಡಿದ (ಚ) 6 ಇಳೆಯ (ದ ಪ) 7 ರು (ಕ, ಮ) 8 ಸಂಧಿ (ಣ ತ) 9 ತರ (ಖ ಟ ರ ಡ ನ ಪ ಬ ರ), ನರ (ತ) 10 ನಿ (ಗ ಚ ಡ ನ ಪ, ರ). 11 ಹದನ (ಗ ಚ ಝ ನ ಬ) 12 ವ ಕಾದು ಹಳುವವ (ಗ ಟ ಡ ತ ದ ನ ಪ), ದಿ ನಡದು ವನವನು (ಚ) 13 ಕಲೆಯೋ (ಖ ಡ), ಕಡೆಯೋ (ಪ) 14 ನಂದನರ (ಗ ಟ ಡ ದ ಪ) 15 ನುಡಿದವಧಿಯನು (ತ) 16 ಮತ್ತೆ (ಗಾ ರ)

ಕೊಡು ಕುಶಸ್ಥಳವನು ವೃಕಸ್ಥಳ
[1]ವೊಡವಿವಾಸಂತಿ[1]ಯನು ಕುಳವನು
ಕೊಡಿಸಿಕಳೆ ಸಿರಿಕರಣದವರಲಿ ವಾರಣಾವತವ ।
ಕೊಡು ನಿನಗೆ ಮನ[2]ಬಹುದನೊಂ[2]ದನು
ನಡಸಿಕೊಡುವೆನು ಪಾಂಡವ[3]ರನ[3]ವ
ಗಡೆಯುತನ [4]ನಿಂದಿರಲಿ[4] ನೃಪ ಕೇಳೆಂದನಸುರಾರಿ ॥೨೮॥

ಬೇಡಿ[5]ದೊಂದೊಂದೂರು[5] ನಮ್ಮಯ
ನಾಡ ತಲೆ[6]ಮಂಡೆ[6]ಗಳು ರಾಜ್ಯದ
ರೂಢಿಯೈದೂರುಗಳ ಬಳಿವಿಗೆ ಹಸ್ತಿನಾನಗರ ।
ಬೇಡಲಱು[7]ವನು ಮಾನ ನಿನಗುಂ[7]
ಟಾಡಲೇತಕೆ [8]ನೆಲನನೀರಡಿ[8]
ಮಾಡಿಕೊಂಡ ಮಹಾತ್ಮ ನಿನಗಾನಂಜಿದಪೆನೆಂದ ॥೨೯॥

ಕರೆದು ಮೂಱಡಿನೆಲನ ಧಾರೆಯ
ನೆರೆದ ಬಲಿ ತಳಕಿಳಿದ[9]ನೆ[9]ನ್ನೀ
ಧರೆಯಲೈದೂರುಗಳನಿತ್ತನಗಾವ [10]ಹದನ[10]ಹುದೊ ।
ಪರಮ[11]ಪುರುಷನು ನೀನು[11] ನಿನಗಾಂ
ಶರಣುವೊಕ್ಕೆನು ಬಂದ ಪಥದಲಿ
ಮರಳಿ ಬಿಜಯಂಗೈವುದೆಂದನು [12]ಕೌರವರ[12]ರಾಯ ॥೩೦॥

ಸಲಲಿ ನೀ ಪಾಂಡವರೊಳೆತ್ತಿದ
ಛಲದ ಬಳವಿಗೆಯಕಟ [13]ನಿನ್ನೀ[13]
ಬಳಗ ಬದುಕಲಿ ಮತ್ತೆ ನವೆಯಲಿ ಪಾಂಡುನಂದನರು ।
ಜಲಧಿಮೇರೆಯ ಮಹಿಯೊಳೊಂದೇ
ಸ್ಥಳವ[14]ನೈವರಿಗೀ[14]ವುದೆನೆ ಕಳ
ವಳಿಗನವಗಡಿಸಿದನು ಜಱೆದನು ಜಗ[15]ದ ಪಾಲಕನ[15] ॥೩೧॥

---

[1] ಪೊಡವಿಯಾವಂತಿ (ಚ), ದೊಡನೆ ವಾಸಂತಿ(ರ) [2] ಬಂದುದೊಂ (ಖ ಟ ದ), ಬಾರದೊಂ (ಚ) [3] ರೊಳ (ಚ ಣ ಬ) [4] ಬೇಡಿನ್ನು (ಖ), ವಂತಿರಲಿ (ಗ ಟ ಡ ಣ ದ ನ ಬ), ನಿನಗೇಕೆ (ಚ) [5] ದೈದೂರುಗಳು (ಚ ಟ ದ) [6] ಗಿಂಬು (ಟ ದ ಬ) [7] ಷದು ನಿನಗೆ ಮನವುಂ (ಕ ಮ) [8] ನೆಲನ ಮೂಱಡಿ (ಕ ಮ), ಬಲಿಯ ಮೂಱಡಿ (ಖ ಬ) [9] ನಿ (ಖ ಚ ರ ಬ) [10] ಪಥವ (ಖ), ವಿಧಿಯ (ಗ ರ), ಗತಿಯ (ಣ ನ ಪ) [11] ಪುರುಷೋತ್ತಮನು (ಕ ಬ ಮ) [12] ನಗುತ ಕುರು (ಗ ಟ ರ. ದ ಪ) [13] ನಿನ್ನಯ (ಖ ಟ ರ ಣ ನ) [14] ನಿವರಿಗೆ ಬಿಡು (ಕ ಮ), ನವರಿಗೆ ಕೊಡು (ಚ) [15] ವ ಪಾಲಿಪನ (ಕ ಮ), ತುಪಾಲಕನ (ಗ ಚ ರ ಣ ಬ), ದ ವಲ್ಲಭನ (ಟ ದ)

[1]ನೆಲದೊ[1]ಳರ್ಧವ[2]ನೀವುದಿಲ್ಲಾ[2]
ಸ್ಥಳ[3]ವನೈದನು ಮುನ್ನ[3] ಕೊಡೆ[4]ನೆ
ನ್ನಿಳೆಯ ಭಾಗವನೀಯೆನಿನ್ನಿದಕೇಕೆ ಕೈವಾರ[4]।
ನೆಲನ ಕಡೆಯಲಿ ಮುಳ್ಳುಮೊನೆಯು
ಚ್ಚಳಿಪ ಧರಣಿಯ[5]ನಿತ್ತೆ[5]ನಾದಡೆ
ಬಳಿಕ ನೀ ನಗು ಹೋಗು [6]ಕದನವ[6] ಕೊಂಡುಬಾ[7]ಯೆಂ[7]ದ ॥೩೨॥

ದನವ ಕಾವುದು ತೀರಿತೇ [8]ಬನ
ಬನವ[8] ತೊಳಲ್ವುದು ಕಡೆಯನೈದಿತೆ
ಮುನಿಗ[9]ಳನು ಬೋಳೆಗಳನೆ[9]ಱಗಿಸಿಕೊಂಬುದನು ಬಿಸುಟು।
ವನನಿಧಿಯನೆಡೆಗೊಂಡು ನಡುಹಾ
ವಿನಲಿ ಹಕ್ಕೆಯ[10]ನುಡುಗಿ[10] ನವ್ಮೊಳು
ಮನಕತವ ನೀ[11]ತಿದ್ದ[11]ಲೋಸುಗ [12]ಬಂದೆ ದಿಟವೆಂದ[12] ॥೩೩॥

ಕಡೆಗೆ ಧೃತರಾಷ್ಟ್ರಾವನೀಶನು
ಮಡದಿಸಹಿತಲನಾಥನಾಗಿಯೆ
ಕೆಡುವನೆಂಬುದ ಬಲ್ಲೆನಾ ಪಾಂಡವರ [13]ರಾಜ್ಯದಲಿ[13]।
[14]ಪಡಿಗೆ[14] ಪವಮಾನಜನ ಸಮಯುವ
ಪಡೆಯದಿಹ ತಱುವಾಯ [15]ನಿನಗದು[15]
ನಡಸಿಕೊಡುವುದು ತಪ್ಪದಕಟಕಟೆಂದ[16]ನಾ ವಿದುರ[16] ॥೩೪॥

ಮನದ ಸಂಕೇತದಲಿ ದುರ್ಯೋ
ಧನನ ಕಟ್ಟಲು ವಿದುರ ಗಂಗಾ
ತನಯ ಧೃತರಾಷ್ಟ್ರಾವನಿಪರಾಲೋಚಿಸಿದ ಹದನ।

---

[1] ಇಳೆಯೊ (ಝ ಬ) [2] ನೀಯ್ಯನಿಲ್ಲಿಯ (ಕ ಮ), ನೀವುದಿಲ್ಲೇ (ಖ ಝ ತ ನ ಬ) [3] ದೊಳೈದೂರುಗಳ (ಕ ಮ), ದೊಳೊಂದನು ಮುನ್ನ (ಚ) [4] ನಿನ್ನಿಳೆಯ ಭಾಗವನೈದೆ ಕೊಡೆಯಿನ್ನೇಕೆ ಕೈವಾರ (ಕ ಮ), ನ್ನಿಳೆಯೊಳೊಂದೂರೆನಿಸಿಕೊಟ್ಟರೆ ನಿನ್ನಮೇಲಾಣೆ (ಗ ಟ ಡ ದ ನ ಪ), ನೊಂದಿಳೆಯ ಭಾಗವನೀತಗೀಯೆನಿದೇಕೆ ಕೈವಾರ (ಬ) [5] ಕೊಟ್ಟೆ (ಝ ತ) [6] ಕದನಕೆ (ಕ ಮ), ಬವರವ (ಗ ಟ ಡ ನ) [7] ರೆಂ (ರ ನ ರ) [8] ಬನಬನಕೆ (ಕ ಬ ಮ), ಮನೆಮನೆಯ (ರ ತ). [9] ಳೊಳು ಬೋಳುಗಳೊಳೆ (ಕ ಚ ತ ಬ ಮ) [10] ಉಡುಗಿ (ಕ ಣ ಮ), ಸಿಕ್ಕಿ (ಚ ಝ ಟ) [11] ತಿಳುಹ (ಖ ಗ ರ ಡ ರ) [12] ಬಂದವನೆಯೆಂದ (ಚ ಬ) [13] ಬಾಗಿಲಲಿ (ಗಾ ಯ ರ) [14] ಕಡೆಗೆ (ಖ ಝ ರ ನ) [15] ನಿನಗದ (ಕ ಬ ಮ), ನಮಗೆಯು (ಟ ಡ ಣ ದ ನ ಪ) [16] ನಸುರಾರಿ (ಕ ಗ ಚ ಪ ಮ)

ಮನದೊಳಱಿದನು ಬಳಿಕ ದುಶ್ಶಾ
ಸನನು [1]ದುರ್ಯೋಧನಗೆ[1]ಯಿನಿಬರ
[2]ನೆನಹ[2] ಬಿನ್ನಹವಮಾಡಿದನು ಖಾತಿಯಲಿ ಕಳವಳಿಸೆ ||೩೫||

ಹೆತ್ತವರು [3]ಮರುಳ[3]ಹರೆ ನಾವಿ
ನ್ನೆತ್ತ [4]ಸಾರುವ[4]ವಣ್ಣದೇವ[5]ರು[5]
ಚಿತ್ತವಿ[6]ಸದಿರೆ[6] ರಾಜಕಾರ್ಯದ ಹದ ವಿಸಂಚಿಸಿತು।
ಮುತ್ತಯನ ಕಿಱಿಯಯ್ಯನಯ್ಯನ
ಚಿತ್ತ [7]ಕೊಂಕಿತು[7] ಸಾಕು ನಿಂದಿರೆ
ನುತ್ತಲಗ್ರಜಸಹಿತ[8]ವೋ[8]ಲಗದಿಂದ ಹೊಱವಂಟ ||೩೬||§

ಮುನಿದು ದುರ್ಯೋಧನನು ದುಶ್ಶಾ
ಸನನು [9]ಕೆಲದ[9]ರಮನೆಯೊಳಾಲೋ
ಚನೆಯ ಮಾಡಿದರಂದು ಸೌಬಲಕರ್ಣರೊಡಗೂಡಿ ।
ದನುಜವೈರಿ ಕುಮಂತ್ರದಲಿ ಬೊ
ಪ್ಪನಲಿ ಖಾತಿಯನಿಕ್ಕಿದನು [10]ಕೈ[10]
ಮನದ ಕಲಿಗಳು ಕಟ್ಟಿ ಕೃಷ್ಣನನೆಂ[11]ದು ಗುಜುಗುಜಿಸೆ[11] ||೩೭||

ಎರಡುಬಲವನು ಮಸೆದು ಕೊಲಿಸುವ
ಭರವು ಯಾದವನದು [12]ನಿದಾನಿಸ
ಲರಿ ನಮಗೆ[12] ಮುರವೈರಿಯಲ್ಲದೆ ಪಾಂಡುನಂದನರೆ।
ತರಿಸಿ ಹುರಿನೇಣುಗಳ[13]ನೀ[13]ತನ
ಕರವೆರಡ[14]ನೊಡೆ[14]ಬಿಗಿದಡವದಿರು
ಕೆರಳಿ ಮಾಡುವುದಾವುದೆಂದನು ಕೌರವರ ರಾಯ ||೩೮||

---

[1] ಬಳಿಕಣ್ಣನಿಗೆ (ಟ ಯ ರ) [2] ಹದನ (ಡ ದ) [3] ಹಗೆಯ (ಖ ಗಾ ಡ) [4] ತೊಲಗುವ (ಕ ಮ) [5] ರೆ (ಕ ಟ ತ ಮ) [6] ಸುವುದು (ಗ ಚ ಟ ರ ಡ ರ) [7] ಕದಡಿತು (ಖ ರ), ಮುರಿದುದು (ಚ ಟ ಣ ಬ ಯ ರ) [8] ಲೋ (ಖ ಗ ಟ ದ ಪ) [9] ತಮ್ಮ (ಖ ರ) [10] ಕಡು (ಕ ಮ) [11] ದನಾ ಧೂಪ (ಗ), ದರಾ ಖಳರು (ಝ ಟ ದ ಯ ರ) [12] ವಿಚಾರಿಸಲುಱದು ಹಗೆ (ಕ ಮ) [13] ಲೀ (ಗಾ ಝ) [14] ನೆಱೆ (ಗ)

§೩೬ ನೆಯ ಪದ್ಯವಾದಮೇಲೆ (ಗ ಚ ಟ ಡ ಣ ದ ನ ಪ ಯ ರ) ಪ್ರತಿಗಳಲ್ಲಿ ೯ನೆಯ ಸಂಧಿಯು ಮುಗಿದು ೧೦ನೆಯ ಸಂಧಿಯು ಆರಂಭವಾಗಿದೆ ಸಂಧಿ ಸಂಖ್ಯೆಯ ವಿಚಾರವನ್ನು ಪೀಠಿಕೆಯಲ್ಲಿ ವಿವರಿಸಿದೆ

ಗಾಳಿಯುಪಶಮಿಸಿದರೆ ವಹ್ನಿ
ಜ್ವಾಲೆ ತಾನೇ [1]ನಿಲುವು[1]ದೀತನ
ತೋಳ ಬಿಗಿದರೆ ಬಳಿಕ ಮನಗುಂದುವರು ಪಾಂಡವರು।
ಮೇಳವಿಸಿ ನೇಣುಗಳನೆನುತ ನೃ
ಪಾಲ[2]ನವದಿರು ಕಳವಳಿಸಲಿದ[2]
[3]ನಾಲಿಸುತ ಸಾತ್ಯಕಿ ಕರೆದು ಕೃತವರ್ಮಗಿಂತೆಂದ[3] ॥೩೯॥

ಆಳು ಕುದುರೆಯ ಬಾಗಿಲಿಗೆ ಬರ
ಹೇಳು ಕೈದುವ ಕೊಂಡು ವೀರಥ
ಟಾಳಿ ಹತ್ತಿರೆ ನಿಲಲಿ ಕೈವೀಸಿದರೆ ಕವಿಕವಿದು।
[4]ಬೀಳಹೊಯ್ವುದು[4] ಹೊ[5]ಕ್ಕು[5]ಗಂಡಿನ
ಮೇಲೆ ಗಂಡನು ಕಡಿದು ಕುರುಭೂ
ಪಾಲಕನ ನೊರೆನೆತ್ತರಲಿ ನಾದುವುದು ಮೇದಿನಿಯ ॥೪೦॥

ಎಂದು ಸುಭಟರಿಗಱುಹಿ ಸಾತ್ಯಕಿ
ಬಂದು ಕೃಷ್ಣನ ಕಿವಿಯ ಹತ್ತಿರೆ
ನಿಂದು ವದನವ ಚಾಚಿ ಬಿನ್ನಹವಮಾಡಿದನು ಹದನ।
ಮಂದಮತಿಗಳು ತಪ್ಪಿದ[6]ರು ಮನ[6]
ಗುಂದಲಾಗದು [7]ದೇವ[7] ಚಿತ್ತೈ
ಸೆಂದಡಸುರಾರಾತಿ ನಗುತ[8]ವೆ[8] ಭೀಷ್ಮಗಿಂತೆಂದ ॥೪೧॥

ಪರಿಣತಪ್ರೌಢಿಗಳಿಗಂತಃ
ಕರಣ ನನೆವುದು ಸುಜನರಿಗೆ ನಿ
ಷ್ಠುರ[9]ತೆಗಲ್ಲದೆ ಮನವನೀಯದು ಮಹಿಯ ಮೂಢಜನ[9]।
ಕರಗುವುದು ಶಶಿಕಾಂತ ಚಂದ್ರನ
ಕಿರಣ ತಾಗಲು ವಜ್ರಹತಿ ಗ
ಬ್ಬರಿಸದಲ್ಲದೆ ಗಿರಿಗಳಳುಕವು ಭೀಷ್ಮ ಕೇಳೆಂದ ॥೪೨॥

---

1 ಕೆಡುವು (ಟ ಡ ದ ಪ ಯ ರ) 2 ನನುಜರು ಗಜಬಜಿಸಲದ (ಗ), ಕನು ಕಳವಳಿಸಿ ನುಡಿವುದ (ಟ ಡ ಣ ದ ಪ ಯ ರ), ನವದಿರು ಗುಜುಗುಜಿಸಲದ (ತ) 3 ಕೇಳಿ ಕೃತವರ್ಮಕನು ಸಾತ್ಯಕಿಗಱುಹಲೈತಂದ (ಡ ಣ ದ ನ) 4 ಬೀಳುಗಡಿವುದು (ಕ ಮ), ಸೀಳಿಬಿಡುವುದು (ಖ ಬ) 5 ಕ್ಕ (ಚ) 6 ರು ಕೈ (ಖ ಚ ಟ ತ ಬ), ರೆ ಮನ (ಪ) 7 ಜೀಯ (ಖ) 8 ಲಿ (ಖ ಗ ಟ) 9 ರಿಗಿಂ ದಪಕೀರ್ತಿ ಬಹುದಿದಕಂಜಲೇಕೆನುತ (ಕ ಮ)

ದೂತರನು ಕಟ್ಟುವುದು ರಾಯರಿ
ಗೇತಱುಚಿತವು ನಮ್ಮ [1]ಬಿಗಿಯಲು[1]
ಕಾತರಿಸುತಿದೆ ನಿನ್ನ ಮೊಮ್ಮಂದಿರ[2]ನು ನೀ ಜರಸಿ[2] ।
ಮಾತನಾಡಿಸಿ ನೋಡು ನಮ[3]ಗೇ[3]
ಭೀತಿ ತಾನಿಲ್ಲೆನಲು ಗಂಗಾ
ಜಾತ ಧೃತರಾಷ್ಟ್ರಂಗೆ ನುಡಿದನು ಕೌರವನ ಗನ ‖೪೩‖

ಅವನಿಪತಿ [4]ಕೇಳಿದನು ಕನಲಿದು[4]
ಶಿವಶಿವೆಂದನು ವಿದುರ ಕರೆ ಕೌ
ರವ[5]ನು[5] ಮಗನೇ ಮೃತ್ಯುವಲ್ಲಾ ಭರತಸಂತತಿಗೆ ।
ಅವಳ ಬರಹೇಳಿತ್ತ ಮಗನಾ
ಟವನು ನೋಡಲಿ ಹೆತ್ತ ಮೋಹದ
ಹವಣುಗಳ ಬೆಸಗೊಂಬ ಗಾಂಧಾರಿಯನು ಕರೆಯೆಂದ ‖೪೪‖

* ಜನಪನಾಜ್ಞೆಯ ಮೇಲೆ ದುರ್ಯೋ
ಧನನ ತಂದರು [6]ಸಭೆಗೆ ಬಳಿಕೀ[6]
ವನಜ ಮುಖಿ[7]ಗೀ ಹದನನಱುಹಿದರಾಗಳೈತಂದು[7] ।
ದನುಜರಿಪುವನು ಕಟ್ಟುವೈ ಕೃ
ಷ್ಣನನು ಬಿಗಿವೈ [8]ದಿಟ ಮಗನೆ ಹೆ
ತ್ತೆನಗೆ[8] ಹರುಷವ ತಂದೆಯೆಂದಳು ಮುಳಿದು ಗಾಂಧಾರಿ ‖೪೫‖

[9]ನೆ[9]ಟ್ಟನೆಲೆ ಧೃತರಾಷ್ಟ್ರನೃಪ ನೀ
ನಿಟ್ಟ ಕಿಚ್ಚಿದು ಪಾಪಿಮಗ[10]ನನು[10]
ಹುಟ್ಟಿ[11]ದಾಗಳೆ[11] ಬಿಸುಡಹೇಳರೆ ಬಾಳುಗೆಡೆದವನ ।
ಕಟ್ಟುವನು ಗಡ ಕೃಷ್ಣನನು [12]ಮೈ[12]
ಮುಟ್ಟುವನು ಗಡ ಗಗನವನು ಬಲು
ದಿಟ್ಟತನಕಿನ್ನೇನ[13]ನೆಂದಹೆನೆಂದಳಿಂದುಮುಖಿ[13] ‖೪೬‖

---

1 ಕಟ್ಟಲು(ಖ.ತ) 2 ನು ಧಿಕ್ಕರಿಸಿ (ಚ), ನಿರಾಕರಿಸಿ (ರ) 3 ಗಾ (ತ)
4 ಕೇಳಿದನು ಹರಹರ (ಕ ಮ), ಕೇಳ್ದೀ ಕುಮಂತ್ರಕೆ (ಚ), ಕೇಳಿದವನಾಗಳೆ (ರ)
5 ನ (ಟ ರ) 6 ಕೆಲಕೆ ಮತ್ತೀ (ಚ), ಸಭೆಗೆ ಬಳಿಕಾ (ಟ ರ), ಸಭೆಗೆ ಮತ್ತೀ (ತ ಬ) 7 ಗಿಂತೆಂದಡಾ ಗಾಂಧಾರಿ ನಡೆತಂದು (ಚ ರ ತ ಬ), ಗೀ ಹದನನೆನೆ ಗಾಂಧಾರಿ ಹರಿತಂದು (ಟ.ಡ ದ ನ ಪ ರ) 8 ದಿಟ್ಟಮಗನೇ ಮನಕೆ (ಖ)
9 ಕೆ (ಖ ಗ ಝ ರ) 10 ನಿವ (ಚ ಟ ಡ ಣ ತ ದ.ಬ ರ). 11 ದಂದೇ (ಚ ಟ ಣ ಬ.ಯ ರ). 12 ಕೈ (ಗ) 13 ಹೇಳುವೆನೆಂದಳಬುಜಾಕ್ಷಿ (ರ ರ)

* ೪೫ನೆಯ ಪದ್ಯವು (ಕ ಮ) ಪ್ರತಿಗಳಲ್ಲಿಲ್ಲ.

[1]ಮರುಳು[1]ಮಗನೇ ಕೃಷ್ಣರಾಯನ
ಕೆರಳಿಚುವರೇ ಯಾದವರು ನಮು
ಗೆರವಿಗರೆ ವಸುದೇವ[2]ನ[3]ಮ್ಮಲಿ ಭೇದವೇ ನಿನಗೆ ।
[3]ತರಳ[3]ತನವಿದು ಬೇಡ ಖುಲ್ಲರ
ನೆರವಿಯೊ[4]ಡನಾ[4]ಡಿದರೆ ತಪ್ಪದು
ನರಕವೆಂದನು ಕುರುಪತಿಗೆ ಧೃತರಾಷ್ಟ್ರಭೂಪಾಲ ॥೪೭॥

ಎಲೆ ಮರುಳೆ ಧೃತರಾಷ್ಟ್ರ [5]ನಂಟಿನ[5]
ಬಳಿ[6]ಗ[6]ವಾತಿನ ಬಂಧುಕೃತ್ಯದ
[7]ಬಳವಿಗೆಯಲೇ ನಿನ್ನ[7]ಮಗನನು ಬೇಡಿಕೊಳ[8]ಲೇ[8]ಕೆ ।
ಮುಳಿದು ಬಗುಳುವ ನಾಯ್ಗೆ ಚಂದ್ರಮ
ನಳುಕುವನೆ ನರಿಯೊಱಲಿದರೆ ಕಳ
ವಳಿಸುವುದೆ ಕಲಿಸಿಂಹವೆಂದನು ಖಾತಿಯಲಿ ವಿದುರ ॥೪೮॥

ನೊರಜು ಹೊಕ್ಕೊಡೆ [9]ಕದಡು[9]ವುದೆ ಸಾ
ಗರದ ಜಲ ನೊಣ[10]ವೆ[10]ಱಗಿದರೆ ಕುಲ
ಗಿರಿಗಳಲ್ಲಾಡುವುವೆ ಕೇಳ್ ಧೃತರಾಷ್ಟ್ರಭೂಪಾಲ।
ತೆರಳಲಱಿವನೆ ಕೊಬ್ಬಿದೊಳ್ಳೆಯು
ಮುಱಗೆ ಗರುಡನು ನಿನ್ನ ಮಕ್ಕಳ
ದುರುಳತನಕಂಜುವನೆ ಮುರರಿಪುಯೆಂದನಾ ವಿದುರ ॥೪೯॥

ಲೋಕ ಮೈಮಱೆವಂದು ಜಲಧಿಗ
ಳಾಕಿ ಹಳಚುವ ಹೊತ್ತು ತಾನಿಹ
ನೇಕಮೇವಾದ್ವಿತಿಯಪರಮೇಕೋಹನೆಂದೆಂಬ ।
ಏಕನಾತುಮನೆಂಬ ವೇದಾ
ನೀಕ ಕೈವಾರಿಸಲು ಮೆಱೆವ ನಿ
ರಾಕೃತಿಯ [11]ಪರಬೊಮ್ಮತತ್ತ್ವವದೀತ[11] ನೋಡೆಂದ ॥೫೦॥

---

[1] ದುರುಳ (ತ) [2] ಗೆ (ಟ ಯ ರ) [3] ಮರುಳು (ಚ ತ), ದುರುಳ (ಝ) [4] ಳಗಾ (ಗಾ ರ) [5] ನಂಜಿನ (ಖ.ಗ) [6] ಕೆ (ಗಾ) [7] ಬಳಕೆಗಳಲೇ ನಿನ್ನ (ಖ ಡ), ಬಳಕೆಯಲಿ ನೀ ನಿನ್ನ (ಝ. ಬ), ಬೆಳವಿಗೆಯ ನುಡಿಗಳಲಿ (ಟ ಯ) [8] ದೇ (ಕ ಬ ಮ) [9] ಕಲಕು (ಗ ಬ) [10] ನೆ (ಗಾ ರ ಬ.ಮ) [11] ನಿರುಪಮಿತ ತತ್ತ್ವಾತೀತ (ಚ ಬ)

ಸಲಿಲಮಯವಾದಖಿಳಭುವನಾ
ವಳಿಯಲೊಮ್ಮೆ ವಿರಿಂಚಿಯಾಳುತ
ಮುಳುಗುತ್ತೈತಂದಾಲದೆಲೆಮಂಚದಲಿ ಪವಡಿಸಿದ ।
ಹೊ[1]ಳೆವನಿವ[1]ನಾರೆಂದು ಜಠರದೊ
ಳಿಳಿದು ತದ್ಬ್ರಹ್ಮಾಂಡ[2]ಶತ[2]ದಲಿ
ಹೊಲಬುಗೆಡೆ ಹೊಕ್ಕುಳಲಿ ಬ್ರಹ್ಮನನೀತನುಗುಳಿದನು ॥೫೧॥

ಪರಮತತ್ತ್ವವೆ ತದ್ವಚನಗೋ
ಚರ[3]ವವಿದ್ಯಾಶಕ್ತಿ ಬೊಮ್ಮದ
ವರಮಹತ್ತೆಂದೆನಿಸಿತಾ[3]ತನ ಮ[4]ಗನ[4]ಹಂಕಾರ ।
ಸ್ಫುರದಹಂಕಾರಕ್ಕೆ ಮಕ್ಕಳು
ಮೆಱೆದರೈವರು ಭೂತವೆಸರಲಿ
ಹರಹಿ[5]ದಾವನ[5] ದೆಸೆಯಲು[6]ದಿಸಿದು[6]ದಾತ ನೋಡೀತ ॥೫೨॥

ಲೀಲೆಯಿಂದ ರಜೋಗುಣಕೆ ಮನ
ಮೇಳವಾದರೆ ಮಾಡುವನು ಭುವ
ನಾಳಿಯನು ಸಲಹುವನು ಸಾತ್ವಿಕಗುಣಕೆ ಮನಮುರಿಯೆ ।
ಮೇಲೆ ತಾಮಸಗುಣಕೆ ತಿರುಗಿದ
[7]ಡೂಳಿಗವ[7] ಮಾಡುವನು ಗುಣಸಂ
ಮೇಳದಲಿ ಗುಣರಹಿತನೆಂಬ ಮಹಾತ್ಮ ನೋಡೀತ ॥೫೩॥

ಸಂಗಿಯೆನಿ[8]ಸನು[8] ಜಗವ ಹುಟ್ಟಿಸಿ
ನುಂಗಿದಡೆ ನಿಷ್ಕರುಣಿಯೆನಿ[9]ಸನು[9]
ಅಂಗರಕ್ಷೆಯು ಮಾಡಿ ಮೋಹಿತನಲ್ಲ ಮೂಜಗಕೆ ।
ಜಂಗಮಸ್ಥಾವರಕೆ ಚೈತ
ನ್ಯಾಂಗ[10]ನುತ್ತಮ[10] ಘನಕೆ ಘನ[11]ವ[11]ಣು
ವಿಂಗೆ ತಾನಣು[12]ವೆನಿಪ[12] ಪರತರವಸ್ತು ನೋಡೀತ ॥೫೪॥

---

[1] ಳಹು ನೀ (ಕ ರ ಬ ಮ), ಳೆವನೀ (ಗ ಡ ಣ ದ ರ) [2] ತಳೆ (ಕ ಮ) [3] ವೆ ವಿದ್ಯಾ ಸಕಲಧರ್ಮವು ಪರಮವ್ಯೈದಿಕವೆನಿಸಿತೀ (ಕ ಮ) [4] ನದ (ಚ ರ ಡ ಣ ದ ನ ಬ) [5] ತಾತನ (ಕ ಖ ಣ ಮ). [6] ದಯಿಸಿ (ಕ ಖ ಮ) [7] ಡಾಲಯವ (ಈ ಮುದ್ರಿತ ಪಾಠವು ನಮಗೆ ದೊರೆತಿರುವ ಪ್ರತಿಗಳಲ್ಲಿಲ್ಲ) [8] ಸುವ (ಕ ಖ ಗ ಮ) [9] ಪನು (ಕ ಖ ಮ). [10] ನೀತನು (ಖ), ರೂಪನು (ಬ) [11] ನ (ಗ, ರ, ಣ). [12] ವೆಂಬ (ಖ ಣ ನ ಮ)

ಆವನೊಬ್ಬನ ಬೆಳಗಿನಿಂದವೆ
ಜೀವನವು ರವಿಶಶಿಗಳಿಗೆ ಮಗು
ಳಾವನೊಬ್ಬನ ನೇಮದಿಂದವೆ ಪವನಪಾವಕರು ।
ಜೀವಿಸುವ[1]ರಾರೊಬ್ಬನುರು[1]ಲೀ
ಲಾವಿನೋದದಿ ಬ್ರಹ್ಮವಿಷ್ಣುಶಿ
ವಾವಳಿಗಳುದ್ಭವಿಸಿ [2]ತೋಱುವುವಾತ[2] ನೋಡೀತ ॥೫೫॥

ಈತನಾ ಮಧುಕೈಟಭರ ಮುಱಿ
ದಾತ[3]ನುದ[3]ಧಿಯೊಳಿಳಿದು ವೇದವ
ನೀತ ತಂದನು ಜಯ[4]ವಿಜಯರಾ[4] ದೈತ್ಯಜನ್ಮವನು ।
ಈತ [5]ತೊಡೆ[5]ದನು [6]ಪೌಂಡ್ರಕನನಂ
ದೀತ ಕೊಂದನು[6] ಹಂಸಡಿಬಿಕರ
ನೀತನೊರಸಿದನರಸ ಚಿತ್ತೈಸೆಂದನಾ ವಿದುರ ॥೫೬॥

ಹೊಸತಲಾ ಶ್ರುತಿಕೋಟಿ ಮಹದುಪ
ನಿಷದರಾಶಿಗಳ[7]ಱಿಸಿ ಕಾಣವು[7]
ಬಸಿಱೊಳಗೆ ಬ್ರಹ್ಮಾಂಡಕೋಟಿಯ [8]ನಿಱುಸಿ[8]ಕೊಂಡಿಹನು ।
ನುಸಿಗ[9]ಳೀ[9] ಕರ್ಣಾದಿ ದುಷ್ಟ
ಪ್ರಸರಮಂತ್ರಿಗಳಿವನ ನೇಮದ
ಲಸುರರಿಪುವನು ಬಿಗಿಯಲಳವಡಿಸಿದರು ನೇಣುಗಳ ॥೫೭॥

ಸೂಚಿಸು[10]ವ ಶ್ರುತಿನಿಚಯ[10] ಬರೆಬರೆ
ನಾಚಿದವು [11]ವೇದಾಂತನಿಚಯದ[11]
[12]ವಾಚನೆಗಳಳವಳಿದು[12] ನಿಂದವು ನಿಜವ ಕಾಣಿಸದೆ ।
ಆಚರಿಸಲಳವಲ್ಲ ಮುನಿಗಳ
ಗೋಚರಕೆ [13]ಮೈ[13]ಗೊಡದ ಹರಿಯನು
ನೀಚರಿವದಿರು [14]ಬಿಗಿಯಲಳವೇ ಭೂಪ ಕೇಳೆಂದ[14] ॥೫೮॥

---

1 ರಿಂತೊಬ್ಬನುರು (ಗ ಡ ಣ ದ ಪ), ರಾರಿಂದಲುರು (ಟ ರ) 2 ತೊಳಗುವರಾತ (ಕ ಮ), ತೋಱುವವಾತ (ಗ ಡ ಣ ದ ನ ಫ ರ) 3 ಶರ (ತ) 4 ನ ವಿಜಯನ (ಕ ರ ಣ ತ ಮ) 5 ನೊದೆ (ಕ ಮ), ಕೊಂ (ತ) 6 ಕಂಸನನು ಪೋಣೀತ ಮುಱಿದನು (ತ) 7 ಱಿಯಲಱಿಯವು (ಕ ಟ ಡ ಣ ನ ಪ ಬ ಮ ರ), ಱಿಯವೀತನ (ಖ), ಱಿಯವೈ ಸಲೆ (ಚ) 8 ಮುಸುಕಿ (ಕ ಮ), ಧರಿಸಿ (ಗ) 9 ಳಹೆ (ಕ ಖ ಚ ಣ ಬ ಮ) 10 ತ ಶ್ರುತಿನಿಕರ (ಟ ಡ ಣ ದ ನ ಪ) 11 ವೇದಾರ್ಥನೀತಿಯ (ಕ ಮ) 12 ವಾಚನೆಗಳಳವಡದೆ (ಕ ಮ), ಯೋಚನೆಗಳಳವಳಿದು (ರ) 13 ಮತಿ (ಕ ಮ), ಮನ (ಖ ಚ ಬ) 14 ಬಿಗಿಯ ಬಗೆದರು ಭೂಪ ಕೇಳೆಂದ (ಖ ಚ ಡ ದ ನ ಪ), ಬಿಗಿಯಲಳವಡಿಸಿದರು ನೇಣುಗಳ (ಗ), ಕಟ್ಟುವರೆ ಭೂಪಾಲ ಕೇಳೆಂದ (ಟ)

ವಿದುರನಿಂ[1]ತೆಂದೆನಲು[1] ಮಿಂಚಿನ
ಹೊದಳು ಹುರಿಗೊಂಡಂತೆ ರವಿಶತ
ವುದುರಿದವು ಮೈಮುರಿದು ನಿಂದಡೆ ದೇವನಂಗದಲಿ ।
ಸದೆದುದಾಸ್ಥಾನವನು ಘನತೇ
ಜದ [2]ಲಹರಿ ಲೀಲೆಯಲಿ ಹರಿ[2] ತೋ
ಱದನು ನಿರುಪಮವಿಶ್ವರೂಪವನಾ ಮಹಾಸಭೆಗೆ ॥೫೯॥

ಚರಣದುಂಗುಟದಲ್ಲಿ ದೇವರು
ತುಱುಗಿದರು ನೊಸಲಿನಲಿ ಕಮಲಜ
ನುರದಲಗ್ಗದ ರುದ್ರನಾಸ್ಯದೊಳಗ್ನಿವಾಯುಗಳು ।
ಬೆರಳಲಿಂದ್ರಾದಿಗಳು ನಯನಾಂ
ಬುರುಹದಲಿ ರವಿ ನಾಭಿಯಲಿ ನಭ
ವರಭುಜಾಗ್ರದೊಳಖಿಳದಿಗುಪಾಲಕರು ರಂಜಿಸಿತು ॥೬೦॥

ಸುರರು ಖಚರರು ಕಿನ್ನರರು ಕಿಂ
ಪುರುಷರನುಪಮಸಿದ್ಧವಿದ್ಯಾ
ಧರರು ವಸುಗಳು [3]ಮನು[3]ಗಳಾದಿತ್ಯರು ಭುಜಂಗಮರು ।
ಗರುಡಗಂಧರ್ವಾಶ್ವಿನೀದೇ
ವರು [4]ಸವಿಶ್ವೇದೇವರಖಿಲಾ[4]
[5]ಪ್ಸರೆಯುರೆಸೆದರು[5] ರೋಮರೋಮದ ಕುಳಿಯ ಚೌಕದಲಿ ॥೬೧॥

ಬಲದ ಭುಜದಲಿ ಪಾರ್ಥನೆಡದಲಿ
ಹಲಧರನು ಚರಣದಲಿ ಧರ್ಮಜ
ಕಲಿವೃಕೋದರ ನಕುಲ ಸಹದೇವಾದಿ ಯಾದವರು ।
ಲಲಿತಕಾಂತಿಯೊಳಖಿಳತಾರಾ
ವಳಿಗಳಮಳಗ್ರಹವಿರಲು [6]ತೊಳ[6]
ತೊಳಗಿ [7]ಮೆಱೆದನು[7] ವಿಶ್ವರೂಪ[8]ವಿಹಾರಿ ಮುರವೈರಿ[8] ॥೬೨॥

---

[1] ತಿಂತೆನಲು (ಖ ಚ ಝ ರ ತ), ತೆನುತಿರಲು (ಡ ದ ವ ಪ) [2] ಲಹರಿ ತಾ ಲೀಲೆ ಮಿಗೆ (ಗ ಡ ಣ ದ ನ ಪ) [3] ಮುನಿ (ಕ ಚ ಬ ಮ) [4] ಗಳಖಿ ರಾಪ್ಸರಿಯುರೆಸೆದರು (ಗ ಝ ದ), ವಿಮಲ ಯಕ್ಷಾದಿ ಸಕಲಾ (ಚ ಬ) [5] ಪರಮ ಪುರುಷನ (ಗ), ಗರುವದೇವನ (ಝ ದ). [6] ಮಿಗೆ (ಗ) [7] ಬೆಳಗಿದ (ಟ.ಯ.ರ). [8] ವನಾ ಮಹಾಸಭೆಗೆ (ಕ ಮ).

ಕಿವಿಗಳಲಿ ಕಂಗಳಲಿ ನಾಸಾ
ವಿವರದಲಿ ಹೊಗೆ ಮಸಗಿ ದಳ್ಳುರಿ
ತಿವಿದುದಾಕಾಶವನು ಕವಿದುದು ಕಾಂತಿ ದೆಸೆದೆಸೆಗೆ ।
ರವಿಯು ತಗ[1]ಡೆ[1]ನೆ ತಳಿತವಾಯುಧ
ನಿವಹ ಸಾಸಿರಭುಜದ ಬಹುಳ[2]ತೆ
ಯುವಗಡಿಸಿ[2] ವೈಕುಂಠನೆಸೆದನು ವಿಶ್ವರೂಪದಲಿ ||೬೩||

ಅರಳಮಳೆ ಸೂಸಿದವು ದುಂದುಭಿ
ಮೊರೆದುದಾಕಾಶದಲಿ [3]ಮುದದಲಿ
ಧರಣಿ ಬಿದಿರಿತು ತನುವನುಕ್ಕಿದುದಬುಧಿ[3] ದೆಸೆದೆಸೆಗೆ ।
ಕರಿಕಮರರುಬ್ಬಾಳುತನ ಮಿ
ಕ್ಕಿರೆ ಮಹಾದ್ಭುತವಾಯ್ತು ಕಂ[4]ಡರು[4]
ಹರಿಯ ರೂಪವನೊಬ್ಬ ಕೌರವನಲ್ಲದುಳಿದವರು ||೬೪||

ತಳುಕನುಗಿದೀಡಾಡಿ ಪರಿಣತ
ಪುಳಕ[5]ದಲಿ ನನೆ[5]ನನೆದು ಹರುಷದ
ಜಲಧಿ[6]ಯಲಿ ಮನಮುಳುಗಿ[6] ಭಕ್ತಿಯ ಭಾ[7]ರ[7]ದಲಿ ಕುಸಿದು ।
ಅಳುಕಿ ತಮತಮಗೆದ್ದು ಮುನಿಸಂ
ಕುಲಸಹಿತ ಗಾಂಗೇಯ [8]ಕೃಪ ನಿ
ರ್ಮಲವಿದುರ ಗುರು ಸಂಜಯಾ[8]ದಿಗಳೆಱಗಿದರು ಪದಕೆ ||೬೫||

ಒಳಗೆ ಹೊಳೆದನು ಬಾಹ್ಯದಲಿ ಪ್ರ
ಜ್ವಲಿಸಿದನು ತಾನಲ್ಲದನ್ಯರ
ಬಳಕೆ [9]ಬೇಱೊಂ[9]ದಿಲ್ಲದಂತಿರೆ ಕೂಡೆ ತೋಱಿದನು ।
ಒಳಗೆ ಬಿಗಿವೆವೊ ಹೊಱಗೆ ಕೃಷ್ಣನ
ಸಿಲುಕಿಸುವೆವೋ ತಿಳಿಯೆ ಕೃಷ್ಣರು
ಹಲಬ[10]ರಾಗಿಹರಾರ[10] ಕಟ್ಟುವೆವೆಂದ[11]ರಾ ಖಳರು[11] ||೬೬||

---

[1] ವೆ (ದ) [2] ದೊಳವಗಡಿಸಿ (ಡ ನ ಪ ರ), ದೊಳಳವಡಿಸಿ (ದ ಟ ಯ) [3] ಧಾರಿಣಿ ಬಿರಿಯೆ ಬೇಗದಿ ತನುವನುಕ್ಕಿದುದಬುಧಿ (ಕ ಮ), ಮುದದಲಿ ಧರಣಿ ಬಿರಿದುದು ತನುವ ನೂಕಿದನಬುಧಿ (ತ) [4] ಡುದು (ಕ, ಖ ಝ ಣ ಮ). [5] ಜಲದಲಿ (ಖ ಗ ಟ ತ ದ ರ) [6] ಯೊಳು ಮುಳುಗಾಡಿ (ಝ), ಯೊಳಗೋಲಾಡಿ (ಣ) [7] ವ (ಕ ಗ ಚ ಟ ದ ಮ) [8] ಗುರು ನಿರ್ಮಲವಿದುರ, ಕೃಪ ಗುರು ಸುತಾ (ಗ ಟ ಡ ಣ ದ ಪ ರ) [9] ಮತ್ತೊಂ (ಖ ಗ ಟ ಡ ಣ ದ ನ ಪ ಬ) [10] ರಹರಾವಾರ (ಕ ಮ), ರಾಗಿರಲಾರ (ರ) [11] ರತಿಬಲರು (ಕ ಮ), ರಾಚರರು (ಣ ತ).

ಅನುಪಮಾದ್ವಯದಲ್ಲಿ ಮುಳ್ಳಿನ
ಮೊನೆಗೆ [1]ಮೋಹು[1]ವರಿಲ್ಲ ತೆಱಹಿಂ
ಬನಿತು ಪರಿಪೂರ್ಣದಲಿ ಸಚ್ಚಿನ್ಮಾತ್ರರೂಪದಲಿ ।
ಮನದ ಬಗೆ ಮುಟ್ಟದ ಮಹಾಮಹಿ
ಮನನು ಕಟ್ಟುವೆವೆಂತೆನುತ ತನ
ತನಗೆ ಕರ್ಣಾದಿಗಳು ಕೈಗಳ ಕದಪ ತೂಗಿದರು ॥೬೭॥

ಕಂಗಳನು ಕರುಣಿಸಿದನಂಧನೃ
ಪಂಗೆ ಬಳಿಕೀ ಕೃಷ್ಣರಾಯನ
ಮಂಗಳಶ್ರೀಮೂರ್ತಿಯನು ಮನದಣಿಯೆ ನೋಡಿದನು ।
ಕಂಗಳಡಗ[2]ಲಿ ದೇವ ನಿಮ್ಮಾ[2]
ಯಂಗವಟ್ಟವ ಕಂಡು ಮಗುಳೀ
ಕಂಗಳಿತರವ ಕಾಣ[3]ಲಾಗದು[3] ಕೃಪೆಯ ಮಾಡೆಂದ ॥೬೮॥

[4]ಅಮಿತ[4]ಕರುಣಾಸಿಂಧು ನೀನನು
ಪಮಚರಿತ್ರನು ನಿ[5]ಮ್ಮಡಿಯ ಪದ[5]
ಕಮಲದರುಶನದಿಂದ ಹಿಂಗಿದವಘದ ರಾಶಿಗಳು।
ಸಮತೆಯಲಿ ನೀ ನೋಡು ಶರಣರ
ಮಮತೆ [6]ಬೇಹುದು[6] ಜೀಯ ಲಕ್ಷ್ಮೀ
ರಮಣ ಕೃಪೆಮಾಡೆಂದು [7]ಮೈಯಿಕ್ಕಿ[7]ದಳು ಗಾಂಧಾರಿ ॥೬೯॥

ಮಾನ ನಿನ್ನದು ಭಕ್ತಜನದ[8]ಪ[8]
ಮಾನ ನಿನ್ನದು [9]ನಿನ್ನ ಶರಣರ
ಹಾನಿವೃದ್ಧಿಗಳೆಲ್ಲ[9] ನಿನ್ನದು ಬೇಱೆ ಗತಿಯುಂಟೆ ।
ಆನತರ ತೇಜೋಭಿಮಾನವ
ನೀನೊಲಿದು ಸಲಹೆಂದು [10]ಭಯ[10]ದಲಿ
ಭಾನುಮತಿ ಮೈಯಿಕ್ಕಿದಳು ಮುರಹರನ ಚರಣದಲಿ ॥೭೦॥

---

[1] ತೋಱು (ಕ ಮ) [2] ದ ಮುನ್ನ ನಿಮ್ಮಾ (ಕ ಝ ರ ಮ), ಲ ದೇವ ನಿಮ್ಮಡಿ (ಖ ಟ ಡ ದ ನ ಪ) [3] ದಂತಿರೆ (ಖ ಗ), ಬಾರದು (ಣ) [4] ವಿಮಲ(ಕ ಖ ಚ.ಬ.ಮ) [5] ನ್ನ ಸಿರಿಪದ (ತ), ಮ್ಮ ಪದಯುಗ (ಪ) [6] ನಿನ್ನದು (ಚ) [7] ಬಂದೆಱಗಿ (ತ) [8] ವ (ಗಾ ಮ) [9] ಯೆನ್ನ ಮಕ್ಕಳ ಹಾನಿವೃದ್ಧಿಯ ಹೊಱೆಗೆ (ತ). [10] ಮುದ (ಖ.ಗಾ ರ.ಬ).

ತಾತ [1]ಹೆ[1]ದಱಿದಿರೀ ಮುಕುಂದನ
ಕೈತವಕೆ ಬೆಚ್ಚದಿ[2]ರು[2] ಸಂಧಿಯು
ಮಾತು ತಾನಿದು [3]ಹೃದಯವೇ[3] ಬೆಸಗೊ[4]ಳ್ಳು[4] ಮುರಹರನ |
ಈತನಂತರ್ಯಾಮಿ ಜೀವ
ವ್ರಾತದಲಿ ಜನಜನಿತ[5]ವೀ ಜಗ
ವೀ[5]ತನಾಜ್ಞೆ[6]ಯೊಳೊಲ[6]ವುದೆಂದನು ಕೌರವರ ರಾಯ ‖೭೧‖

ಎನ್ನ ಹೃದಯದೊಳಿರ್ದ ಮುಱಿ[7]ವ[7]ನು
ಗನ್ನದಲಿ ಸಂಧಿಯನು ರಿಪುಗಳ
[8]ನಿನ್ನ ತನ್ನವರಿವರೊಳಿರ್ದಾ ಹದನ*ನಾಡಿಸುವ[8]* |
ಭಿನ್ನನಂತಿರೆ ತೋಱಿ ಭಿನ್ನಾ
ಭಿನ್ನನೆನಿಸಿಯೆ ಮೆಱೆವ ತಿಳಿಯಲ
ಭಿನ್ನನೀ ಮುರವೈರಿ [9]ನಾವಿನ್ನಂಜಲೇಕೆಂದ[9] ‖೭೨‖

ಹಳಚುವವು ಹಾಹೆಗಳು ಸೂತ್ರವ
ನಲುಗಿ[10]ದರೆ ತತ್ಪುಣ್ಯ[10]ಪಾಪಾ
ವಳಿಗಳಾ ಹಾಹೆಗಳಿಗುಂಟೇ ಸೂತ್ರಧರನಿರಲು |
ಕೊಲುವನನ್ಯರನನ್ಯರಿಂದವೆ
ಕೊಲಿಸು[11]ವನು[11] ಕಮಲಾಕ್ಷ[12]ನ[12]ಲ್ಲದೆ
ಯುಳಿದ [13]ಜೀವವ್ರಾತಕೇ[13] ಸ್ವಾತಂತ್ರ್ಯವಿಲ್ಲೆಂದ ‖೭೩‖

ನಾವು ಸಂಧಿಯನೊಲಿವೆವೆಮ್ಮಯ
ಭಾವದಲಿ ಹುಳುಕಿಲ್ಲ ಸಂಪ್ರತಿ
ದೇವನಭಿಮತವಲ್ಲ ಬಲ್ಲೆನು ಮುರಹರನ [14]ಮನವ[14] |
ನೀವು ಮೇಗರೆಯಱಿತದವ[15]ರೀ[15]
ರಾವಣಾರಿಯ ಬಗೆಯ[16]ನಱಿಯಿರಿ[16]
ಸಾವೆನೀತನ ಕೈಯಬಾಯಲಿ ಭೀತಿ [17]ಬೇಡೆಂದ[17] ‖೭೪‖

---

[1] ಬೆ (ಗಾ ರ) [2] ರಿ (ಡ ತ ದ ನ ಪ) [3] ನಿಶ್ಚಯವೆ(ಡ ದ ಪ) [4] ಳ್ಳಿ(ಗ ಟ ಡ ತ ನ ಪ ಬ) [5] ವಿದು ಜಗವೀ (ಖ ಚ ತ ದ ಬ), ಜಗವೆಲ್ಲೀ (ಗ ಟ ಡ ನ ಪ ರ) [6] ಲಳಿವು (ಚ ತ) [7] ದ (ಖ ಗಾ ಬ) [8] ನೆನ್ನತನ್ನವರೆನ್ನದೆಂದೇ ಹೊಯ್ದಾಡಿಸುವ ಹದನ(ಕ.ಮ) * ತಾನಱಿದು (ಗ ಡ ದ ನ ಪ). [9] ಯಲ್ಲದೆ ಭೇಱಿದಾರೆಂದ (ಗ) [10] ದರೆ ನಿಜಪುಣ್ಯ (ಖ), ಸಲು ತತ್ಪುಣ್ಯ (ತ ಬ) [11] ವುದು (ರ) [12] ಗ (ರ) [13] ಜೀವವ್ರಜಕೆ ತಾ (ಕ ಮ), ದೇವ ವ್ರಾತಕೇ (ಗ ತ) [14] ಬರವ (ಕ. ಮ), ಹದನ (ಚ ಟ.ತ) [15] ರ್ಕೈ (ಗ ಟ ರ ಡ ನ ಪ) [16] ಬಲ್ಲೆನು (ಖ ತ), ನಱಿಯರಿ (ಗ), [17] ಯೇಕೆಂದ (ಚ.ಬ)

ಇಳಿದನವನಿಗೆ ಧಾರುಣಿಯ ಹೊಱೆ
ಗಳೆಯಲೋಸುಗವಿಲ್ಲ [1]ನಮ್ಮೊಳ
ಗೊ[1]ಳಗೆ ವೈರವ ಬಿತ್ತಿ ಬಱಿಕೈವನು ಮಹಾಬಲವ ।
ಛಲಕೆ ಮಣಿಯ[2]ದೆ[2] ರಾವಣಾದಿಗ
ಳಳಿದರಿದಲಾ ಕೀರ್ತಿ ಕಾಯವಿ
ದಳಿವುದಗ್ಗದ ಕೀರ್ತಿಯುಳಿ[3]ವುದು ಅಂ[3]ಜಲೇಕೆಂದ ॥೭೫॥

* ಮಣಿದು ಬದುಕುವನಲ್ಲ ಹಗೆಯಲಿ
ಸೆಣ[4]ಸಿ[4] ಬಿಡುವವನಲ್ಲ [5]ದಿಟ[5] ಧಾ
ರುಣಿಯ [6]ಸಿರಿಗೆಳಸುವವನಲ್ಲಳುಕಿಲ್ಲ[6] ಕಾಯದಲಿ ।
ರಣಮಹೋತ್ಸವವೆನ್ನ ಮತ [7]ಕೈ[7]
ದಣಿಯೆ ಹೊಯ್ದಾಡುವೆನು ಕೃಷ್ಣನ
ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ ॥೭೬॥

ಮನದೊಳಗೆ ನಗುತಸುರರಿಪು ಮು
ನ್ನಿನ ಮನುಷ್ಯಾಕಾರವನು ಮಗು
ಳನುಕರಿಸಿ ಧೃತರಾಷ್ಟ್ರಭೀಷ್ಮರಿಗೆಂದನೀ ಹದನ ।
ಜನಪಕೌರವ ಪಾಂಡುನಂದನ
ರೆನಗೆ ಸರಿಯಿಾ ಚಿಂತೆಯೆಮಗೇ
ಕೆನುತ ರಾಜಾಲಯವನಸುರಧ್ವಂಸಿ ಹೊಱವಂಟ ॥೭೭॥

ಬಂದು ವಿದುರನ ಮನೆಗೆ ದೇವಮು
ಕುಂದ ಕುಂತಿಯ ಕರೆದು ನಿನ್ನಯ
[8]ಕಂದರೈವರ ಮೇಲೆ[8] ಕೌರವನೃಪನ ಖತಿ [9]ಬಲುಹು[9] ।
ಇಂದು ಮುಱಿದುದು ಸಂಧಿ ನಿನ್ನಯ
ಕಂದ ಕರ್ಣನ ಬೇಡಿಕೊಳು ನೀ
ನೆಂದು ಸೂಚಿಸಿ ಮರಳಿದನು ಮುರವೈರಿ ಹರುಷದಲಿ ॥೭೮॥

---

[1] ನಮ್ಮವರೊ (ಗ ಡ ಣ ನ ಪ). [2] ದ (ಖ ಗ ಡ ಣ ದ ನ ಪ) [3] ದಿಹುದಂ (ಚ ರ ಡ ದ ನ ಪ ರ) [4] ಸ (ಕ ಚ ಣ ಪ ಬ) [5] ನಿಜ (ಕ ಖ ಪ ಬ ಮ) [6] ನೀವವನಲ್ಲ ಅಳುಕಿಲ್ಲೆನ್ನ (ಕ ಮ), ಸಿರಿಯನು ಬಗೆವುದಿಲ್ಲಳುಕಿಲ್ಲೆನ್ನ (ಬ) [7] ಮನ (ತ) [8] ನಂದನರ ಮೇಲಿಂದು (ಗ), ನಂದನರುಗಳ ಮೇಲೆ (ಟ ಡ ದ ಪ ರ). [9] ಹಿರಿದು (ಬ)

* (ಕ) ಪ್ರತಿಯಲ್ಲಿ ೭೬ನೆಯ ಪದ್ಯವಾದಮೇಲೆ ೯ನೆಯ ಸಂಧಿ ಮುಗಿದಿದೆ, ಅಲ್ಲಿಂದ ಮುಂದಿನ ೫ ಪದ್ಯಗಳಿಲ್ಲ.

ವಿದುರ ಭಾರದ್ವಾಜ ಗೌತಮ
ನದಿಯಮಗ ಧೃತರಾಷ್ಟ್ರನಾತನ
ಸುದತಿ ಕರ್ಣ ವಿಕರ್ಣ ಶಲ್ಯ ಸುಬಾಹು ಗುರು[1]ಸುತರು[1]।
ವದನದುತ್ಸವವಡಗಿ ಕೃಷ್ಣನ
ಪದ[2]ವನೋಲಗಿಸುತ್ತ[2] ಬರೆ ಕರು
ಣದಲಿ ಕಮ[3]ಲಾಕಾಂತನುಚಿತ[3]ದಲವರ ಬೀಳ್ಕೊಟ್ಟ ॥೭೯॥

ನಯದೊಳೇಕಾಂತದಲಿ ಸಲೆ [4]ತೋ
ಱಿಯೆ ನುಡಿವು[4]ದವನಾಸೆ[5]ವಾಸಿಯ[5]
ಬಯಸಲಾಗದು ಹಿತವ[6]ನೇ ಬಯಸುವುದು ಕುರುಕುಲಕೆ[6] ।
ನಿಯತವಿದು ಪಾಂಡವರೊಡನೆ ಸಂ
ಧಿಯೆ [7]ಸರಸ[7] ಸಮರಾಂಗವೀಯ
ನ್ವಯಕೆ ನಿರ್ಣಯವೆಂದು ನೀವಾತಂಗೆ ಸಾಱುವುದು ॥೮೦॥

ಎಂದು ಗಾಂಗೇಯಾದಿಗಳನರ
ವಿಂದನಾಭನು ಬೀಳುಕೊಟ್ಟನು
ನಿಂದು ತಾ ರವಿಸುತನ ಕರೆದನು ರಥದ ಹೊರೆಗಾಗಿ।
ಬಂದು ಕಿಱಿದೆಡೆಗಾಗಿ ಕಳುಹುವು
ದೆಂದು ನೇಮಿಸಿ ಬಳಿಕ ತಾಪಸ
ವೃಂದವನು [8]ಕಳುಹಿದನು ಗದುಗಿನ ವೀರನಾರಯಣ[8] ॥೮೧॥

ಒಂಬತ್ತನೆಯ ಸಂಧಿ ಮುಗಿದುದು

---

[1] ಸೂನು (ಚ ಬ ಮ) [2] ಯುಗವನೋಲೈಸಿ (ಝ) [3] ಲಾಂಬಕನು ವಿನಯ (ಚ ಬ) [4] ಕಾಂರಿಯವ ನುಡಿ (ಟ ರ) [5] ಯನು ನೀವ್ (ಝ ಮ) [6] ಬಯಸುವುದೆರಡುಸಂತತಿಗೆ (ಚ ಣ ದ ಬ) [7] ಸದರ (ಖ ಡ ದ ನ ಪ), ಸುಖವು (ಚ ಬ.ಮ) [8] ಕಾರುಣ್ಯದಲ ಕಳುಹಿದ ತಪೋವನಕೆ (ಬ ಮ),

# ಹತ್ತನೆಯ ಸಂಧಿ

ಸೂಚನೆ॥ ಕೆಣಕುವದಟರ ಗಂಡ ಸಮರಾಂ
ಗಣಕತುಳಭೇರುಂಡನಾ ದಿನ
ಮಣಿಯ[1]ಸುತ[1]ನುದ್ದಂಡಕರ್ಣನ ಕಂಡಳಾ ಕುಂತಿ ॥

ಒಲಿದವರ[2]ನುಜ್ಜೀವಿಸುವ ಬಗೆ[2]
ಬಲುಹು ಮುರಮಥನಂಗೆ ಮುನಿದಡೆ
ತಲೆಯ ಬರೆಹವ ತೊಡೆವನಲ್ಲದೆ ಬಳಿಕ ಸೈರಿಸನು।
ನಳಿನನಾಥನು ಭಜಕರಿಗೆ ಬೆಂ
ಬಳಿಯ[3]ಬಿರುದನು[3] ಭೇದದಲಿ ಕುರು
ಕುಲವ ಕೊಂದನು ಕೇಳು ಜನಮೇಜಯಮಹೀಪಾಲ ॥೧॥

ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದೊಳು
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀರದಲಿ।
ಎನಗೆ ನಿಮ್ಮಡಿಗಳಲಿ [4]ಸಮ[4]ಸೇ
ವನೆಯೆ [5]ಜೀಯ[5] ಮುರಾರಿಯಂಜುವೆ
ನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ ॥೨॥

ಭೇದವಿಲ್ಲೆಲೆ ಕರ್ಣ [6]ನಿಮ್ಮೊಳು[6]
ಯಾದವರು ಕೌರವರೊಳಗೆ ಸಂ
[7]ವಾ[7]ದಿಸು[8]ವುದನ್ವಯದ[8] ಮೊದಲೆರಡಿಲ್ಲ [9]ನಿನ್ನಾಣೆ[9]।
ಮೇದಿನೀಪತಿ [10]ನೀನು[10] ಚಿತ್ತದೊ
ಳಾದು[11]ದಿಲ್ಲಱಿವೆನುತ ದಾನವ[11]
ಸೂದನನು ರವಿಸುತನ ಕಿವಿಯಲಿ ಬಿತ್ತಿದನು [12]ಭಯವ[12] ॥೩॥

---

[1] ಮಗ (ಚ ಟ ಡ ಣ ದ ನ ಪ ಮ) [2] ಜೀವಿಸುವ ಧರ ತಾ (ಕ ಮ), ನುದ್ಧ ರಿಸುವಾ ಬಗೆ (ಖ) [3] ಬಿಡನೈ (ಟ ಯ. ರ) [4] ಸರಿ (ಗಾ) [5] ದೇವ (ಖ ಗಾ) [6] ನಿರ್ಮಲ (ಝ ಬ), ಕೇಳೈ (ರ) [7] ಪಾ (ಕ ಗ ಟ ಪ ಬ ಮ) [8] ವದನ್ವಯಕೆ (ಗ ಯ ರ), ವದನ್ವಯದ (ಡ ಣ ದ ನ) [9] ನಿಮ್ಮೊಳಗೆ (ಕ ಮ) [10] ನಿನ್ನ (ಕ ಝ ರ ಣ ಮ) [11] ದನು ಅಱುಹುವೆನೆನುತ ಮಧು (ಕ.ಮ) [12] ವಿಷವ (ಕ.ಮ), ಭವವ (ಗ ರ ಣ ದ)

ದಾನವಾಂತಕ ಬೆಸಸು ವಂಶವಿ
ಹೀನನನು ನಿಮ್ಮಡಿಗಳೊಡನೆ ಸ
ಮಾನಿಸುವರೇ ಸಾಕೆನುತ ತಲೆವಾಗಿ ಕೈಮುಗಿಯೆ ।
ಮಾನನಿಧಿ [1]ನ[1]ನ್ನಾಣೆ ಬಾರೈ
ನೀನು ನಮ್ಮೆಲ್ಲರ ಹವಣೆ ವರ
ಭಾನುವಂಶಲಲಾಮ [2]ನೀ ರಾಮಂಗೆ[2] ಸರಿಯೆಂದ ॥೪॥

ಕಳೆದು ಕೊಂಡನು ವೀಳೆಯವನಂ
ಜುಳಿಯಲಾತಂಗಿತ್ತು ಕರ್ಣನ
ಕೆಲಕೆ ಬರಸೆಳೆದವನ ಕರದೊಳು ಕರ[3]ತಳವನಿಕ್ಕಿ[3] ।
ಎಲೆ ದಿವಾಕರತನಯ ನಿನ್ನಯ
ಕುಲವನಱಿಯೆಯಲಾ ಸುಯೋಧನ
ನಲಿ ವೃಥಾ ಸೇವಕತನದಲಿಹುದುಚಿತವಲ್ಲೆಂದ ॥೫॥

ಲಲನೆ [4]ತಾ ಪಡೆದೈದು[4]ಮಂತ್ರಂ
ಗಳಲಿ ಮೊದ[5]ಲಿಗ ನೀನು ನಿನ್ನಯ
ಬಳಿ[5] ಯುಧಿಷ್ಠಿರದೇವ ಮೂಱನೆಯಾತ ಕಲಿಭೀಮ ।
ಫಲುಗುಣನು ನಾಲ್ಕನೆಯಲೈದನೆ
ಯಲಿ ನಕುಲಸಹದೇವರಾದರು
ಬಳಿಕ [6]ಮಾದ್ರಿಯೊಳೊಂದುಮಂತ್ರದೊಳಿಬ್ಬರುದಿಸಿದರು[6] ॥೬॥

ಅದಱಿನೀ ಪಾಂಡವರೊಳೈವರ
ಮೊದಲಿಗನು ನೀನಿರಲು ಧರಣಿಯ
ಕದನವಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು ।
ಇದು ನಿದಾನವು ಕರ್ಣ ನಿನ್ನ
ಭ್ಯುದಯವನೆ ಬಯಸು[7]ವೆನು[7] ನಿನ್ನಯ
ಪದಕೆ ಕೆಡಹುವೆನೈವರನು [8]ನಡೆಯೆನ್ನಸಂಗಾತ[8] ॥೭॥

---

[1] ಯೆ (ಖ ಗ ಯ ರ), ತ (ಣ ಬ ಮ) [2] ನಿನಗಿನ್ನಾರು (ಚ) [3] ವ ತಳುಕಿಕ್ಕಿ (ಖ ಗಾ ತ ಬ) [4] ಪಡೆದೀಯಯ್ದು (ಚ ಬ), ಪಡೆದಿದ್ದೈದು (ರ) [5] ಲಲಿ ನೀನು ಬಳಿಕಾ ಕಲಿ (ಕ ಮ) [6] ಮಾದ್ರೀದೇವಿಯಿಂದವೆರೊಂದು ಮಂತ್ರದಲಿ (ಡ) [7] ವರು (ಚ ಝ ಬ) [8] ನಡೆ ತನ್ನ ಸಂಗಾತ (ಕ ರ ಬ ಮ), ಬಹುದೆನ್ನ ಸಂಗಾತ (ಗ ಡ ದ ನ ಪ), ನಡೆ ನಮ್ಮ ಕೂಡೆಂದ (ಚ ಯ ರ), ನಡೆಯೆನ್ನ ಬಳಿವಿಡಿದು (ತ)

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾ[1]ಡುವೆನು[1] ಕೌರವ
ಜನಪ ಪಾಂಡವಜನಪರೋಲೈಸುವರು ಗದ್ದುಗೆಯ ।
ನಿನಗೆ ಕಿಂಕರರೆರಡುಸಂತತಿ
ಯೆನಿಸಲೊಲ್ಲದೆ ನೀನು ದುರ್ಯೋ
ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ॥೮॥

ಎಡದ ಮೈಯಲಿ ಕೌರವೇಂದ್ರನ
ಗಡಣ ಬಲದಲಿ ಪಾಂಡು[2]ಪುತ್ರರ[2]
ಗಡಣವಿದಿರಲಿ ಮಾದ್ರ[3]ಮಾಗಧ ಯಾದವಾದಿಗಳು[3] ।
ನಡುವೆ ನೀನೋಲಗದೊಳೊಪ್ಪುವ
ಕಡುವಿಲಾಸವ ಬಿಸುಟು [4]ಕುರುಪತಿ[4]
[5]ನುಡಿಸೆ[5] ಜೀಯ ಹಸಾದವೆಂಬುದು ಕಷ್ಟ ನಿನಗೆಂದ ॥೯॥

ಶೌರಿಯದಲಿದಿರಿಲ್ಲ ಕುಲದಲಿ
ಸೂರಿಯನ[6]ಸುತ[6]ನೊಡನೆ ಹುಟ್ಟಿದ
ವೀರ[7]ರಗ್ಗದ[7] ಪಾಂಡುತನಯರು ನಿನ್ನ ವೈಭವಕೆ ।
ಆರು ಸರಿಯೈ ಕರ್ಣ ನಡೆ ನಡೆ
ಧಾರುಣೀಪತಿಯಾಗಿ ನೀನಿರೆ
ವೈರವಿತ್ತಂಡಕ್ಕೆ ಬಳಿಕಿಲ್ಲೆಂದನಸುರಾರಿ ॥೧೦॥

ಕೊರಳ ಸೆರೆ ಹಿಗ್ಗಿದವು ದೃಗುಜಲ
ವುರವಣಿ[8]ಸಿ[8] ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ ।
ಹರಿಯ ಹಗೆ ಹೊಗೆದೋಱಿದು[9]ರುಹದೆ[9]
ಬಱಿದೆ ಹೋಹುದೆ ತನ್ನ [10]ವಂಶವ[10]
ನಱಿಹಿ ಕೊಂದನು ಹಲವುಮಾತೇ[11]ನೆಂ[11]ದು ಚಿಂತಿಸಿದ ॥೧೧॥

---

[1] ಡಿಸುವೆ (ಟ ಡ ಣ ದ ನ ಪ ರ) [2] ತನುಜರ (ಕ), ತನಯರ (ಬ ಮ ರ) [3] ಪತಿ ದ್ರುಪದಾದಿನಾಯಕರು (ತ) [4] ಕೌರವ (ಖ ಝ) [5] ನುಡಿಯೆ (ಖ ಗಾ ತ್ರ ಬ) [6] ಮಗ (ಟ ಡ ಣ ತ ಬ ಯ ರ) [7] ರೈವರು(ಖ ಗ ಚ) [8] ಸೆ (ಗ ಬ) [9] ರಿಯದೆ (ಚ) [10] ಜನನವ (ಗ ಟ ಡ ಣ ದ ನ) [11] ಕೆಂ (ಗ ಝ)

ಕಾದಿ ಕೊಲುವಡೆ ಪಾಂಡು[1]ಸುತರು ಸ
ಹೋ[1]ದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದಡೆ ಕೌರವಂಗವ[2]ನಿಯಲಿ ಹೊಗಲಿಲ್ಲ[2] ॥
ಭೇದದಲಿ ಹೊಕ್ಕಿಱಿದ[3]ನೋ[3] ಮಧು
ಸೂದನನು [4]ತಾನ[4]ಕಟನುತ ಚಿಂ
ತೋದಧಿಯಲದ್ದಂತೆ ಮೌನದೊಳಿರ್ದನಾ ಕರ್ಣ ॥೧೨॥

[5]ಏನು ಹೇಳ್ವೈ[5] ಕರ್ಣ ಚಿತ್ತ
ಗ್ಲಾನಿಯಾವುದು ನಿನಗೆ ಕುಂತೀ
ಸೂನುಗಳ ಬೆಸಗೈಸಿಕೊಂಬುದು ಸೇರದೇ [6]ನಿನಗೆ[6] ।
ಹಾನಿಯಿಲ್ಲೆನ್ನಾಣೆ [7]ನುಡಿ ದು
ಮ್ಮಾನ[7]ವೇತಕೆ ಮರುಳುತನ ಬೇ
ಡಾನು ನಿನ್ನ[8]ಪದೆಸೆಯ[8] ಬಯಸುವನಲ್ಲ ಕೇಳೆಂದ ॥೧೩॥

ಮರುಳುಮಾಧವ [9]ಮಹಿಯ ರಾಜ್ಯದ[9]
ಸಿರಿ[10]ಗೆ ಸೋಲು[10]ವನಲ್ಲ ಕೌಂತೇ
ಯರುಸುಯೋಧನ[11]ರೆನಗೆ[11] ಬೆಸಗೈವಲ್ಲಿ ಮನವಿಲ್ಲ ।
ಹೊರೆದ ದಾತಾರಂಗೆ [12]ಹಗೆಗಳ[12]
ಶಿರವನರಿದೊಪ್ಪಿಸುವೆನೆಂಬೀ
ಭರದಲಿರ್ದೆನು ಕೌರವೇಂದ್ರನ ಕೊಂದೆ ನೀನೆಂದ ॥೧೪॥

ಒಡನೆಹುಟ್ಟಿದರೆಂಬ ಕಥನವ
ನೆಡೆಗೊಡದೆ ಬಣ್ಣಿಸಿದೆ ಪಾಂಡವ
ರಡಗುಬಾಣಕೆ [13]ಬಲಿಯೆನಿಪ್ಪೀ[13] ಛಲವ ಮಾಣಿಸಿದೆ ।
ನುಡಿದು ಫಲವೇನಿನ್ನು ಕೌರವ
ರೊಡೆಯನಾದಂತಹೆನು ಬಾರೆನು
ಪೊಡವಿಯಲಿ ನೀ ಹರಹಿಕೊಳು ನಿನ್ನವರ [14]ನಿಲಿಸೆಂದ[14] ॥೧೫॥

---

[1] ತನುಜರು ಸೋ (ಖ ಝ) [2] ಯನು ಹೊಗಲಿಲ್ಲ (ಖ ಗ ಡ ಪ ನ), ನಿಯಲ ಋಣವಿಲ್ಲ (ಟ ಯ ರ) [3] ನೀ (ಖ ಟ ಯ ರ) [4] ಅಕಟ (ಖ ರ ಮ) [5] ಮೋನವೇಕ್ಕೈ (ದ) [6] ಮನಕೆ (ಖ ಗ ಡ ಣ ದ ನ ಪ) [7] ನಿಲು ನುಡಿ ಮೋನ (ಕ), ನುಡಿ ನುಡಿ ಮೋನ (ಚ ಝ ಬ), ನೀ ನುಡಿ ಮೋನ (ಮ) [8] ಯ ಲಯವ (ಖ) [9] ಸಕಲರಾಜ್ಯದ (ಗ ಟ ಡ.ಪ ಯ), ಮಹಿಯ ಭೋಗದ (ಡ) [10] ಯ ಸೊಗಸು (ಕ ರ ಮ), ಗೆ ಸೋತ (ಬ) [11] ರೊಳಗೆ (ಕ ಝ ಣ ಮ) [12] ಹಗೆವನ (ಕ ಮ), ರಿಪುಗಳ (ಗ) [13] ಗುಱಿಯ ತಪ್ಪಿಸಿ (ಕ ಮ), ಬಲಿಯ ಕೊಡುವೀ (ಖ ಚ ಝ) [14] ನಿಱಿಸೆಂದ (ಖ ಟ ಬ), ಸಲಹೆಂದ (ರ)

ಹಲವು ಮಾತೇ[1]ನ[1]ಖಿಳಜನವೆ
ನ್ನುಳಿವ ಸೊಗಸದು ಕೌರವೇಶ್ವರ
[2]ನೊಲವು[2] ತಪ್ಪಿ[3]ಸಿ ಭುವನದೊಳಗೆನಗಾ[3]ಪ್ತಜನವಿಲ್ಲ ।
ಸಲಹಿದನು [4]ಮನ್ನಣೆಯಲೆನಗ[4]
ಗ್ಗಳಿಕೆಯಲ್ಲದೆ ಹೀನವೃತ್ತಿಯು
ಬಳಸಿ ನಡಸನು ಕೌರವೇಂದ್ರನನೆಂತು ಮಱೆದಹೆನು ॥೧೬॥

ನೋಡಿ ದಣಿಯನು ನಿಚ್ಚಲುಚಿತವ
ಮಾಡಿ ದಣಿಯನು ಬಿರುದ ಹೊಗಳಿಸಿ
ಹಾಡಿ ದಣಿಯನು ಮಾನನಿಧಿಯನದೆಂತು ಮಱೆದಹೆನು ।
ಕಾಡಲಾಗದು ಕೃಷ್ಣ ಖಾತಿಯು
ಮಾಡಲಾಗದು ಬಂದೆನಾದಡೆ
ರೂಢಿ ಮೆಚ್ಚದು ಕೌರವನ ಹಗೆಹರಿಬ [5]ತ[5]ನಗೆಂದ ॥೧೭॥

ವೀರಕೌರವರಾಯನೇ ದಾ
ತಾರನಾತನ ಹಗೆಯೆ ಹಗೆ ಕೈ
ವಾರವೇ ಕೈವಾರವಾದಂತಹೆನು ಕುರುನೃಪತಿ ।
ಶೌರಿ ಕೇಳ್ಕೆ ನಾಳೆ ಸಮ[6]ರದ
ಸಾರ[6]ದಲಿ ತೋಱುವೆನು ನಿಜಭುಜ
ಶೌರಿಯುದ ಸಂಪನ್ನ[7]ತನವನು[7] ಪಾಂಡುತನಯ[8]ರಲಿ[8] ॥೧೮॥

ಅರುಣಜಲದಾಜ್ಯದಲಿ [9]ಬಂ[9]ಬಲು
ಗರುಳ ಚರುವಿನಲೆಲುವಿನೊಟ್ಟಿಲ
ಬೆರಳ ಸಮಿಧೆಯಲಡಗಿನಖಿಳಾಹುತಿಯ ರಚನೆಯಲಿ ।
[10]ನರ[10]ಕಪಾಲದ ಪಾತ್ರೆ[11]ಗಳ[11] ತಿಲ
ದೊರಳೆಗಳ ಕೇಶೌಘದರ್ಭಾ೦
ಕುರದಲಾಹವಯಜ್ಞದೀಕ್ಷಿತನಹೆನು [12]ಕೇಳೆಂದ[12] ॥೧೯॥

---

[1] ಕ (ಝ ಮ) [2] ನೊಲುಮೆ (ಖ ಝ) [3] ದ ಬಳಿಕ ಭುವನದೊಳಾ (ಚ) [4] ಲೇಸಾಗಿಯೆನ್ನ (ಕ ಮ) [5] ವೆ (ಗ ಟ ಡ ಣ ಪ ಬ ಯ) [6] ಕೋದ್ಧಾರ (ಕ ಮ), ರದ ಧಾರ (ಗ), ರವಿಹಾರ (ರ) [7] ಸಿರಿಯನು (ಗ), ಬಲವನು (ಝ ಟ ಣ ತ ಯ ರ), ತೆಯನಾ (ನ) [8] ರಿಗೆ (ಗ, ಡ ಬ ಮ) [9] ದೊಂ (ಕ ಗ ಚ ಬ, ಮ) [10] ಶಿರ (ಕ ಗ ಚ ರ ಣ ಪ ಬ ಮ) [11] ಯಲಿ (ಖ ಗ ಝ ಪ) [12] ತಾನೆಂದ (ಖ ಗ ಟ ಡ ಯ ಪ ರ)

ಮಾರಿಗೌತಣವಾಯ್ತು ನಾಳಿನ
ಭಾರತವು ಬ[1]ಹು[1] ಜೀವ ಹ[2]ರಿಯಲು[2]
ಕೌರವನ ಋಣ ಹಿಂಗೆ [3]ರಣದಲ್[3] ಸುಭಟಕೋಟಿಯ[4]ನು[4] ।
ತೀರಿಸಿಯೆ ಪತಿಯವಸರಕ್ಕೆ ಶ
ರೀರವನು [5]ನೂಕು[5]ವೆನು ನಿನ್ನಯ
[6]ವೀರ[6]ರೈವರ ನೋಯಿಸೆನು ರಾಜೀವಸಖನಾಣೆ ॥೨೦॥

ಎನಲು ಕರ್ಣನ [7]ದೃಢವ ಕಂಡನು[7]
ಮನದೊಳುತ್ಸಾಹಿಸಿಧ್ಧನಾದಡೆ
[8]ತನಯ[8]ರೈವರ ಹೃದಸ್ಸು ನಿನ್ನದು ಬಲುಹ ಮಾ[9]ಡಿದಡೆ[9] ।
ಮನಕೆ ಖತಿಯಹುದಱುಹದದಿರ್ದಡೆ
[10]ಯೆ[10]ನಗೆ ಗುಣವಲ್ಲೆಂಬಕಾರಣ
[11]ವಿನಿತನಾನಱುಹಿದೆನು[11] ನೀ ಸುಖಿಯಾಗು ಹೋಗೆಂದ ॥೨೧॥

ಬಂದರೊಳ್ಳಿತು ಬಾರದಿದ್ದಡೆ
ಕಂದ ಕೇಳೈ ಮಧುರವಚನದಿ
ಮಂದಮತಿಯನು ತಿಳುಹಿ ತಮ್ಮಂದಿರಿಗೆ ರಾಜ್ಯವನು ।
ಇಂದು ಕೊಡಿಸುವುದುಚಿತ ಸಂಪ್ರತಿ
[12]ಗಿಂದು[12] ಸೇರಿಸು ನಿನ್ನ ಮಾತನು
ಹಿಂದುಗಳೆಯನು ಕೌರವೇಶ್ವರನೆಂದನಸುರಾರಿ ॥೨೨॥

ಮಸೆದುದಿತ್ತಂಡಕ್ಕೆ ಮತ್ಸರ
ವಸಮಸಂಗರವೀಗ [13]ನೀತಿಯ[13]
ನುಸುರಿದಡೆ ಮನಗಾಣನೇ ಕೌರವಮಹೀಶ್ವರನು ।
[14]ವಿಷಮನದ[14] ಕಟ್ವಾಳು ಮಂತ್ರವ
ನೆಸಗಲಾಗದು ತನ್ನ ವೀರಕೆ
[15]ಮ[15]ಸುಳಹುದು ಮುರವೈರಿ ಸಂಧಿಯನಱಿಯೆ ನಾನೆಂದ ॥೨೩॥

---

[1] ಲು (ಕ ಖ ಚ ಟ ಣ ಪ ಮ) [2] ರವೀ (ಟ.ರ ಡ ನ ಪ ಯ ರ), ತವಿದು (ದ), ರಣದಿ (ಬ) [3] ಹೋಯ್ವೆನು (ಕ ಮ) [4] ಲಿ (ಕ ಮ) [5] ನೀಗು (ಚ). [6] ಧೀರ(ಗ ಚ ಬ) [7] ನುಡಿಯ ಕೇಳುತ (ಕ ಮ), [illegible] ಕಂಡನು (ಖ ಝ ರ ಬ). [8] ಅನುಜ (ಟ ಯ ರ) [9] ಡುವರೆ (ಕ ಖ ಣ ಪ.ಬ.[illegible]) [10] ನ (ಗ.ಡ.ಣ. ದ ನ), ತ (ಚ ಝ ಟ ರ ಯ ರ) [11] ಯನಿ[illegible]ಡ್ಡೈಸಿದೆನು (ಕ.ಮ), ವಿನಿತ ನಿನಗಱುಹಿದೆನು (ದ) [12] ಗೆಂದು (ಖ ಗ ಡ.ಣ ದ ಪ.ಬ) [13] ಸಂಧಿಯ (ಗ ಟ ಡ ದ ನ ಪ) [14] ವಿಷಮವಹ (ಗ ಟ), [illegible]ನದ (ರ.ಡ ಣ.ನ.ಪ) [15] ಮು (ಟ ಡ ಣ ಪ ಬ).

ಕಳುಹಬೇಹುದು [1]ದೇವ ದಿನಪತಿ
ಯಿ[1]ಳಿದನ[2]ಪರಾಂಬುಧಿಗೆ[2] ಸಂಪ್ರತಿ
ಯಳಿದ[3]ಹೊತ್ತಿಂದೀಗ[3] ನೆಟ್ಟನೆ ನೀವು ಪಾಂಡವ[4]ರು[4] ।
ಹುಲುಸರವಿ ಹಾವಹುದು ಹುತ್ತಿನ
[5]ಬಳಿ[5]ಯಲಿರಲಜ್ಞರಿಗೆ ಪಿಸುಣರ
ಬಳಕೆ ಹೊಗುವುದು ಕಳುಹಬೇಕೆಂ[6]ದೆಱಗಿದನು ಪದಕೆ[6] ॥೨೪॥

ಬೀಳುಕೊಂಡನು ಮನೆಗೆ ಬಂದು ವಿ
ಶಾಲಮತಿ [7]ಚಿಂತಿಸಿದನಾ[7] ಸಿರಿ
ಲೋಲ ಮಾಡಿದ ಮಂತ್ರ ಮನದಲಿ ನಟ್ಟು ಬೇರ್ವರಿಯೆ।
ಕಾಳುಮಾಡಿದನಕಟ ಕೌರವ
ಬಾಳಲಱಿಯದೆ ಕೆಟ್ಟನೀ ಗೋ
ಪಾಲ ಬಱಿದೇ ಬಿಡನು ಜೀವವ ಕೊಳ್ಳದಿರನೆಂದ ॥೨೫॥

*ದನುಜರಿಪು ತನಗೊರೆದ ಮಂತ್ರ[8]ದೊ
ಳಿನಸುತನು ಚಿಂತಿಸುತ[8] ನಿದ್ರಾಂ
ಗನೆಯನುಳಿದನು ಕೌರವೇಂದ್ರಂಗಾಪ್ತರಿಲ್ಲೆನುತ।
ಮನದೊಳಿರುಳು ವಿಚಾರಿಸುತ್ತಿರೆ
ವನಜವರಳಿದವಂದು ನೈದಿಲು
ಮನವನಿಳುಹಲು ಸೂರ್ಯನಡರಿದನುದಯಪರ್ವತವ ॥೨೬॥

ವೀರರವಿಸುತನೊಂದುದಿನ ರವಿ
ವಾರದಲಿ ಪರಿತೋಷ [9]ಮಿಗೆ[9] ಭಾ
ಗೀರಥೀತೀರದಲಿ ತಾತಂಗರ್ಘ್ಯವನು ಕೊ[10]ಡುತ[10] ।
ಸೌರಮಂತ್ರವ ಜಪಿಸುತಿರಲಾ
[11]ದಾರಿಯದ ಸುರತರುವ[11] ಕುಂತೀ
ನಾರಿ ಕಾಣಲು ಬಂದಳಾತ್ಮಜನಿದ್ದ ನದಿಗಾಗಿ ॥೨೭॥

---

[1] ದೇವ ದಿನಕರನಿ (ಕ ಮ), ಜೀಯ ದಿನಮಣಿಯಿ (ಖ ಚ ಣ) [2] ಸ್ತಾಂಬುಧಿಗೆ (ಕ ಮ), ಸ್ತಾಚಲಕೆ (ಗ ರ ದ ಮ) [3] ಹೊತ್ತಿದು ಜೀಯ (ಕ ರ ಮ) [4] ರ (ಕ.ರ ಮ) [5] ತಲೆ (ಖ ರ ಬ ಮ) [6] ದಂಘ್ರಿಗೆಱಗಿದನು. (ಗ ಡ ಣ ದ ನ ಪ ಬ) [7] ಬಿಸುಸುಯ್ದನಾ (ಕ ಣ ಮ) [8] ಧಿ ವನಜಸಖನ ಕುಮಾರ (ಗ ಟ ಡ ದ) [9] ದಲಿ (ಕ ಚ ಣ ಮ) [10] ಟ್ಟು (ಟ ಣ ದ ನ ಪ) [11] ದಾರ ಸುರಭೂಜನನು (ಕ ಖ ರ ಬ)

* ೨೬ನೆಯ ಪದ್ಯವು (ಕ.ಝ ರ ಮ) ಪ್ರತಿಗಳಲ್ಲಿಲ್ಲ.

ಬರಲು ತಾಯಿಗ್ಗದಿರ್ಗ ರವಿಸುತ
ನಿರದೆ ಬಂದನು ದಂಡದಂತಿಕೆ
ಚರಣದಲಿ ಪ್ರೈಯಿಕ್ಕಲಾತನ ನೊಸಲ ನೆಗಹಿದಳು।
ಬರಸೆಳೆದು ಬಿಗಿಯಪ್ಪಿದಳು ನೀ
ರುರವಣಿಸಿ[1]ದವು ನಯನದಲಿ[1] ಸೆರೆ
ಕೊರಳಿಗೌಕಿದುದಳಲಿನಬುಧಿಯೊಳದ್ದಳಾ ಕುಂತಿ ॥೨೮॥

ಆ ಸಮಯದಲಿ ಗಂಗೆ ನಾರೀ
ವೇಷ[2]ದಲಿ ನಡೆ[2]ತಂದಳೆಲೆ ಕುಂ
ತೀಸತಿಯು ಕೈ[3]ಯೊ[3]ಡೆಯ ಕಂದನನೊಪ್ಪುಗೊಳು ನೀನು ।
ಈಸುದಿನವಿವನಾಗುಹೋಗಿನ
ಗಾಸಿಯನು ತಲೆಗಾಯ್ದೆನೆನ್ನಯ
ಭಾಷೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ ॥೨೯॥

ಇರಲಿರಲು ರವಿ ಬಂದನೆಕ್ಕಟಿ
ಗರೆದನೀತನ ಕಿವಿಯೊ[4]ಳೆಲ್ಲವ[4]
ನೊರೆದ ನಿನಗೆಲೆ ಮಗನೆ ಕುಂತೀದೇವಿ ತಾಯಹಳು ।
ಮುರಹರನ ಮತದಿಂದ ನಿನ್ನ[5]ಯು[5]
ಸರಳ ಬೇಡಲು ಬಂದಳಂ[6]ದಿನ[6]
ಹರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ ॥೩೦॥

ಬೆಸಸಿ[7]ತಕ್ಕ[7] ಹಸಾದವೆಂದನು
ಬಿಸಜಬಂಧುವ ಕಳುಹಿದನು ಮ
ನ್ನಿಸಿದನಿತ್ತಲು ಮಾತೆಯನು ಭಯಭರಿತಭಕ್ತಿಯಲಿ।
ಒಸೆದು ಬಿಜಯಂಗೈ[8]ದ ಹದನೇ
ನುಸಿರ[8]ಬೇಹುದು ತಾಯೆಯೆನೆ ಶೋ
ಕಿಸುತ ನುಡಿದಳು ಕುಂತಿ ಕರ್ಣನ [9]ಸೆಳೆದು[9] ಬಿಗಿಯಪ್ಪಿ ॥೩೧॥

---

[1] ದುದು ಕಂಗಳಲಿ (ಗ) [2] ದಿಂದ್ಯೆ (ಕ ಮ) [3] ಲೆ (ಕ ಗ ಚ ಪ ಬ ಮ) [4] ಳಱುದುದ (ಖ ಬ) [5] ನು (ಚ ಮ) [6] ದಾ (ಚ) [7] ದುದಕೆ (ಚ ಝ ಟ ದ ಣ) [8] ದ ಹದನನುವುಸುರ (ಕ ಮ), ದುದನು ನೀ ಬೆಸಸ (ಖ) [9] ತೆಗೆದು (ಖ ಗ ಟ ಡ ಣ ಪ)

ಮಗನೆ ತಮ್ಮಂದಿರನು ಪಾಲಿಸು
ವಿಗಡತನವನು ಮಾಣು ಪರರೊೞ
ಲಗವ ನೀ ಮಾಡುವರೆ [1]ನಿನಗಿತ್ತಂಡವನುಜರಲಿ[1] |
ಸೊಗಸು ನಾನೆಂದುದನು ಪಿಸುಣರ
[2]ಹಗೆನುಡಿಯು[2] ಕೇಳದಿರು ಪಟ್ಟವ
ಬಿಗಿಸಿಕೊಳು ಸಲಿಸೆನ್ನವಚನವನೆಂದಳಾ ಕುಂತಿ ||೩೨||

ತಾಯಹುದು ನಾ ಬಲ್ಲೆ[3]ನಿದನಾ
ಕಾಯಜನಪಿತನಱುಹೆ ತಿಳಿದೆನು
ರಾಯರಿತ್ತಂಡಕ್ಕೆ ಪಟ್ಟದ[3]ಹಿರಿಯ [4]ತಾನಹುದು[4] |
ರಾಯ[5]ನೆ[5]ನ್ನನು ನಚ್ಚಿ ಹೊರೆದನು
ಸಾಯ[6]ಲಳುಕು[6]ವೆನೇ ಸುಡೀತಱ
ದೀಯಿಳೆಯ ಬಾಳಿಕೆ ಕೃತ[7]ಘ್ನಂ[7]ಗಿಲ್ಲ ಗತಿಯೆಂದ ||೩೩||

ಮಕ್ಕಳೈವ[8]ರೊಳಾನು ಹಿರಿಯನು[8]
ತಕ್ಕ [9]ಮಾತೆಯ ಮಾತು[9] ಸಂದೇ
ಹಕ್ಕೆ ನೆಲೆಯಿಲ್ಲದು ನಿಲಲಿ ಧಾರುಣಿಯ ಬಯಸುವರೆ |
ತಕ್ಕುದೇ ದಾತಾರನರಸಿಯೊ
ಳೊಕ್ಕತನವಿರಲಾರು ಮೆಚ್ಚುವ
ರಕ್ಕ ಹೇಳೌ ಹೇಸಳೇ ಜಯಲಕ್ಷ್ಮಿ ತನಗೆಂದ ||೩೪||

ಇಂದು ನೀವಱುಹಿದ ಬಳಿಕ ರವಿ
ನಂದನನುಯೆಂದಱಿದೆನಲ್ಲದೆ
ಹಿಂದೆ ದುರ್ಯೋಧನನದಾವುದ ನೋಡಿ ಸಲಹಿದನು |

---

[1] ನೀನಿರೆ ವಿನಯವಿತ್ತಂಡ (ಕ ಮ), ನೀನೀ ಧರೆಗೆ ಮೊದಲಿಗನು (ಝ), ನಿನಗೀ ವಿಧಿಯು ತಾನೇಕೆ (ಬ) [2] ಬಗೆಯ ನೀ (ಕ ರ ಮ), ಹೊಗೆನುಡಿಯ (ಗ ಡ ಣ ನ ಪ) [3] ನನುಚಿತದಾಯವದು ಪಾಂಡವರು ತಮ್ಮದಿರೀಯುಭಯ ರಾಯರಲಿ ಪಟ್ಟಕೆ (ಖ ಬ), ಕಮಲದಳಾಯತಾಂಬಕ ಷೇಳ್ದನಿಂದೀ ದಾಯಿಗರೊಳಿರ್ವರಿಗೆ ಪಟ್ಟಕೆ (ಚ) [4] ನಾನಹೆನು (ಖ ದ), ನಾನಹುದು (ಡ ಣ ಪ) [5] ನ (ಕ ಬ ಮ) [6] ಲಂಜು (ಕ ಖ ಮ) [7] ಘ್ನರಿ (ಖ ಗ ದ ಪ) [8] ರಿಗಾ ಹಿರಿಯನಿದು (ಗ ಚ ಡ ಣ ಪ ಬ) [9] ಮಾತಂತಿರಲಿ (ಖ), ಮಾತಲೆ ತಾಯೆ (ಗ ಣ), ತಿದು ಮಾತೆ (ಟ)

ಬಂದು ಪಾಂಡವರೊಡನೆ ಕೂಡಿದ
[1]ಡಿಂದು ನಗದೇ ಲೋಕವಂತಿರ[1]
[2]ಲಂದು ನಿಮ್ಮಡಿ ಬಂದ ಕಾರ್ಯವ ಬೆಸಸಿ ಸಾಕೆಂದ[2] ॥೩೫॥

ಆದಡೈವರುಮಕ್ಕಳನು ತಲೆ
ಗಾದು [3]ತೋಯ್ಯೆ ಕಂದ ನಿನಗೇ
ನೀ ದುರಾಗ್ರಹವೊಪ್ಪುವುದೆ ಕೌರವನ [4]ಸೇವೆಯಲಿ[4] ।
ಹೋದ ಬಾಣವ ಮರಳಿ ತೊಡದಿರು
ಮಾಡುಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಂಡನು ಬಂದನರಮನೆಗೆ ॥೩೬॥

ಹತ್ತನೆಯ ಸಂಧಿ ಮುಗಿದುದು.

---

[1] ರಿಂದು ಬಹುದಪಕೀರ್ತಿ ನಿಮ್ಮಡಿ (ಗ ಟ ಡ ಣ ಪ), ನೆಂದು ನಗದೇ ಲೋಕವಂತಿರ (ಚ ಬ), ರಿಂದು ಜಸ ಮಾಸದೆಯದಂತಿರ (ರ ನ) [2] ಬಂದ ಕಾರ್ಯವ ಬೆಸಸಿ ಬೇಗದೊಳೆಂದನಾ ಕರ್ಣ (ಗ ಟ ಡ ಣ ಪ) [3] ಕೊಡುವುದು ಕಂದ ಕೇಳ್ ನಿನಗೀ (ಟ ಬ), ತೋಯ್ಯೆ - ಕಂದ ನಿನಗಿಂತೀ (ದ) [4] ಕಟಕದಲಿ (ಕ ಮ), ಸೀಮೆಯಲಿ (ಟ ಡ ದ ನ ಪ)

# ಹನ್ನೊಂದನೆಯ ಸಂಧಿ

॥ಸೂಚನೆ॥ ಅವನಿಯದಿಱಿತು ಗಗನ ತಾರಾ
ನಿವಹವನು ಬಿದಿಱಿತ್ತು ವರಪಾಂ
ಡವರು ಕಳನೊಳು ಘೂರ್ಣಿಸಿದರು ಕಮಠ ಘೂರ್ಣಿಸೆ ॥

ಕೇಳು ಜನಮೇಜಯಧರಿತ್ರೀ
ಪಾಲ ಸಂಧಿಯು ಮುಱಿದು ಲಕ್ಷ್ಮೀ
ಲೋಲನೈತರುತಿವರ ಹೊರೆಗಟ್ಟಿದನು ಸಾತ್ಯಕಿಯು ।
ಕೇಳಿದರು ಮುರಹರನ ಬರವನು
ಮೌಳಿಮಸ್ತಕದಖಿಳಧರಣೀ
ಪಾಲರಂದಿದಿರಾಗಿ ಬಂದರು ಸಕಲ[1]ದಳ[1]ಸಹಿತ ॥೧॥

ದೂರದಲಿ ದುಮ್ಮಾನಿಸಿದ ವದ
ನಾರವಿಂದವ ಕಂಡು ಸಂಧಿ[2]ಗೆ[2]
ಸೇರರವದಿರು ಬಲಿದುದಾಹವವೀತ[3]ನಿರವಿನಲಿ[3] ।
ಶೌರಿಗಾಯ್ತವಮಾನವಿದಲೇ
ಮಾರಿ[4]ಗುತ್ಸವ[4]ವೆನುತ ಬಂದನು
ಮಾರುತನಮಗನಸುರಮರ್ದನನಿಂಗಿತವನಱಿದು ॥೨॥

ದರುಶನವ ನೀಡಿದ[5]ರು[5] ಕೃಷ್ಣನ
ಚರಣದಲಿ ಮೈಯಿಕ್ಕಿದ[5]ರು[5] ವಿ
ಕ್ಕರಸುಗಳು ದ್ರುಪದಾದಿ[6]ನಾಯಕ[6]ರೆಱಗಿದರು ಪದಕೆ ।
ಪರಮಬಾಂಧವರೆಲ್ಲ ಜೀವಂ
ತರೆ ನದೀಸುತ ವಿದುರ ಗುರು ಕೃಪ
ಗುರುತನುಜ ಧೃತರಾಷ್ಟ್ರರೆಂದನು ಧರ್ಮನಂದನನು ॥೩॥

---

[1] ಜನ (ಕ ಮ), ಬಲ (ಟ). [2] ಯ (ಖ ಙ ಬ) [3] ನಂಗದಲ (ಕ ಮ) ನಿದಿರಿನಲ (ಖ ಝ ಟ ಠ ಣ), ನಳವಿಯಲಿ (ಙ, ಬ) [4] ಗೌತಣ (ಕ ಮ), [5] ನು (ಗ ಟ, ಡ ಣ) [6] ಬಾಂಧವ (ಚ).

ಭೂಮಿಪತಿ ನಿಜಬಾಂಧವರು ಸು
ಕ್ಷೇಮಿಗಳು ತಾವೆಲ್ಲ ನಿಮ್ಮಯ
ಕ್ಷೇಮ[1]ಕುಶಲವ[1] ಕೇಳಿದರು ಕಳುಹಿದ[2]ರು[2] ಹರಕೆಗಳ ।
ಆ ಮಹಾಸಂಗ್ರಾಮಮುಖದಲಿ
ತೋಮರದ ಕಾಣಿಕೆಗಳಲಿ ಸು
ಪ್ರೇಮವನು [3]ಬಳಸು[3]ವುದು ದುರ್ಯೋಧನನ ಮತವೆಂದ ॥೪॥

ಭೂಮಿಯೊಳಗರ್ಧವನು ಬೇಡಿದ
ಡಾ [4]ಮಹಿಪ ನಿಮ್ಮೈ[4]ವರಿಗೆ ಸಂ
ಗ್ರಾಮಭೂಮಿಯನೈದೆ ಕೊಟ್ಟನು ನಿಮ್ಮೊಳಪ್ರಿಯ[5]ನೆ[5] ।
ಸಾಮದಲಿ [6]ಸೊಗಸಿಲ್ಲ[6] ನೀವ್ ನಿ
ಸ್ಸೀಮರಾದಡೆ [7]ಹೂಡಿಸುವುದು[7]
ದ್ದಾಮಕುರುಭೂಮಿಯಲಿ [8]ಬಲಸಹಿತ[8]ವರ ಪತಿಕರಿಸಿ ॥೫॥

ಮುನಿದಡೆಯು ನಿಮ್ಮೊಳಗೆ ನೀವೇ
ಮನಕತವ ಮಾಡುವಿರಿಯಗ್ರಜ
ರನುಜರಲಿ ಕದಡಾದಡುಪಶಮಿಸುವುದು ನಿಮ್ಮೊಳಗೆ ।
ಎನಗೆ ನಿಮ್ಮಯ ದೂಸಱಿಂದಾ
[9]ಯ್ತು[9]ನಿತುಸಭೆಯಲಿ ಮಾನಹಾನಿಗ
ಳೆನಲು ನೊಂದನು ಧರ್ಮಸುತ [10]ತಾ ನಗುತಲಿಂತಂದ[10] ॥೬॥

ಮುಳಿದು ಸುರಗಿಯನುಗಿದು ಗಗನ[11]ಕೆ[11]
ನಿಲುಕಿ ಮಾಡುವುದೇನು ನಿಮ್ಮಡಿ
ಗಳಿಗೆ ತಪ್ಪಿದ [12]ತರಳರಖಿಳವ್ಯಾಪ್ತಿಗೇಗುವುದು[12] ।
ಖಳರು ಮಾಡಿದ ಖತಿಯ[13]ನೆಮ್ಮೊಳು[13]
ತಿಳಿದು ಮಱೆಯಲುಬೇಕು ಕರುಣಾ
ಜಲಧಿ ನೀವೆಂದಂಘ್ರಿ[14]ಗಳ ಹಿಡಿದನು ಯುಧಿಷ್ಠಿರನು[14] ॥೭॥

---

[1] ವನು (ಗ) [2] ರವರು (ಗ) [3] ಬೆಸಸು (ಕ ಖ ಚ ಮ) [4] ಮಹೀಪತಿಯೈ (ರ ಡ ಪ) [5] ನು (ಕ ವ) [6] ಹುರುಳಿಲ್ಲ (ಚ ಬ) [7] ಹರಿವುದಿನ್ನು (ಗ ಟ ಡ ದ ನ ಪ) [8] ಕುಳವಱಿದ (ಕ ಬ ಮ), ಕುಳಸಹಿತ (ಚ) [9] ಯ್ತು (ಖ ಗ ಚ ಟ ಪ) [10] ನಿಂತೆಂದ ನಸುನಗುತ (ಗ ಡ ಣ ದ ಬ) [11] ವ (ಗ) [12] ದುರುಳರಖಿಳವ್ಯಾಪ್ತಿಗೈದುವರು (ಖ ಚ) [13] ನೆನ್ನಲಿ (ಚ ರ ಬ) [14] ಗೆಱಗಿದನಂದು ಯಮಸೂನು (ಬ)

ಬಱಿದೆ ಕಾಡದಿರೇಳು ಮನದಲಿ
ಮಱೆದೆವಾಗಳೆ ಕೌರವರು ಮುಂ
ದಱಿಯದ[1]ವಗಡಿ[1]ಸಿದರು ಹೋಗಲಿಯೆಮ್ಮ[2]ದೂಱೇಕೆ[2] ।
ನೆಱೆವಣಿಗೆಯುಂಟಾದಡಿಂದಿನ
ಮಱುದಿವಸ ಸಂಗ್ರಾಮ [3]ಸ್ವೈರಿಸ
ಲ[3]ಱಿಯರವದಿರು ನಡೆ ಕುರುಕ್ಷೇತ್ರಕ್ಕೆ [1]ನೀನೆಂದ[4] ॥೮॥

ಹಾನಿಯನು [5]ತಾ[5] ಹೊತ್ತು ಭೃತ್ಯರ
ಮಾನವನು ಪತಿಕರಿಸಬೇಹುದು
ತಾನೊಡೆಯನಾದಂಗೆ ಗುಣವೆಮ್ಮೊಡೆಯ ನೀನಾಗಿ ।
ಮಾನಭಂಗವ ಧರಿಸಿಯೆ[6]ಮ್ಮ[6]ಭಿ
ಮಾನವನು ನೀ[7]ನುಳುಹಿದ್ಯೆ[7] ಸಂ
ಧಾನವನು ಸೇರಿಸದೆ ಸಲಹಿದೆಯೆಂದನಾ ಭೀಮ ॥೯॥

ಮಾರಿಯಱಕೆಗಳಡಗದಂತಕ
ನೂರು ತುಂಬದೆ ಶಾಕಿನಿಯರೊಡ
ಲೋರೆ ನನೆಯದೆ ಡಾಕಿನಿಯ [8]ತನು ಸೊಕ್ಕಿ[8] ಸಾಲಿಡದೆ ।
ಕೌರವನ ತನಿಗರುಳದಂಡೆಯು
ತೋರಣದ ಬಾಗಿಲಲಿ ವಿಭವದಿ
ವಾರಣಾ[9]ಹ್ವಯ[9]ನಗರಿಯನು ಹೊಗದಿಹೆನೆ [10]ನೋಡೆಂದ[10] ॥೧೦॥

ತೋಱು ನಡೆ ಗಜಬಜಿಸ[11]ಲೇಕಿ[11]
ನ್ನಾಱುತಿಂಗಳೆ ನಾಳೆ [12]ಪಯಣಕೆ[12]
ಸಾಱಿಸೇಳೆಂ[13]ದೆನಲು[13]ಪಪ್ಲವ್ಯಕ್ಕೆ ನಡೆ[14]ತಂದು[14] ।
ಬೇಱೆಬೇಱವನೀಶರಿಗೆ ಮಣಿ
ಹಾಱರನು ಕಳುಹಿದ[15]ರು[15] ಕೃಷ್ಣನ
ದೂಱು ಬರಲಳವಡಿಸಿದರು ಸಂಗ್ರಾಮಸಾಧನವ ॥೧೧॥

---

[1] ನುಕರಿ (ಖ ಚ ಬ) [2] ನುಡಿಯೇಕೆ (ಖ ಪ), ಮಾತೇಕೆ (ಮ) [3] ವ್ಯೆ ಸರಯು (ಗ) [4] ವಹಿಲದಲಿ (ಖ ಪ ದ), ಬೇಗದಲಿ (ಚ ಬ) [5] ನೀ ((ಕ ಖ ರ ಮ) [6] ನ್ನ (ಕ ಡ ಪ ಮ) [7] ನಿಲಿಸಿದ್ಯೆ (ಕ ಮ), ಸಲಹಿದ್ಯೆ (ಗ) [8] ರಿಗೆ ಡೊಳ್ಳು (ಟ ಡ ದ ನ ರ) [9] ವತ (ಕ ಮ) [10] ತಾನೆಂದ (ಗ ಚ ಟ ಠ), ನಾನೆಂದ (ಡ ನ), ಹೇಳೆಂದ (ಣ ದ ಛ) [11] ದೇಡಿ (ಗ ಮ) [12] ಸಮರಕೆ (ಬ) [13] ದವರು (ಚ ರ ಬ) [14] ತರಲು (ಕ ಖ ರ ಮ) [15] ನು (ಗ ದ ಪ ಮ)

ಗುಡಿಯ ಮಂಡವಿಗೆಗಳ ಹೊಱಗೆಗ
[1]ಳೊಡನೊಡನೆ[1] ಸಂಭ್ರಮಿಸಿದವು ಬಱ
ಸಿಡಿಲು ಬೊಬ್ಬಿಡುವಂತೆ ಮಸೆದವು ಕೂಡೆ ಕೈದುಗಳು ।
ತಡಿಯ ಬಲಿಸುವ ಗುಳವ ಱೆಂಚೆಯು
ಗಡಣಿಸುವ ಬಲು[2]ಗೀಲ ಗಾಲಿಯು[2]
ತೊಡಿಸುವುತ್ಸವವಾಯ್ತು ಪಪ್ಲವ್ಯದಲಿ ರಭಸದಲಿ ॥೧೨॥

ಹಿಳುಕ ತಿದ್ದುವ ಬಿಲ್ಲ ಬಾಗಿನ
ಹೊಳಹನೊಯ್ಯಾರಿಸುವ ಮಾರ್ತಿರು
ಗಳನು ಜೋಡಿಸುವಖಿಳಕೈದುವ ಮಸೆವ [3]ಮಂಡಳಿಯು[3] ।
ಕಳಕಳಿಕೆ ಬಲುಹಾಯ್ತು ರಾವುತ
ರಲಿ ಗಜಾರೋಹಕರ ರಥಿಕಾ
ವಳಿ[4]ಯುಲ[4]ವರವರಂಗದಲಿ ಸಂವರಣೆಯೊಪ್ಪಿದವು ॥೧೩॥

ಜೋಳಿ ಹರಿದುದು ದೆಸೆದೆಸೆ[5]ಯ[5] ಭೂ
ಪಾಲರಿಗೆ ರಾಯಸದ ಹದನನು
ಕೇಳಿದಾಗಲೆ [6]ಕವಿ[6]ದು ಬಂ[7]ದರು ತಮ್ಮ[7] ದಳಸಹಿತ ।
ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳವಂದಿನ ಮಱುದಿವಸ [8]ವೈ
ಹಾಳಿಯನು ಹೊಱವಂಟರನಿಬರು[8] ದೈತ್ಯರಿಪುಸಹಿತ ॥೧೪॥

ಎಲೆಲೆ ನೆಲ ಬೆಸಲಾದುದೆನೆ ಬಲು
ದಳದ ತೆರಳಿಕೆ ತೀವಿತವನಿಯ
ತಳಪಟದ ಹಬ್ಬುಗೆಯಲಬ್ಬರಿಸಿದವು ಬೊಬ್ಬೆಗಳು ।
ತಲೆವೊಱೆಯ [9]ತೂಕ[9]ದಲ ಫಣಿಪತಿ
[10]ಯುಳುಕೆ ತೊಟ್ಟನು[10] ತರಣಿ ಸೇನೋ
ಚ್ಚಳಿತಧೂಳಿಯ ಝುಗೆಯ[11]ಲ[11]ದ್ಭುತವಾಯ್ತು ದೆಖ್ಖಾಳ ॥೧೫॥

---

[1] ಳಡಿಗಡಿಗೆ (ಗ) [2] ಗೀಲಗಾಲಿಗೆ (ಕ ಬ ಮ), ಕೀಲುಗಳ ಮಿಗೆ (ಖ), ಹಿನಲಿ ಗಾಲಿಯು (ಟ ಯ ರ) [3] ಬಲುರವದ (ಬ) [4] ಗಳ (ಗ ಟ ಡ ಪ ರ) [5] ಗೆ (ಕ ಮ). [6] ಹರಿ (ಕ ಖ ಗ ಪ ಬ ಮ) [7] ದುದು ಸಕಳ (ಝ) [8] ದೆಖ್ಖಾಳವನು ನೋಡಿದರು ಹೊರಟರು (ಚ) [9] ಧಾರ (ಕ ಗ. ಟ ಣ ಮ) [10] ಬಳುಕಿದನೊಯೆನೆ (ಖ), ಯುಳುಕಬಗೆದನು (ಟ ದ ಬ), ಬ್ಳುಕೆ ತೊಟ್ಟನು(ಡ ಪ ರ) [11] ನ (ಖ.ಗ.ರ ಡ ಪ ರ)

ಹಣಿಲ ಹಾಹೆಯ ಬಿರುದುಗಳ ಡಾ
ವಣಿಯ ನಾಯಕವಾಡಿಗಳ ಸಂ
ದಣಿಯ [1]ಸುಕರದ ಕೈದುಗಳ ವರ[1]ವೀರನೂಪುರದ ।
ಕುಣಿವ ಸುಭಟರ ಪಳ[2]ಹರದ[2] ಡೊಂ
ಕಣಿಯ ಖೇಟಕ ಖಡ್ಗ ಬಲುಬಿಲು
ಗಣಿಯ [3]ಕಳರವಸನ್ನೆಯಲಿ[3] ಕಾಲಾಳ ನೋಡಿದರು ॥೧೬॥

* ಥಳಥಳಿಪ ಸೂನಿಗೆಯ ಮುಮ್ಮೊನೆ
ಗಳ ರಥಾಂಗದ ಮೇಲು ಪಸರದ
ಪಳಹರದ ಖುರಗತಿಯ ಜೋಡ ಜವಾಯ್ಲ [4]ಕುದುರೆ[4]ಗಳ ।
ಬಲಿದ ಬದ್ಧರದೊಟ್ಟಿದಂಬಿನ
ಹೊಳೆವ ಹೊದೆಗಳ ಸೂತರುರವಣಿ
ಗಳ ಸುರೇಖೆಯ ಗತಿಯ ರಥ[5]ರಾ[5]ಜಿಗಳ ನೋಡಿದರು ॥೧೭॥

ಅಳವಿಗೊಟ್ಟರೆ ರವಿಯ ತುರಗವ
ನುಳುಹಿ ಮುಂಚುವ ಜವ[6]ನ[6] ನೊಸಲಲಿ
ಹೊಳೆವ ಕನ್ನಡಿಗಳ ಖುರಾಂತದ [7]ಜಡಿವ ಜೋಡು[7]ಗಳ ।
ಬಿಳಿಯ ಚೌರಿಯ ಝುಲ್ಲಗಳ ಹ
ತ್ತಳದ ರಾ[8]ವ್ತರ ಸನ್ನೆಯಲಿ[8] ನೆಲ
ನಲುಗೆ ನಿಗುರುವ ನಿಲುವ ನಿರು[9]ಪಮ[9] ಹಯವ ನೋಡಿದರು ॥೧೮॥

ಶೈಲದೆಡಬಲದೊಱತೆಯೆನಲು ಕ
ಪೋಲದಲಿ [10]ದಾರಿ[10]ಡುವ ಮದಜಲ
ಸಾಲುಗಳ ಭರಿಕ್ಕೈಯ ಲೌಡಿಯ ವಜ್ರಮುಷ್ಟಿಗಳ ।
ನಾಳಿವಿಲುಗಳ ರಾಯಜೋಧರ
ಮೇಳವಣಿಗಳ ಚಿತ್ರಗತಿ ಶುಂ
ಡಾಲವನು ನೋಡಿದರು ಗಜಸೇನಾಸಮುದ್ರದಲಿ ॥೧೯॥

---

[1] ಸುಭಟರ ಕಾಲ ತೊಡರಿನ (ಕ ಮ) [2] ರವದ (ಕ ಝ ರ ಮ). [3] ಸಂಚಿಯ ತಳವರಲ (ಖ), ಸಂಚಿಯ ಹಳುವದಲ (ಚ ಝ ಣ), ಸಂಚಿಯ ಕೈತವದ (ಬ) [4] ತೇಜಿ (ಖ ಚ ಝ), ವಾಜಿ (ಬ) [5] ವಾ (ಕ ಖ ಚ ಬ ಮ) [6] ದ (ಚ ಟ ಡ ದ ನ) [7] ಜೋಡು ಜೋಡಿ (ಗ ಚ ರ ಣ ದ ನ ಬ) [8] ವ್ತರು ಸರಿಸದಲ (ಕ ಖ ಚ ಬ ಮ), ವುತ ಸನ್ನೆಯಲ (ಗ ಟ) [9] ತದ (ಕ ಖ ಗ ಪ ಬ ಮ) [10] ಸಾಲ (ಣ)

* (ಗ ಟ ಡ ದ ನ ಪ ರ) ಪ್ರತಿಗಳಲ್ಲ ೧೭ನೆಯ ಪದ್ಯವು ೧೯ನೆಯ ಪದ್ಯವಾದಮೇಲೆ ಇದೆ

ಅವನಿಪಾಲರ ಮಕುಟಮಣಿಗಳ
ನಿವಹ[1]ವೆ[1]ತ್ತಿದ ಖಡ್ಗಪರಶುಗ
ಳವಿರಳದ ತೆರೆಗಳ ಪತಾಕಾವಳಿಯ ಬಲುನೊರೆಯ ।
ವಿವಿಧ ಗಜಹಯ ಜಲಚರೌಘದ
ಪವನಜನ ಕೈಸನ್ನೆಗಳ ಘನ
ಪವನ[2]ಹ[3]ತಿಯಲಿ ಲಹರಿ ಮಸಗಿತು ಬಹಳಬಲಜಲಧಿ ॥೨೦॥

ಹರಿಯುಧಿಷ್ಠಿರರೊಂದು ಗಜಕಂ
ಧರದೊಳಿರ್ದರು ನಿಖಿಳಸೇನೆಯ
ತೆರಳಿಕೆಯ ತೋಱಿಸುತ ಬಂದರು ಭೀಮಫಲುಗುಣರು ।
ಬಿರುದಧೃಷ್ಟದ್ಯುಮ್ನ ಮೊದಲಾ
ಗಿರೆ ಕುತೂಹಲದ್ರುಪದ ಭೂವರ
ನುರವಣಿಸಿ ತೋಱಿಸಿದನೊಂದಕ್ಷೌಹಿಣೀಬಲವ ॥೨೧॥

ವರಯುಧಾಮನ್ಯೂತ್ತಮೌಜಸ
ರುರುಶಿಖಂಡಿ ಸುಚೇಕಿತಾನರು
ಧುರಧುರಂಧರ ವೀರಪಾಂಚಾಲಕ್ಷಿತೀಶ್ವರರು ।
ತುರುಕರುರುಸಾಹಣ ಸಮುದ್ರರು
ಮರು ಯವನ ಖುರಸಹಣ ಕಾಶೀ
ಶ್ವರರ ಥಟ್ಟು[3]ಕ್ಷೌಹಿಣಿಯ ತೋಱಿದನು ಪಾಂಚಾಲ[3] ॥೨೨॥

ವರವಿರಾಟನು ಕಂಬುನೃಪನು
ತ್ತರ ಶತದ್ಯುಮ್ನಕನು ಶತಚಂ
ದ್ರರು ಶತಾನೀಕರು ಶತಾಯುಧರೆನಿಪ ಮತ್ಸ್ಯಪರು ।
ತುರಗ ಗಜ ರಥ ಪಾಯದಳಸಾ
ಗರದ ಸೌರಂಭದಲಿ ನಿಜಸಂ
ವರಣೆಯನು ತೋಱಿದರು ತಮ್ಮಕ್ಷೌಹಿಣೀಬಲವ ॥೨೩॥

---

[1] ಕೆ (ಕ ಣ ಮ) [2] ಗ (ಖ ಚ ಟ ಡ ದ ಬ ರ) [3] ನು ತೋಱಿದನು ಧರ್ಮ
ಜಗೆ ಪಾಂಚಾಲ (ಚ), ನು ತೋಱಿದನು ಪಾಂಚಾಲಭೂಪಾಲ (ಬ)

ಜಯಸಮರಸಾಮಗ್ರಬಲ ಕೈ
ಕಯನೃಪಾಲರು [1]ತವ್ಮೊಳ[1]ಕ್ಷೋ
ಣಿಯನು ತೋಱಿದರಂದು ಗಜಕಂಧರದ ಭೂಪತಿಗೆ ।
ಭಯವಿಹೀನನು ಪಾಂಡ್ಯನೃಪ ಸೃಂ
ಜಯನು ಸೋಮಕಭೂಪರಕ್ಷೋ
ಣಿಯನು ತೋಱಿದರವನಿ ಕುಸಿದುದು ದಳದ [2]ಪದಹತಿಗೆ[2] ॥೨೪॥

ಚೇದಿದೇಶದ ಧೃಷ್ಟಕೇತು ಬ
ಲೋದದಧಿಯನಕ್ಷೌಹಿಣಿಯ [3]ವೊದ[3]
ಲಾದು[4]ದೆನೆ[4] ತೋಱಿದನು ಕುಂತೀಭೋಜನಕ್ಷೋಣಿ ।
ಆದುದೇಳಕ್ಷೋಣಿಬಲ [5]ಬೇ
ಱೂ[5]ದ [6]ನಾಯಕವಾಡಿಯಲಿ[6] ಹಿರಿ
ದಾದುದಾಹವಸೇನೆ ಗೋಚರವಲ್ಲ [7]ಗಣಿಸುವಡೆ[7] ॥೨೫॥

ಕ್ಷತ್ರ[8]ಧ[8]ರ್ಮನು ನೀಲನು ಬೃಹ
ತ್ಕ್ಷತ್ರ [9]ಸೂರ್ಯಧ್ವಜ ಸು[9]ವ[10]ರ್ಚಸ[10]
ಚಿತ್ರವರ್ಮ ಹಿರಣ್ಯವರ್ಮನು ಚಾರುಚೇಷ್ಟಕನು ।
ಶತ್ರುಮಥನನು ವಿಂಧ್ಯಗಿರಿಯ ಸು
ಹೋತ್ರನನ್ವಯದವರು ಪಾಂಡವ
ಮಿತ್ರರೊದಗಿತು ಕೇಳು ಜನಮೇಜಯಮಹೀಪಾಲ ॥೨೬॥

ವೀರಪಾರ್ಥಂಗಿರುಳು ಸೋತಂ
ಗಾರವರ್ಮನು ಗಗನಚರಪರಿ
ವಾರ ಬಹುಳದಿ ಬಂದು ಕಂಡನು ಕಲಿಯುಧಿಷ್ಠಿರನ ।
ಕೌರವೇಂದ್ರನನೊಯ್ದ [11]ಸಮರಸು
ಧೀರ ಸಾಹಸಿ ಚಿತ್ರಸೇನನು
ವಾರಗುಣನಿಧಿ ಬಂದು[11] ಕಂಡನು ಮಿತ್ರಭಾವದಲಿ ॥೨೭॥

---

[1] ಬಂದರ (ಖ) [2] ಖುರಪುಟಕೆ (ಖ ಬ) [3] ಹೋ (ಚ ರ ಡ ನ ಪ) [4] ದನು (ಚ ಟ ದ ನ ಪ) [5] ಮೇಲಾ (ಟ ಡ ನ ಪ) [6] ದಳನಾಯಕರು ನೆಱೆ (ಗ) [7] ಗಡಣಿಸಲು (ಕ ಮ), ಹೊಗಳುವರೆ (ಚ ರ) [8] ವ (ಗ ಚ ರ ಡ ಣ ರ) [9] ಶೌರಿಯ ತನುಜ (ಕ ಬ ಮ) [10] ತ್ಸಲ (ಕ ಬ ಮ), ರ್ಚಕ (ಖ ಟ ದ) [11] ಸಮರೋದ್ಧಾರ ಚಿತ್ರಾಂಗದನು ಸೇನಾಧಾರದಲಿ ಬಂದಿವರ (ಗ ಟ ದ ನ ಬ ರ)

ಕಾರಿರುಳ ಪಟ್ಟಣಕೆ ಚಂದ್ರನ
ತೋರಣವ ಬಿಗಿದಂತೆ ದಾಡೆಗ
ಳೋರಣದ ಹೊಳಹುಗಳ ಹೊಗರಿಡುವೊಡಲ ಕಪ್ಪುಗಳ।
ಭಾರಿದೇಹನು ಭಟಭಯಂಕರ
ತೋರಹತ್ತನು ದೈತ್ಯಮಯಪುರಿ
ವಾರಬಹುಳದಿ ಬಂದು ಕಂಡನು ಕಲಿಘಟೋತ್ಕಚನು ॥೨೮॥

* ಬಲದ ದೆಖ್ಖಾಳವನು ನೋಡಿದ
ರೊಲವಿನಲಿ [1]ನಿಜಸೇನೆ[1]ಸಹಿತತಿ
ಬಲರುಪಪ್ಲವ್ಯಕ್ಕೆ ಬಂದರು ಹೊಕ್ಕರಾಲಯುವ।
ಬಳಿಕ ಸುಮುಹೂರ್ತದಲಿ ಹೊಱಗುಡಿ
ಗಳನು ಹೊಯ್ಸಿದರಂದು ಯದುಕುಲ
ತಿಲಕ [2]ಗದುಗಿನ ವೀರನಾರಾಯಣನ ನೇಮದಲಿ[2] ॥೨೯॥

ಪರಿಮಿತಕೆ ತನ್ನಾಪ್ತಸಚಿವರ
ಕರಸಿಕೊಂಡನು ಕೃಷ್ಣರಾಯಂ
ಗರಸ ಬಿನ್ನಹಮಾಡಿದನು [3]ನೃಪ[3]ಕಾರ್ಯಸಂಗತಿಯ।
ಧುರಕೆ ಸೇನಾನಾಥ[4]ನಿ[4]ಲ್ಲದೆ
ನೆರೆದ ಬಲ ಸಾಲಱುಹೆ ಮುಱಿದರೆ
ಹರೆವವೊಲು ಹುರುಳಿಲ್ಲ ದಳ[5]ಪತಿ[5]ಯಾವನಹನೆಂದ ॥೩೦॥

ದ್ರುಪದನಾಗಲಿಯೆಂದು ಕೆಲಬರು
ವಿಪುಳಬಲನು ವಿರಾಟನಾಗಲಿ
ನೃಪಶಿಖಂಡಿಯೆ ಎಂದು ಕೆಲಬರು ಭೀಮಸುತನೆಂದು।
ಅಪರಿಮಿತಮತವಾಗೆ ಸಮರ
ವ್ಯಪಗತಾರಿ ಸುರೇಂದ್ರಸುತನೀ
ದ್ರುಪದಸುತ ಸೇನಾಧಿಪತಿಯಹುದೆ[6]ನ್ನ[6] ಮತವೆಂದ ॥೩೧॥

---

[1] ಮುರವೈರಿ (ಝ ಟ ಡ ದ ನ ಪ) [2] ಸಹಿತಾಳೋಚನೆಯ ಮಾಡಿದರು ಹರುಷದಲಿ (ಕ ಮ) [3] ನಿಜ (ಬ) [4] ರಿ (ಖ ಟ ಣ ಬ ರ) [5] ವಾಯ್ (ಗ ಝ) ಪ್ರತಿಗಳನ್ನು ಬಿಟ್ಟು ಉಳಿದಪ್ರತಿಗಳಲ್ಲಿದೆ [6] ಮ್ಮ (ಕ ಖ ಡ ಪ ಬ ಮ)

* (ಗ ಣ) ಪ್ರತಿಗಳಲ್ಲಿ ೨೯ನೆಯ ಪದ್ಯವಿಲ್ಲ (ಣ) ಪ್ರತಿಯಲ್ಲಿ ಇಲ್ಲಿಗೆ ೧೨ನೆಯ ಸಂಧಿ ಮುಗಿದು ಬೇರೆ ಸೂಚನೆ ಪದ್ಯವಿದ್ದು ೧೩ನೆಯ ಸಂಧಿಯು ೩೦ನೆಯ ಪದ್ಯದಿಂದ ಆರಂಭವಾಗಿದೆ

ಬಿಂಬವನು ಬೇಱುರಿಸಿ ಬಹುಮತ
ವೆಂಬ ಬಿಸಿಲಲಿ ರಾಜನಯವೆಂ
ದೆಂಬ ನೈದಿಲು [1]ನಲವು[1]ಗೆಟ್ಟಿದೆ ಕೃಷ್ಣ ಹೇಳೆನಲು ।
ಎಂಬು[2]ದೇನಿನ್ನಿಲ್ಲ[2] ಸುಭಟಕ
ದಂಬದಧಿಪತಿತನಕೆ ಫಲುಗುಣ
ನೆಂಬ ಮಾತೆಮ್ಮಭಿಮತವು ಭೂಪಾಲ ಕೇಳೆಂದ ॥೩೨॥

ಕರ[3]ಸಿ[3] ಧೃಷ್ಟದ್ಯುಮ್ನನನು ಸಂ
ಗರ[4]ಕೆ[4] ಸೇನಾಪತ್ಯವನು ವಿ
ಸ್ತ[5]ರದ[5]ಲಳವಡಿಸಿದರು ಸುಮುಹೂರ್ತದಿ ಸರಾಗದಲಿ ।
ಪುರದೊಳಗೆ ಗುಡಿ ನೆಗಹಿದವು ಭೂ
ಸುರರ ವಿಮಳಾಮ್ನಾಯ[6]ರವ ವಿ
ಸ್ತರಿಸಲಳವಡಿ[6]ಸಿದರು ಮಂಗಳವಿಹಿತ ವಸ್ತುಗಳ ॥೩೩॥

ಸೂಳವಿಸಿದವು ಕಟಕದಲಿ ನಿ
ಸ್ಸಾಳಕೋಟಿಗಳಲ್ಲಿಱಿಯೆ ಹೆ
ಗ್ಗಾಳೆಗಳು ಸಾಱಿದವು ಭಟರುಬ್ಬಟೆಯ ಬಿರುದುಗಳ ।
ಬಾಲಕಿಯರಾರತಿಯ [7]ತಳಿಗೆಗ
ಳೋ[7]ಳಿ ಸಂದಣಿಸಿದವು ವರಪಾಂ
ಚಾಲ[8]ತನುಜಂ[8]ಗೆಸಗಿದರು ಮೂರ್ಧಾಭಿಷೇಚನವ ॥೩೪॥

ದರುಶನವನಿತ್ತಖಿಳ[9]ಧರಣೀ[9]
ಶ್ವರರು ಕಂಡರು ಸೂತ ಮಾಗಧ
ವರವಿಬುಧ ವೈತಾಳಿಕರ ಕಾರ್ಪಣ್ಯವಡಗಿದವು ।
ಧುರಕೆ ಧೃಷ್ಟದ್ಯುಮ್ನನಾಜ್ಞೆಯೊ
ಳಿರವು ನಿಮಗೆಂದೈದೆ ಭೂಪಾ
ಲರ ನಿವಾ[10]ಸಂಗಳಲಿ ಹೊಯ್ಸಿದರಂದು[10] ಡಂಗುರವ ॥೩೫॥

---

[1] ನಿಲುವು (ಖ), ನಯವು (ತ ನ) [2] ದೇ ನಿಮ್ಮಿಷ್ಟ (ಕ ಮ), ದಿನ್ನೇ ನಿಲ್ಲಿ (ಖ), ದೇ ನೀನಿಲ್ಲಿ (ಚ ಚ ಣ ದ ನ ಬ), ದೇನಿನಿತಿಲ್ಲಿ (ರ), ದೇ ನಿನ್ನಲ್ಲಿ (ಡ ರ), ದೇನನು ನಿಲಲಿ (ತ) [3] ದು (ಕ ಖ ರ ಮ) [4] ದ (ಕ ಖ ಮ) [5] ರಿಸ (ಗ ಚ ಟ ದ ಬ) [6] ರವದಬ್ಬರದಿ ಸಂವರಿ (ಣ), ದಲಿ ಸಂವರಿಸಿ ನಡಗರಿ (ಟ ದ ಬ) [7] ಹರಿಯಣದೋ (ಕ ಖ) [8] ರಾಯಂ (ಕ ಖ ಬ) [9] ಧೂಮಿಾ (ಕ ತ). [10] ಸದೊಳಂದು ಮಿಗೆ ಹೊಯ್ಸಿದರು (ಕ ಮ)

* ರೂಢಿಸಿದ ಸುಮುಹೂರ್ತದಲಿ ಹೊಱ
ಬೀಡ ಬಿಟ್ಟರು [1]ರಣಕೆ[1] ಪಯಣವ
ಮಾಡಲೋಸುಗ ಸಾಱಿದರು ನೃಪಪಾಳಯಂಗಳಲಿ ।
ಕೂಡಿತಾಹವಸೈನ್ಯಸಾಗರ
ವೀಡಿಱಿದು ನಡೆಗೊಂಡು [2]ದಭ್ರದ
ರೂಢಿಗಳ[2] ಜೋ[3]ಡಿಗಳ ಜೋಕೆಯ[3] ಘನ[4]ರವಂಗಳಲಿ[4] ॥೩೬॥

ಹರಿಯ ಚರಣಕ್ಕೆಱಗಿ ವಿಜಯದ
ಹರಕೆಗಳ ಕೈಕೊಂಡು ರಥವನು
ತುರಗಗಜವನು ಗಡಣವಿಗ[5]ಲೇ[5]ಱಿದರು ಪಾಂಡವರು ।
ಗರುಡಸಿಂಧವ [6]ನೆಗಹಿ[6] ದಾರುಕ
ನಿರದೆ ರಥವನು [7]ಸುಳಿಸೆ[7] ಯದುವೋ
ಹರದ ಮಧ್ಯದಲಸುರಧೂಳೀಪಟ್ಟ [8]ಹೊಱವಂಟ[8] ॥೩೭॥

ಮುಂದೆ ಹರಿರಥವಸುರವೈರಿಯ
ಹಿಂದೆ ಧರ್ಮಜನೆಡಬಲದಲಾ
ನಂದನರು [9]ಕೆಲನೆರಡಱಲಿ ಭೀಮಾರ್ಜುನಾದಿಗಳು[9] ।
ಸಂದಣಿಸಿದುದು ಸೇನೆ ಸೈರಿಸಿ
ನಿಂದನಾದರೆ ಫಣಿಗೆ ಸರಿಯಿ
ಲ್ಲೆಂದು ಸುರಕುಲವುಲಿಯೆ ನಡೆದರು ಪಾಂಡುನಂದನರು ॥೩೮॥

ಸಿಡಿಲು ಸಿಗುಱೆದ್ದಂತೆ ಚೂರಿಸಿ
ಜಡಿವ ಕೈದುಗಳುಗಿದವಬುಧಿಯ
ಕಡುತೆರೆಯ ಲಹರಿಯುವೂಲುರವಣಿಸಿದವು ಬೊಬ್ಬೆಗಳು ।
ನಡುಗಿತವನಿಯುಜಾಂಡಕೋಟಿಗ
ಳೊಡೆಯುಲವನಿಯು ಲಗ್ಗ ಸೂಳಿನ
ಹೊಡೆಗುಳಿನೊಳಬ್ಬರಿಸಿದವು ನಿಸ್ಸಾಳಕೋಟಿಗಳು ॥೩೯॥

---

[1] ಧುರಕೆ (ಕ ಖ) [2] ದಭ್ರದ ಜೋಡುಗಳ (ಕ), ದುದಧಿಯನೋಡಿಸುವ (ಚ), ದುದಧಿಯನೇಡಿಸುವ (ರ) [3] ಡಿಯ ತುರಂಗದ (ಕ), ಕೆಯುಲಿ ಬಂದುದು (ಝ ಟ ಬ) [4] ತರಂಗದಲಿ (ಖ ಝ ಪ ರ) [5] ಲಿಡ (ಗ ಟ ಡ ನ ಪ) [6] ನೆತ್ತಿ (ಗ ಣ.ದ ನ ಪ ರ), ನೆಸಗಿ (ಚ ತ ಬ) [7] ಚಲಿಸೆ (ಖ), ನಡಸೆ (ಟ) [8] ನೈತಂದ (ಖ), ನಡೆತಂದ (ಬ) [9] ಬೆಂಭಾಗದಲಿ ಭೀಮಾರ್ಜುನರು ಬರಲು (ಚ), ಭೀಮಾರ್ಜುನರು ತನ್ನೆರಡು ಪಾರ್ಶ್ವದಲಿ (ಝ)

* ೩೬ನೆಯ ಪದ್ಯವು (ಗ) ಪ್ರತಿಯಲ್ಲಿಲ್ಲ.

ಪ್ರಳಯಜಲನಿಧಿ [1]ಸಂಚಗೆಟ್ಟವೊ[1]
ಲಿಳೆ ಕುಸಿಯೆ ಕಮಠಂಗೆ ಮೇಲುಸಿ
ರು[2]ಲಿಯೆ[2] ದಿಗುದಂತಿಗಳು ಮೊಳಕಾಲೂ[3]ಱಿಲಹಿ ಕುಸಿಯೆ[3] |
ಬಲಮಹಾಂಬುಧಿ [4]ಬಲುಗಡಲ[4] ಮು
ಕ್ಕುಳಿ[5]ಸಿ[5] ನಡೆದುದು ಕಡುಭರದ ಕಾ
ಲ್ದುಳಿಯ ಕದನಾಳಾಪಕರ ಕಾಹುರತೆ ಹೊಸತಾಯ್ತು ||೪೦||

ಗಜದ ಬೃಂಹಿತರವದ ವಾಜಿ
ವ್ರಜದ ಹೇ[6]ಷಾಧ್ವನಿಯ[6] ತೇರಿನ
ವಿಜಯಚೀತ್ಕೃತಿರವದ ಬಿಲುಟಂಕಾರ ಕಳಕಳದ |
ಗಜಬಜಿಕೆ ಗಾಡಿಸಿತು ಬೊಬ್ಬೆಯ
ಗಜಱುಗಳ [7]ಗರ್ಜನೆಗೆ[7] ನಡುಗಿತು
ತ್ರಿಜಗವೆನಲೈದಿದರು ಪಯಣದ ಮೇಲೆ ಪಯಣದಲಿ ||೪೧||

ಅರರೆ ನಡೆದುದು ರಾಯಕಟಕದ
ತೆರಳಿಕೆಯ ಸೌರಂಭವಿಳೆಗ
ಚ್ಚರಿಯ ಬೀ[8]ಱಿತು[8] ವರಕುರುಕ್ಷೇತ್ರಕ್ಕೆ [9]ಗಮಿಸಿದರು[9] |
ಅರಿವಿಜಯಿಗಳು ನೆಲನ ಗೆಲಿದರು
ಹರಿಯ ನೇಮದಲೆಡೆಯಱುದು ಬಲ
ಶರಧಿ ಬಿಟ್ಟುದು ಕಳನ ಪಶ್ಚಿಮದೆಸೆಯ ಪಸರದಲಿ ||೪೨||

ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ[10]ಕೋಟಿಗಳೊಱಲಿದವು[10] ಕಿಱು
ಗಾಳೆ [11]ಸಂಚದಲೂದಿದವು[11] ಮಾಣಿಸಿದವಬ್ಬರವ |
ಕೇಳು ಜನಮೇಜಯ ಧರಿತ್ರೀ
ಪಾಲ ಮಾರ್ಗಶ್ರಮ[12]ದಿ ಸೇನಾ[12]
ಜಾಲ ಸೈವೆಱಗಾಗಿ ನಿಂದುದು ಸಮರಭೂಮಿಯಲಿ ||೪೩||

---

[1] ಮೋಱಿದಪ್ಪುವೊ (ಚ), ಪಂಥಗೆಟ್ಟವೊ (ಣ ತ ಬ [2] ಳುಕೆ (ಚ ತ ರ).
[3] ಱ ಮಡಮುಱಿಯೆ (ಕ), ಱ ಮನಗುಂದೆ (ಟ ರ ದ ಬ) [4] ಬಡಬನನು
(ಖ ಟ ದ ಬ) [5] ಸೆ (ಟ ದ ರ) [6] ಷಿತರವದ (ಚ ರ ತ) [7] ಗಮನದಲ
(ಕ ಖ) [8] ಱಿತ (ಗ ಚ ಟ ಡ ತ ಪ) [9] ವಹಿಲದಲಿ (ಗ ಚ ಟ ಡ ತ ಪ) [10]ಸೇನೆಯ
ಬಿಡಿಸಿದವು (ಗ ಡ ನ ಪ ರ), ಲಗ್ಗೆಗಳಡರಿದವು (ತ ಟ ಬ) [11] ಸನ್ನೆಯಲೂದಿದವು
(ಝ ಟ ದ ಬ), ಸನ್ನೆಯ ಮಾಡಿದವು (ತ) [12] ದಲಾ ಧಟ (ಖ)

ಮೇಲುಗುಡಿಗಳ ಭದ್ರದುಪ್ಪರ
ಸಾಲೆಗಳ ಮಂಡವಿಗೆಗಳ ಬ
ಲ್ಲಾಳದಡ್ಡಿಯ ಚಂಪೆಯದ ಗೂಡಾರದೋವರಿಯ ।
ಸಾಲಕಳಸದ [1]ಪಟ್ಟವಸ್ತ್ರದ[1]
ಮೇಲುಕಟ್ಟಿನ ರಚನೆಯಲಿ ರಾ
ಜಾಲಯಂಗಳ ರಚಿಸಿದರು ಕುಂತೀಕುಮಾರರಿಗೆ ||೪೪||

ಅರಮನೆಯ ಬಲದಲಿ ಮುರಾಂತಕ
ನರಮನೆ[2]ಯ[ದಱ][2] ಕೆಲದಲರ್ಜುನ
ನಿರವು ಹಿಂದಣ ಭಾಗದಲಿ ನಕುಲಂಗೆ [3]ಬೀ[3]ಡಾರ ।
ಅರಿಭಯಂಕರ ಭೀಮಸೇನನ
ನಿರುಪಮಾಲಯುವೆಡದ[4]ಲಿದಿರಲಿ[4]
ಸರಿಸದಲಿ ಸೂತ್ರಿಸಿತು ಸಹದೇವಂಗೆ ನೃಪಭವನ ||೪೫||

ವೀರಪಾಂಡವರವರ ವರಸುಕು
ಮಾರವರ್ಗದ ಮಂಡವಿಗೆ ಗೂ
ಡಾರಗಳನೊಳಹೊಯ್ದು [5]ಬಿಗಿದರು ತಳಿಯ ದಡ್ಡಿಗಳ[5] ।
[6]ವಾರಣದ ಶಾಲೆ[6]ಗಳು ಸುತ್ತಲು
ಭಾರಿಸಿತು ಪಾಂಚಾಲ[7]ಮತ್ಸ್ಯರ[7]
ಭೂರಿಬಲ ಬಿಟ್ಟುದು ಮಹೀಶನ ಗುಡಿಯ ಬಳಸಿನಲಿ[8] ||೪೬||

* ಕೇಳು ಜನಮೇಜಯ ಧರಿತ್ರೀ
ಪಾಲ ಬೀಡಿನ [9]ರಕ್ಷೆ ಬಲಿ[9]ದುದು
[10]ಪಾಳೆಯದ[10] ಬಲುಹೊದಕೆ ಹೊಱವಳಯದಲಿ ಕಲುಕೋಟೆ ।
ಮೇ[11]ಲೆ ಪಡಿಯಗಳಾ[11]ಶ್ರಯಕೆ ಮುಳು
ವೇಲಿ ದೀಹದಸಿಂಹ ಶರಭ
ವ್ಯಾಳ ಶಾರ್ದೂಲಾವಳಿಯ ಸುಯ್ದಾನವೊಪ್ಪಿದುದು ||೪೭||

---

[1] ಸಂಧಿಗಳ ವರ (ಟ ದ ಬ). [2] ಗಳಾ(ಗ ಟ ಡ ದ. ನ ಫ ಬ ರ), ಯಲಾ (ಚ ಜ) [3] ಗೂ (ಚ ಝ ಟ ರ ದ ಪ ಬ ರ) [4] ದೆಸೆಯಲಿ(ತ) [5] ತಳಿತವು ಬಿಗಿದ ದಟ್ಟಿಗಳು (ಕ), ಬಿಗಿದವ ತಳಿಯ ತಟ್ಟಿಗಳು (ಗ ಚ ಡ ಪ) [6] ತೋರಣದ ಸಾಲು (ಕ) [7] ಮಗಧರು (ಕ) [8] ರ ಗುಡಿಯ ಪಾರ್ಶ್ವದಲಿ (ಟ ದ) [9] ತೆಕ್ಕೆ ಬಿಗಿ (ಗಾ ಬ) [10] ಮೇಳವದ (ಖ ಚ ಟ ಡ ಪ ರ) [11] ಲುಗಾವಲನಾ (ಖ).

* (ಗ) ಪ್ರತಿಯಲ್ಲಿ ೪೮ನೆಯ ಪದ್ಯವಾದ ಮೇಲೆ ೪೭ನೆಯ ಪದ್ಯವಿದೆ

ಎರಡು ಬಾಗಿಲ ಸೂತ್ರದಲಿ ವಿ
ಸ್ತರಿಸಿದಂಗಡಿ ಸೋಮವೀಧಿಯ
[1]ಹರಿಯ ವೀಧಿಯಲವರವರ ಪಾಳೆಯಕೆ ಮುರಿವುಗಳ[1] |
ಸುರರು [2]ಸೃಷ್ಟಿಸ[2]ಬಾರದಿನ್ನುಳಿ
ದರಿಗೆ ಗೋಚರವಹುದೆ ಕೌಂತೇ
ಯರ ಸಮಗ್ರದ ಬೀಡು ಕುರುಭೂಮಿಯಲಿ ರಂಜಿಸಿತು ॥೪೮॥

ಬಲದ ಮುಂಗುಡಿ ಭೀಮನದು ಪಿಂ
[3]ಗಳಿಯಲಾ[3]ತನ ಕಾಹು ಬೀಡಿನ
ವಳಯದಾರೈಕೆಗಳು ಸಾತ್ಯಕಿ ನಕುಲಪಾರ್ಥರಿಗೆ |
ಬಲಮಹಾಂಬುಧಿಯೊಳಗಿರುಳು*[4]ತರ
ವಳಿಕೆ[4] ಹೈಡಿಂಬನದು* [5]ಪಾಂಡವ
ರು[5]ಳಿವು ಗದುಗಿನ ವೀರನಾರಾಯಣನ ಸುಯ್ಯಾನ ॥೪೯॥

ಹನ್ನೊಂದನೆಯ ಸಂಧಿ ಮುಗಿದುದು

ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ
ಮಕರಂದ ಮಧುಪಾನಪರಿಪುಷ್ಟವಚಷ್ಷಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರವಿರಚಿತಮಪ್ಪ
ಕರ್ಣಾಟಭಾರತಕಥಾಮಂಜರಿಯೊಳ್
ಉದ್ಯೋಗಪರ್ವಂ ಸಮಾಪ್ತಂ

---

[1] ನಿರುಪಮಿತ ವರಸೂರ್ಯವೀಧಿಯಲವರ ಪಾಳೆಯಕೆ (ಖ) [2] ದಿಟ್ಟಿಸ (ಗ ಪ ಬ) [3] ಗುಡಿಯರಾ (ಕ ಟ), ಗಡೆಯಲಾ (ಗ ಪ) ?, ಗಲಿಯೊಳಾ (ಚ ನ), ತಿಳಿಯೊಳಾ (ಈ ಮುದ್ರಿತ ಪಾಠವು ನಮಗೆ ದೊರೆತಿರುವ ಪ್ರತಿಗಳಲ್ಲಿಲ್ಲ) [4] ತಳವರಿಕೆ (ಖ ಗ ದ ಬ), ಕಳವಳಿಕೆ (ಚ ರ), ಗಳ ತಳವರಿಕೆ (ಎ ರ) *ಮೇಲ್ತಳವರನು ಹೈಡಿಂಬಿ (ಈ ಮುದ್ರಿತ ಪಾಠವು ನಮಗೆ ದೊರೆತಿರುವ ಪ್ರತಿಗಳಲ್ಲಿಲ್ಲ) [5] ನಿಮ್ಮ (ಟ.ರ)

# ಪರಿಶಿಷ್ಟ ೧

ಉದ್ಯೋಗಪರ್ವದಲ್ಲಿ ಎಲ್ಲ ಪ್ರತಿಗಳಲ್ಲಿಯೂ ಇಲ್ಲದ ಮೂಲಗ್ರಂಥಕ್ಕೆ ಸೇರದೆ ಹೆಚ್ಚೆಂದು ತೋರಿಬಂದಿರುವ ಪದ್ಯಗಳನ್ನು ಕೆಳಗೆ ಕೊಟ್ಟಿದೆ.

## ಮೂರನೆಯ ಸಂಧಿ

ನೀತಿಯನು [1]ತಾ ವಿದುರ[1] ವಾಕ್ಯದ
[2]ನೀತಿಯಲಿ[2] ಗಾಂಗೇಯನಲಿ ಸಂ
ಭೂತವಾದ [3]ಸ[3]ರಾಜಧರ್ಮದ ಮೋಕ್ಷ[4]ಮಾರ್ಗವನು[4] ।
ಪ್ರೀತಿಯಿಂದಾದರಿಸಿ [5]ಕೇಳಿದ[5]
ಪಾತಕರ ಜನ್ಮವು ನಿರರ್ಥಕ
ವೇತಕೀ ಭಾರತದ ಮಹಿಮೆಯನರಿವ[6]ರಾ[6]ರೆಂದ ॥

(ಖ ಗ ಚ ಜ ಟ ರ ಡ ತ ದ ಯ) ಪ್ರತಿಗಳಲ್ಲಿ ಮೇಲಿನ ಪದ್ಯವೂ, (ಣ ರ) ಪ್ರತಿಗಳಲ್ಲಿ ಮುಂದಿರುವ ಪದ್ಯವೂ ಸೂಚನೆ ಪದ್ಯವಾದ ಮೇಲೆ ಇದೆ

ಕೇಳು ಜನಮೇಜಯಮಹೀಪತಿ
ಪಾಳೆಯವ ಹೊಱವಂಟು ಲಕ್ಷ್ಮೀ
ಲೋಲನನು ನೆನವುತ್ತ ಪಯಣದ ಮೇಲೆ ಪಯಣದಲಿ ।
ಲೀಲೆಯಲಿ ನಡೆತಂದು ಹೊಕ್ಕನು
[7]ಹೇಳಿಕೆಯ[7] ಗಜಪುರವನಾ ನೃಪ
ನಾಲಯವನುಳಿದಾಗ ಸಂಜಯ ಬಂದನರಮನೆಗೆ ॥

(ಗ ಜ ಟ ಡ ದ ಬ ಯ) ಪ್ರತಿಗಳಲ್ಲಿ ೨ನೆಯ ಪದ್ಯವಾದ ಮೇಲೆ ಮುಂದಿರುವ ಪದ್ಯವು ಹಚ್ಚಾಗಿದೆ

ಜನಪ ಕೇಳೈ ಪೂರ್ವದಲಿ ಕೇ
ಶಿನಿಯ ವೃತ್ತಾಂತವನು ವೈರೋ
ಚನಸುಧನ್ವರ ಕಲಹವನು ಕನ್ಯಾವಿಷಯದಿಂದ ।
ಮುನಿಸಿನಲಿ ನಡೆತಂದು ಪ್ರಹ್ಲಾ
ದನ ದೆಸೆಯಲಪರಿಬ್ಬರಿಗೆ ಹಂ
ಸನಲಿ ಹಱಿವಾಯ್ತೆಂಬ ಕಥನವನಱುಹಿದನು ವಿದುರ ॥

---

[1] ವಿದುರನು ಸು (ಚ ಜ ತ ಪ) [2] ನೀತಿಯನು (ಖ ತ ಯ), ರೀತಿಯಲ (ಚ ಜ ಟ) [3] ಸು (ಚ) [4] ಧರ್ಮವನು (ಖ ಗ), ಸಂಗತಿಯ (ಚ ಟ) [5] ಕೇಳದ (ಗ ಚ ಟ ದ ಯ) [6] ನಾ (ರ ಡ ಪ) [7] ಯೇಳಿಗೆಯ (ರ)

*(ಚ) ಪ್ರತಿಯಲ್ಲಿ ಮಾತ್ರ ಹೆಚ್ಚಾಗಿ ದೊರೆಯುವ ಪದ್ಯಗಳು

ಅರಸ ಕೇಳ್ ಗೋವಿಪ್ರಬಾಧೆಯ
ನೆರವಿಯಲಿ ಚಾಂಡಾಲಜನಸಂ
ಸ್ಪರುಶದಲಿ ಚೋರನ ಮಹಾದುರ್ದರ್ಶನಂಗಳಲಿ।
ಹರಿಯ ನಾಮಸಹಸ್ರವನು ಉ
ಚ್ಚರಿಸದಲ್ಲದೆ ಪಾತಕಕೆ ಸಂ
ಹರಣವಾಗದು ಭೂಪ ಚಿತ್ತೈಸೆಂದನಾ ವಿದುರ ॥

ತಾನು ಮಾಡಿದ ಪುಣ್ಯಕಧಿಕವು
ಹೀನವಿಲ್ಲದೆ ಪರರು ಮಾಡಿದ
ದಾನಧರ್ಮವ್ರತವ ಸಾಂಗೋಪಾಂಗದಲಿ ಮಾಡೆ ।
ಕಾನನದಿ ಕೂಪವನು ನೆಳಲನು
ಸಾನುರಾಗದಿ ನಿರ್ಮಿಸಿದರಿಗೆ
ಮಾನವರೊಳುತ್ತಮದ ಗತಿಯಹುದೆಂದನಾ ವಿದುರ ॥

ದುರ್ಜನರ ಸಂಗದಲಿ ಸುಜನರು
ದುರ್ಜನರ ತಾವಹರು ನೋಡಲು
ಸಜ್ಜನರ ಸಂಗದಲಿ ಸಜ್ಜನರಹರು ದುರ್ಜನರು ।
ದುರ್ಜನರ ದುರ್ಗತಿಯ ಫಲವನು
ಸಜ್ಜನರ ಸದ್ಗತಿಯ ಫಲವನು
ನಿರ್ಜರಾಧಿಪ ಬಲ್ಲನೈ ಧೃತರಾಷ್ಟ್ರ ಕೇಳೆಂದ ॥

ಮಾತೃಪಿತೃಗಳನಗಲಿದನ ಪಶು
ಘಾತಕಿಗಳೊಡನಾಡುವಾತನ
ಪ್ರೀತಿಯಲಿ ತನಗೊಮ್ಮೆ ಕನ್ನಿಕೆಯಿತ್ತು ಮನ್ನಿಸಿದ ।
ಮಾತೆಯಲಿ ರಮಿಸಿದನ ಜನನಗ
ಳೋತು ವಾಯಸವಾಗಿ ಜನಿಸಿದು
ಭೂತಳದಿ ಚಾಂಡಾಲರೆನಿಸುವರೆಂದನಾ ವಿದುರ ॥

---

* (ಚ) ಪ್ರತಿಯ ಪದ್ಯಗಳ ಕ್ರಮದಲ್ಲಿ ಬಹಳ ವ್ಯತ್ಯಾಸವಿದೆ ಆದುದರಿಂದ ಆ ಪ್ರತಿಯ ೩ನೇ ಸಂಧಿಯಲ್ಲಿ ದೊರೆಯುವ ಹೆಚ್ಚು ಪದ್ಯಗಳನ್ನು ಮಾತ್ರ ಸಂಗ್ರಹಿಸಿ ಪ್ರತ್ಯೇಕವಾಗಿ ಇಲ್ಲಿ ಕೊಟ್ಟಿದೆ

ಪರಿಜನದಿ ದಯೆಯನು ಪರಸ್ತ್ರೀ
ಯರಲಿ ಭೀತಿಯ ಹಗೆಗಳಲಿ ನಿ
ಷ್ಕರುಣತೆಯ ಬಡವರಲಿ ದಾನವ ದೇವಗುರುದ್ವಿಜರ ।
ಚರಣಸೇವೆಯೊಳಾರ್ತತೆಯ ಹಿಸು
ಣರ ನುಡಿಗಳಲಿ ಮೂರ್ಖತೆಯನಿದ
ವಿರಚಿಸುವ ನರಪತಿಯೆ ವಂದ್ಯನು ಭೂಪ ಕೇಳೆಂದ ॥

ಪಾತಕರ ಪದವಿಗಳನನುಭವ
ಘಾತಕದಲನುಸರಿಸಿ ಮತ್ತೀ
ಭೂತಳದಲುದ್ಭವಿಸಿ ಕಡೆಯಲಿ ಸಕಲರನು ನೀಗಿ ।
ಖ್ಯಾತಿಯಳಿದು ಜಡಾಂಧರೆನಿಸಿ ವಿ
ಜಾತಿಯಲಿ ಬೆರೆವರು ಮಹೌಘ
ವ್ರಾತದಿಂ ಜೀವಿಸುವರವನೀಪಾಲ ಕೇಳೆಂದ ॥

ವರವಸಂತದೊಳುದಕದಾನವ
ನುರುವ ಗ್ರೀಷ್ಮದ ಕಡೆಯೊಳಗೆ ಸ
ಚ್ಚರಿತದಿಂದನ್ನವನು ಮಿಗೆ ಹೈಮಂತಕಾಲದಲಿ ।
ವರನದೀತೀರದಲಿ ವಸ್ತ್ರವ
ಹರುಷದಿಂ ದಾನವನು ಮಾಳ್ಪುದು
ಹರಿಸಮರ್ಪಿತವೆಂದು ವರಸುಜ್ಞಾನದವರೆಂದ ॥

ಹುಟ್ಟಿದಾಗಳೆ ಸುಕೃತದುಷ್ಕೃತ
ಕಟ್ಟಿ ಬೆಂಬಿಡದ್ಯೆದೆ ಬಂದಿಹು
ದೊಟ್ಟವಿಸದೇ ತನಗೆ ಮಿಗಿಲಾಗಿರ್ದ ಸಮಯದಲಿ ।
ಕೊಟ್ಟವರ ಕೂಂಡವರನಾಂತೊಳ
ಗಿಟ್ಟವರನನುಜಾತಜರನೊಳ
ಗಿಟ್ಟು ಬಾಳುವುದನುನಯವು ಭೂಪಾಲ ಕೇಳೆಂದ ॥

ಮರಣಗಾಲದಿ ಹರಿಯ ನಾಮವು
ಪರಮಗುರುಪರಿಚರಿಯ ಬಾಲ್ಯದಿ
ನಿರುತದಲಿ ಪರಹಿತವು ಯೌವನಕಾಲದಲಿ ನರಗೆ ।
ಅರಸ ಕೇಳ್ ಗಂಧರ್ವವಿದ್ಯಕೆ
ಸರಿಸವಹ ಬಂಧುಗಳು ದೊರಕುವು
ದರಿದು ಪೂರ್ವದ ಪುಣ್ಯವಶವದು ಭೂಪ ಕೇಳೆಂದ ॥

ಕುಶಲಜೀವನದಿಂದಲಿರುತಿಹ
ರಸಮುಸುಕೃತಿಗಳಿಂತು ಜನರಾ
ಕೃಷಿಯುಲಭ್ಯಾಸಿಸುವರು[ಂ]ಮಧ್ಯಮರು ಸೇವೆಯುಲಿ ।
ಅಸುವಳವ ಪರಿಯಂತರವು ಸಂ
ಧಿಸಲು ಸೇವ[ಕ]ರಾಗಲಧಮರು
ವಸುಧೆಗತಿತಾಮಸರು ಹೊರೆಯೊಳು ಜೀವಿಸುವರೆಂದ ॥

ಮಸಗಿ ಜೋಡಿಸಿ ಕರವೆರಡರಿಂ
ದೆಸಗಿ ತಲೆಯನು ತುರಿಸಿ ರಾತ್ರಿಯೊ
ಳೆಸೆವ ನಿಷ್ಠುರವಾಕ್ಯವುದಯಾಸ್ತಮಯಕಾಲದಲಿ ।
ಎಸೆವ ನಿದ್ರಾಂಗನೆಯೊಳೊಂದಿರೆ
ಬಿಸಜಲೋಚನನಾದಡೆಯು ವ
ರ್ಜಿಸುವಳಾತನ ಭಾಗ್ಯಸಿರಿ ಭೂಪಾಲ ಕೇಳೆಂದ ॥

ಲಲಿತಪುಷ್ಪ ಸುಧೂಪ ಕಪ್ಪುರ
ವಿಲಸಿತದ ವಾಸನೆಯುಲತಿನಿ
ರ್ಮಳದ(ಜಲಕ್ಷೀರಾನ್ನಪಾನಂಗಳಲಿ)ನವಯೌವನೆಯು
ಸಂಭೋಗಾಂತರಂಗದಲಿ । ?
ತಳಿತಹೋಮದ ಹೊಗೆಗಳಲಿ ಸಂ
ಚಲಿಸುವವಗಾಯುಷ್ಯವೃದ್ಧಿಯು
ಬಲಿವುದೈ ದಿನದಿನವಲವನೀಪಾಲ ಕೇಳಂದ ॥

ಸಲೆ ಮಹಾತ್ಮರ ಸಂಗದಲಿ ನಿ
ಶ್ಚಲಸಮಾಧಿಯ ಸುಳುವಿನಲಿ ನಿ
ರ್ಮಳದ ನಿರುಪಮನೀತಿಯುಲಿ ಪಿತೃಮಾತೃಭಕ್ತಿಯುಲಿ ।
ತಿಳಿದು ಗುರುತೀರ್ಥದಲಿ ಮಂತ್ರಂ
ಗಳಲಿ ದೈವದ ನೆನಹು ಸದ್ಗತಿ
ಗಳಲಿ [1]ವಿಶ್ವಾ[ಸಿ]ಸುವುದೆಲೆ[1] ಭೂಪಾಲ ಕೇಳೆಂದ ॥*

ತರ್ಕದೊಳು ನುಡಿಗಳಲಿ ಮದದಲಿ
ಸೊಕ್ಕಿದವದಿರ ಸಂಗದಲಿ ಗುಣ
ಚುಕ್ಕಿಗಳ ಚ ಪಳವ ಕೇಳಿದು ಬವರಮಧ್ಯದಲಿ ।
ಸಿಕ್ಕಿರಿಯಲ್ಕೆ ದೈವಪುರುಷರ
ಸತ್ಕರಿಸಿ ಸತ್ಕರಣದಲಿ ನೀ
ಸಿಕ್ಕಿಹೈ ಸತ್ಯೈಕನಿಧಿ ಭೂಸಾಲ ಕೇಳೆಂದ ॥*

---

[1] ವಿಶ್ವಾಸಿಪೆಯೆಲೈ (ಬ)
*ಈ ಗುರುತಿರುವ ಎರಡು ಪದ್ಯಗಳು (ಬ) ಪ್ರತಿಯಲ್ಲಿಯೂ ಇವೆ

ಇಂಗಿತದೊಳಱುವುದು ಮಹಾತ್ಮರಿ
ಗಂಗವದು ಮಧ್ಯಮರು ಕರ್ಣಾವ
ಥಂಗಳಲಿ ಕೇಳ್ದಱುವುದಿಂತೀ ಲೋಕರೂಢಿಯಿದು ।
ಕಂಗಳಲಿ ಕಂಡರಿವರಧಮರು
ಕಂಗಳಲಿ ಕಿವಿಗಳಲಿ ಪಾಂಡವ
ರಂಗವಣೆಯನು ಕಂಡು ಷೆಣಸುವಿರೆಂದನಾ ವಿದುರ ॥

(ಖ) ಪ್ರತಿಯಲ್ಲಿ ೧೦ನೆಯ ಪದ್ಯವಾದ ಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಸರಳಲಿಟ್ಟರೆ ಹಗೆಯು ತಾಗುವು
ದರಿವುದೊಲಿವುದು ಧ್ರುವ[ದ]ಗತಿಯಿದು
ನಿರುತ ಬುದ್ಧಿಯು ಬಾಣದಲಿ ತೊಟ್ಟೆಚ್ಚಡರಿನೃಪರ ।
ಸಿರಿಯುನಾ ರಾಜ್ಯವನು ತತ್ಪುರ
ಕರಿತುರಗಭಂಡಾರನಿಚಯುವ
ಹರಿದುತಹ ಧನುರ್ವಿದ್ಯವುಂಟೇ ರಾಯ ನಿನಗೆಂದ ॥

(ಟ ದ) ಪ್ರತಿಗಳಲ್ಲಿ ೧೭ನೆಯ ಪದ್ಯವಾದ ಮೇಲೆ ಮುಂದಿರುವ ನಾಲ್ಕು ಪದ್ಯಗಳು ಹಚ್ಚಾಗಿವೆ

ವಿಷಮ ಮದಕಂಟಕವೆರಡು ಭುಂ
ಜಿಸುವಡೀ ದೇಹವನು ಶೋಭಿಸೆ
ನಸಿವುದಲ್ಲದೆ ಬಿಡವವರ ಶ್ರುತಿಲಕ್ಷಣದ ಕರವ ।
ಹಸಗೆಡಿಸಿ ಕಳೆವುದು ಕಣಾ ಕಾ
ಮಿಸಿದ ಧನದೇಳಿಗೆಯ ಕೋಪ
ಪ್ರಸರಣದ ಫಲವರಸ ಚಿತ್ತೈಸೆಂದನಾ ವಿದುರ ॥

ವನದೊಳಗೆ ತಾ ವಹ್ನಿ ಜನಿಸಲು
ವನವುಳಿಯ ತಾ ಬಲ್ಲುದೇ ಕೇಳ್
ವನದರಸ ಮೂಲಾಗ್ರವಳಿವುದುಯೆಂಬ ನೀತಿಯನು ।
ಮನುಜರಿವರೆನ್ನದಿರು ಭೂಸುರ
ಜನವಿರೋಧವ ಕೊಂಡೆಯಾದರೆ
ತನು ಕೆಡುಗು ಗೋತ್ರಜರುವುಳಿಯರುಯೆಂದನಾ ವಿದುರ ॥

ಕೆಡುವ ದೇಶದ ಕೆಡುವ ಪುತ್ರನ
ಕೆಡಿಸುವೆನುಯೆಂದೆಂಬ ಬಂದುವ
ನುಡಿಯ ಕೇಳುತ ಪರ್ಜಿಪುದು ತಾ ಹೊದ್ದದವರವರ ।
ಕೊಡುವತರುವೆಡೆ ತುಚ್ಛನಾಗದೆ
ಮಡದಿ ತಾ ಕಡುದುಷ್ಟೆಯಾಗಲು
ಪೊಡವಿಯೊಳಗದು ಹೇಷ್ಯತನವಹುದೆಂದನಾ ವಿದುರ ॥

ಮುಂದಿರುವ ಪದ್ಯವು (ಚ) ಪ್ರತಿಯಲ್ಲಿಯೂ ಇದೆ

ವನಿತೆ [1]ಮಕ್ಕಳು ಒಡನೆ[1] ಬಾರರು
ತನುಸಹಿತ ಬಂಧುಗಳು ಬಾರರು
[2]ದಿನದಿನದಲೊದಗಿಸಿದ ದುಷ್ಕೃತ ಬೆನ್ನ ಬಿಡದಿಹುದು ।
ಅನವರತ ನೀನೊಲಿದು ಮಾಡಿದ
ವಿನಯಧರ್ಮಪರೋಪಕಾರವು
ನಿನಗೆ ಬೆಂಬಲವಾಗಿಹುದು ಧೃತರಾಷ್ಟ್ರ ಕೇಳೆಂದ[2] ॥

೪೪ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು (ಖ ಗ ಝ ಟ ಡ ನ) ಪ್ರತಿಗಳಲ್ಲಿ ಹೆಚ್ಚಾಗಿದೆ

ಚೋರನು ಚಿಕಿತ್ಸಕನು ಗಾಯನು
ನಾರಿ ಯಾಜಕ ಪಂಡಿತರೆನಿ
ಪ್ಪಾಟಿಜನವಿದ್ದೆಡೆಯಲೇ ಜೀವಿಸುವರೆಂತೆನಲು ।
ಭೂರಿನಿದ್ರಾಂಗನಲಿ ರೋಗ ಶ
ರೀರಿಯಲಿ ವಾದಿಯಲಿ ಕಾಮುವಿ
ಕಾರಿಯಲಿ ಯಜಮಾನ ಮೂರ್ಖರೊಳೆಂದನಾ ವಿದುರ ॥

೪೬ನೆಯ ಪದ್ಯವಾದಮೇಲೆ (ಟ ರ) ಪ್ರತಿಗಳಲ್ಲಿ ಮುಂದಿರುವ ಎರಡು ಪದ್ಯಗಳು ಹೆಚ್ಚಾಗಿವೆ

ನೋಡಿದಡೆ ಭವಭವದ ಪಾತಕ
ವೋಡಲೀವುದೆ ತನುವಿನಿಂದಲು
ಪಾಡುತನ ಕರಹೆಚ್ಚಿ ಹಿಗ್ಗುತ ಪರರ ವಧುವಿನಲಿ ।
ಕೂಡಿದಡೆ ರೌರವದ ನರಕದೊ
ಳಾಡುತಿಹರೈ ತಪ್ಪಿದಡೆ ಖಯ
ಖೋಡಿಯಿಲ್ಲದೆ ಕೆಡನೆ ರಾವಣನೆಂದನಾವಿದುರ ॥

---

[1] ನಂದನರೊಡನೆ (ಚ) [2] ದಿನದಿನದಿ ಗಳಿಸಿರ್ದ ಧನವಾದಡೆಯು ಬೇಳಿಯ । ಜಿನುಗಿನಲಿ ಬರಲಱಿಯವಿಂತೀ । ಮನುಜರಿಗೆ ತಾ ಮಾಡಿದುನ್ನತ ಪರಮಸುಕೃತವೆ ತನಗೆ ಬೆಂಬಲವೆಂದನಾ ವಿದುರ (ಚ)

ದುಷ್ಟಜನರಿಗೆ ಮಂತ್ರವೀಯಲು
ದುಷ್ಟಸತಿಗಾಭರಣ ತೊಡಿಸಲು
ಕಷ್ಟವಹುದಿದು ಮುಂದೆ ಕಾರ್ಯವಿವಾಗದೆಂಬುದನು ।
ನಿಷ್ಠುರದ ಸಂಗವನು ಮಾಡಲು
ತೊಟ್ಟನಾಯುಂ ಶ್ರೀಯು ಕೆಡುವುದು
ಕಷ್ಟವಿದು ಲೋಕಕ್ಕೆ ಚಿತ್ತೈಸೆಂದನಾ ವಿದುರ ॥

೫೪ನೆಯ ಪದ್ಯವಾದಮೇಲೆ (ಖ ಗ ರ ತ ಯ ರ) ಪ್ರತಿಗಳಲ್ಲಿ ಮುಂದಿರುವ ಮೂರು ಪದ್ಯಗಳು ಹೆಚ್ಚಾಗಿವೆ

[1]ಮಸುಳಿಸಿರ್ದ ದುಕೂಲ ರದನದೊ[1]
[2]ಳೆಸೆವ ಹಾಪಸೆ ಭುಕ್ತದುನ್ನತ
ದೆಸಕ[2] ನಿಷ್ಠುರವಾಕ್ಯವುದಯಾಸ್ತಮಯಕಾಲದಲಿ ।
ಎಸೆವ ನಿದ್ರಾಂಗನೆಯೊಳೊಂದಿರೆ
ಬಿಸಜಲೋಚನನಾದಡೆಯು ವ
ರ್ಜಿಸುವಳವನನು ಭಾಗ್ಯ[3]ವಧು[3] ಭೂಪಾಲ ಕೇಳೆಂದ ॥

ಮುಂದಿರುವ ೨ ಪದ್ಯಗಳು (ಗ) ಪ್ರತಿಯಲ್ಲಿಲ್ಲ

[4]ಒಂದು ಮೊದಲಾಚಿಂತ್ಯವಾಗಿರೆ[4]
[5]ಸಂದ[5] ಪೂಗಫಲ ಕ್ರಮಂಗಳ
ಚಂದವನು ಚಿತ್ತೈಸು ಲಾಭಾಲಾಭಸುಖದುಃಖ ।
ಕುಂದದಿಹುದಾಯುಷ್ಯ ಮರಣವಿ
ದೆಂದು ತತ್ಕಾಲದಲಿ [6]ಭೋಗಿಸು
ವಂ[6]ದವನು ಚಿತ್ತೈಸುವುದು ತಾಂಬೂಲಲಕ್ಷಣವ ॥

[7]ಸ್ಥಾನಪಂಚಕದಿಂದ್ರಿಯದ ಸಂ[7]
ಸ್ಥಾನದಲಿ ನಿದ್ರಾಂಗನೆಯು ಸ
ನ್ಮಾನಿ[8]ಸುವುದಾ ಸಾಧನದ[8] ಪಂಚಕದ ಪರಿಣತಿಯ ।

---

[1] ಮಸುಳಿಸಿರ್ದ ದುಕೂಲವದನದಿ (ಖ), ಮಸುಳಿಸಿದ ವಸನಾದಿಯಲ ಹಾ (ಗ), ಮಸುಳಿಸಿದ್ದ ದುಕೂಲರಜನಿಧಿ (ಟ ದ ನ), ಮಸುಳಿಸಿದ *ದಶ*ನಾಳಿಯಲಿ ಹಾ (ಪ)* ವಸ (ಜ ಡ ಣ ಯ) [2] ಪಸರಿಸಿದಮಲ ಭುಕ್ತದುನ್ನತದೆಸಕ (ಖ ಟ ದ ನ), ವಸೆಯಹಲು ಬಹ್ವಾಶಿತನದಿಂ (ಗ ಜ ಣ) [3] ಸಿರಿ (ಖ ಟ ಡ ಣ ದ ಪ ಬ ಯ) [4] ಒಂದೆರಡು ಮೊದಲಾದವಂಗಿರೆ (ಖ) [5] ತಂದು (ಟ ದ) [6] ಸುಖದಲಿ ಡಂ (ಪ) [7] ಸ್ಥಾನವಱುವುದು ಧರ್ಮಕರ್ಮದ (ಖ ರ) [8] ಸುವವಸ್ಥಾನವದ (ಖ ರ)

ಸ್ಥಾನವಱಿದಾರೋಗಣೆಯ [1]ಸಂ
ಧಾನವನು[1] ಚಿತ್ತೈಸುವುದು ರಾ
ಜಾನುಮತವಿದು ಸಕಲಸುಖಕರವೆಂದನಾ ವಿದುರ ॥

೫೮ನೆಯ ಪದ್ಯವಾದಮೇಲೆ (ಕ ಖ ಚ ನ ಬ ಮ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ವನದೊಳಗೆ ನವತೃಣದಿ ಸಂಜೀ
ವನದ ಸಾಧುಮೃಗಾವಳಿಯ ಸಂ
ಹನನದಲಿ ಮನದರಲು ಮೃಗವೊಂದಕ್ಕೆ ಬ್ರಹ್ಮವಧೆ ।
ಜನಿಸುವುದು ಪ್ರತ್ಯೇಕ ಮೃಗವೆನಿ
ತನಿತರಳಿವಕ್ಕರಸ ಕೇಳ್ ಸ
ಜ್ಜನರ ವಧೆ ಸಾಮಾನ್ಯವೇ ಹೇಳೆಂದನಾ ವಿದುರ ॥

೭೦ನೆಯ ಪದ್ಯವಾದಮೇಲೆ (ಚ ಟ ದ ನ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಉಂಬುದುಡುವುದು ಮಿಕ್ಕ ಧನವನು
ಯಿಂಬಱಿತು ವಿಪ್ರರಲಿ ಬೈಚಿಡೆ
ಶಂಭು ತಾ ಮುನಿಯಲ್ಕೆ ಪೋಗದುಯೆಂಬ ಭೇದವನು ।
ಬೆಂಬಳಿಯ ಬಿಡದಿಹುದು ಸೂರೆಯ
ಕೊಂಬುದೊಲುವಡೆ ಸ್ವರ್ಗಸೌಖ್ಯವ
[2]ಕೊಂಬ ಪರಿಯನು ನೃಪತಿ[2] ಚಿತ್ತೈಸೆಂದನಾ ವಿದುರ ॥

೭೫ನೆಯ ಪದವಾದಮೇಲೆ (ಗ ಜ ಡ ಪ ಮ ಯ) ಪ್ರತಿಗಳನ್ನು ಬಿಟ್ಟು ಉಳಿದ ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಎತ್ತಲೆತ್ತಲು ಪೋಪ ಮನುಜಂ
ಗತ್ತಲತ್ತ[3]ಲು ದೈವ ಕೂಡೆ ಬ[3]
ರುತ್ತಿಹುದು ಬೆಂಬಿಡದೆ ನಾನಾದೇಶದೇಶದಲಿ ।
[4]ಮಿತ್ರನುರು[4]ಮಧ್ಯಸ್ಥಪುರುಷನ
[5]ಮಿತ್ರನೌದಾಸೀನನೊಬ್ಬನು
ಕೃತ್ರಿಮನು ಸಹಜೀವಿಯಿಂತಿವರರಸ ಕೇಳೆಂದ[5] ॥

---

[1] ನ ಸಗಾನದಲ (ಖ), ನ. ಸಮಾನದಲಿ (ಚ ಬ), ನು ಸದಾನತದಿ (ರ)
[2] ನಂಬಿಹುದು ನೃಪನೀತಿ (ಚ) [3] ಲು ಬಿಡದೆ ಕೂಡೆ ಬ (ಖ), ಲೆಯ್ದಿದಿ ಕೂಡಿ ಬ (ಟ ದ) [4] ಉತ್ತಮನು (ಟ ಡ ದ), ಮೃತ್ಯುವಹ (ನ) [5] ಕೃತ್ರಿಮದ ಸಮಜೀವಿಯೆನಿಪರು ಉತ್ತರಾಯಗಳಿವರು ಚಿತ್ತೈಸೆಂದನಾ ವಿದುರ (ಟ ರ ದ)

೮೫ನೆಯ ಪದ್ಯವಾದಮೇಲೆ (ಖ) ಪ್ರತಿಯಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಶೂರ ವೀರನುದಾರ ಧರ್ಮಾ
ಧಾರ ವಿಗತವಿಕಾರ ಸುಜನೋ
ದ್ಧಾರ ರಿಪುಸಂಹಾರ ಚತುರೋಪಾಯ ಸಾಕಾರ ।
ಸಾರಮಂತ್ರವಿಚಾರ ಭುವನಾ
ಧಾರ ಪರಮಸ್ವಾಮಿಕಾರ್ಯಾ
ಧಾರವೆನಿಸುವ ಮಂತ್ರಿಯುಂಟೇ ರಾಯ ನಿನಗೆಂದ ॥

೮೭ನೆಯ ಪದ್ಯವಾದಮೇಲೆ (ಖ ಗ ಚ ಜ ಡ ಣ ನ ಪ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಸಲೆ ಶ್ರುತದೃಷ್ಟಾನುಮಾನಂ
ಗಳಲಿ ನಿಪುಣನ ನಿಶ್ಚಲನ ನಿ
ಷ್ಕಳನ ರಾಗದ್ವೇಷರಹಿತನ ಬಹುಲಿಪಿಜ್ಞಕನ ।
ಹಲವುಬುದ್ಧಿಯನುಳ್ಳವನ ಕೈ
ಚಳಕ[1]ಲಖಿತನ[1] ವಾಚಕನ ಬಗೆ
ಗೊಳಿಸಿ ಕರಣಿಕಪತಿಯ ಮಾಡುವುದರಸ ಕೇಳೆಂದ ॥

೯೩ನೆಯ ಪದ್ಯವಾದಮೇಲೆ (ಗ ಜ ಝ ಡ ನ ಬ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ತಾಳಲಯಬೊಂಬಾಳ[2]ಮಿಶ್ರದ[2]
ಹೇಳಿಕೆಯ ನಾರಾಟಶುದ್ಧದ
ಸಾಳಗದ ಸಂಕೀರ್ಣದೇಶಿಯ ವಿವಿಧರಚನೆಗಳ ।
ಮೇಳವಱಿ[3]ದೊಡ್ಡವದ[3] ಸಾಧನ
ದೇಳಿಗೆಯ ಸಂಪೂರ್ಣ[4]ಮಾರ್ಗದ
ಸೂಳುಗಳ ಲಯಮಾನವಱಿವವನವನೆ ಗಾಯಕನು[4] ॥

(ಟ ದ) ಪ್ರತಿಗಳಲ್ಲಿ ಮುಂದಿರುವ ಪದ್ಯವು ೯೫ನೆಯ ಪದ್ಯವಾದಮೇಲೆ ಹೆಚ್ಚಾಗಿದೆ

ರುಜೆಯನಲುಗುವ ರದನವನು ದೃಗು
ರಜವನನುಚಿತ ಕಂಟಕನ ಋಣ
ವ್ರಜವ ಕಳ್ಳರ ವಿದ್ಯವನು ಗೃಹವಾಸಕುಂಡಲಿಯ ।

---

[1] ವುಳ್ಳನ (ಡ) [2] ಶುದ್ಧದ (ಗ ಜ ಝ) [3] ವುತ ವಾದ್ಯ (ಗ), ದೊಡ್ಡಾರ (ಡ) [4] ಚಿತ್ತ ಚಡಾಳದಲ ಸೊಗಯಿಸುವ ವೈಣಿಕನರಸ ಕೇಳೆಂದ (ಝ)

ವೃಜಿಸುವನು ಪಾಪರನು ವೈರಿ
ವ್ರಜವನುಳುಹುವನೆಗ್ಗನೆಂಬುದು
ಸುಜನರಭಿಮತ ನಿನ್ನ ಮತವೇನೆಂದನಾ ವಿದುರ ॥

೧೦೮ನೆಯ ಪದ್ಯವಾದ ಮೇಲೆ ಮುಂದಿರುವ ಎರಡು ಪದ್ಯಗಳು (ಖ ಗ ಛ ಜ ಝ ಣ ನ ಪ) ಪ್ರತಿಗಳಲ್ಲಿ ಹೆಚ್ಚಾಗಿವೆ

ಮೂಱುಕೋಟಿಯ ಕೋಟಿಧರ್ಮವ
ಮೀಱಿದಿಹ ರೋಮಾಳಿಸಂಖ್ಯೆಯೊ
ಳಾಱಿನೆನ್ನದೆ ನಿಜಪತಿಯ ಸಹಗಮನದಲಿ ತನುವ ।
ಮಾಱಿದಬಲೆಯರುಗಳ ದೆಸೆಯಿಂ
ದಾಱುಮಡಿ ಸ್ವರ್ಗಾದಿಭೋಗವ
ಸೂಱೆಗೊಂಬರು ತಪ್ಪದವನೀಪಾಲ ಕೇಳೆಂದ ॥

ಅವನೊಬ್ಬ[1]ನು ಸತ್ಯಕೋಸುಗ
ಭಾವ[1]ಶುದ್ಧಿಯಲೊಡರಿಚುವ [2]ಶಪ
ಥಾವಳಿಯನವಸಾನದಲಿ ತದ್ಧರ್ಮವನು[2] ಯಮನು ।
[3]ಓವ[3]ನನ್ಯಾಯದಲಿ ಸೂರುಳ
ನೋವಿ ರಚಿಸಿದವಂಗೆ ಗತಿಯಿ
ನ್ನಾವುದೆಂಬುದನಾರು ಬಲ್ಲರು [4]ಭೂಪ ಕೇಳೆಂದ[4] ॥

೧೦೯ನೆಯ ಪದ್ಯವಾದ ಮೇಲೆ (ಖ ಝ ಬ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ವೈದ್ಯನಲಿ ಮಾಂಸದಲಿ ದ್ವಿಜನಲಿ
ನಿದ್ರೆಯಲಿ ತರುವಿನಲಿ ವನದಲಿ
ವಿದ್ಯೆಯಲಿ ಪದವಿಯಲಸಂಖ್ಯಾಸಂಖ್ಯವೆಸರುಗಳ ।
ತದ್ವಿಷಯಕೆ ಮಹಾಶಬುದವದು
ಹೊದ್ದಿಸುವುದತಿಕಷ್ಟವವರಿಗೆ
ಸದ್ಯಫಲವದು ತಪ್ಪದವನೀಪಾಲ ಕೇಳೆಂದ ॥

೧೧೦ನೆಯ ಪದ್ಯವಾದಮೇಲೆ (ಖ ನ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ವಿದ್ಯೆ ಸತ್ಕುಲ ಬಹುವಿವೇಕವು
ಬುದ್ಧಿ ಜಾಣುಮೆ ನುಡಿಯು ಸಡಗರ
ಶುದ್ಧಚಿತ್ತ ಸುಶೀಲ ಭುಜಬಲ ಭದ್ರನೆಂದೆನಿಸಿ ।

---

[1] ನ ಸತ್ಯವನು ಸದ್ಭಾವ(ನ) [2] ಶಪಥಾವಸಾನದೊಳವನಧರ್ಮದಲರ್ಥವನು (ಛ ಬ), ನವನಾವಪರಿಯಿಂ ಫಳಿಸೆ ಧರ್ಮವನರ್ಥವನು (ನ) [3] ಹೊಯ್ಯು (ಗ), ಒಯ್ಯು (ಛ ಜ ಪ ಬ) [4] ಯಮನ ನಗರಿಯಲಿ (ಣ).

ಉದ್ಯೋಗವು ಮೊದಲಾದ ಗುಣಗಳ
ಲಿದ್ದು ಫಲವೇ[1]ನರಸ ಭಾಗ್ಯದ
ಬುದ್ಧಿ[1] ಹೊದ್ದದ ನರ[2]ನು[2] ದಾರಿದ್ರ್ಯಾಂಗ[3]ನವನೆಂದ[3] ॥

೧೧೬ನೆಯ ಪದ್ಯವಾದಮೇಲೆ ಮುಂದಿರುವ ನಾಲ್ಕು ಪದ್ಯಗಳು (ಜ ಡ ಣ ಪ) ಪ್ರತಿಗಳಲ್ಲಿ ಹೆಚ್ಚಾಗಿ ದೊರೆಯುತ್ತವೆ

ಧರ್ಮವೆಲ್ಲಿಹುದಲ್ಲಿ ಜಯ ಸ
ದ್ಧರ್ಮವೆಲ್ಲಿಹುದಲ್ಲಿ ಸಿರಿ ತ
ದ್ಧರ್ಮಸಂರಕ್ಷಕರು ಹರಿಧೂರ್ಜಟಿಪಿತಾಮಹರು ।
ಧರ್ಮದೂರರು ನಿನ್ನವರು ಸ
ತ್ಕರ್ಮಬಾಹಿರನಾತ್ಮರಚಿತ ವಿ
ಕರ್ಮದೋಷದೊ[4]ಳಳಿವ[4] ನಿನ್ನವನೆಂದನಾ ವಿದುರ ॥

ದೇಹ ಮೊದಲಲಿ ನಿನ್ನದಲ್ಲದು
ವೂಹಿಸಲು ತನುವಿಡಿದು ಬಂಧು ಸ
ಮೂಹ ಪುತ್ರ ಕಳತ್ರ ನಿನ್ನವರೆಂಬ ಮಮತೆಯಲಿ ।
ಮೋಹಮಯಜಲಧಿಯಲಿ ಮುಳುಗಿ
ಪ್ಪೀ ಹದನದೇಕರಸ ನಿತ್ಯವಿ
ದೇಹ ನೀನೆಂದಱಿದು ದುಃಖವನೊದೆದು ಕಳೆಯೆಂದ ॥

ಥಳಥಳಿಪ ಪಂಚೇಂದ್ರಿಯದಲೊಂ
ದುಳಿಯಲೊಂದನು ಬಿಗಿಯಲೊಂದರ
ಬಳಿಯು [5]ವಿಸ್ತರಿಸುವುದು ನರರ[5] ವಿವೇಕವಿಜ್ಞಾನ ।
ಜಲವ ಘಟದಲಿ ತೀವಿ [6]ಛಿದ್ರವ[6]
ಕಳಚಿದ ವೊಲಿಂತಿದನಱಿ[7]ತು[7] ನಿ
ರ್ಮಳ ಜಿತೇಂದ್ರಿಯನೆನಿಪುದವನೀಪಾಲ ಕೇಳೆಂದ ॥

ಇಳೆಯನಪ್ರಾಪ್ತಿಯಲಿ ಗೋಷ್ಪದ
ದಳತೆಯನಿತುವನೊತ್ತಿಕೊಂಡವ
ನಿಳಿಗು ನರಕದೊಳೆಂದು ಸಾಱುಗು ವೇದಕೋಟಿಗಳು ।
ತಿಳಿದು ಪಾಂಡವರಾಯ ಧರಣೀ
ವಳಯವೆಲ್ಲವ ಪುತ್ರಮೋಹದಿ
ಸೆಳೆದ ದುಷ್ಕರ್ಮಕ್ಕೆ ನಿಷ್ಕೃತಿಯುಂಟೆ ಹೇಳೆಂದ ॥

---

[1] ನೀ ಜಗದೊಳಿರೆ ಮದ್ದು (ಝ) [2] ಗೆ (ಝ) [3] ನಾವರಗೆ (ನ) [4] ಳಳಿವ (ಚ ಡ) [5] ಲೆಸವುದು ಪಸರಿಸುವುದು (ಜ) [6] ಚಿತ್ರವ (ಜ ಣ) [7] ದು (ಡ ಣ ಪ)

(ಖ ಗ ಜ ಡ ಣ ಬ) ಪ್ರತಿಗಳಲ್ಲಿ ೧೧ಲನೆಯ ಪದ್ಯವಾದ ಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

[1]ಜಾತ[1]ರೂಪದ ಲೇಸು [2]ಹೊಲ್ಲಿಹ[2]
ವೀತಿಕೋತ್ರನ [3]ದೇಹಕಾರಣ[3]
[4]ಭೂತವಾಗಿಹುದವಗೆ ಸದಸತ್ತುಗಳ[4] ಭೇದವನು ।
ನೀತಿಮುಖದಿಂದಱಿ[5]ವುದು[5]ತ್ತಮ
ನೀತ ಮಧ್ಯಮನೀತ [6]ಕನಿಯಸ[6]
ನೀತನೆಂಬುದನರಸ ಚಿತ್ತೈಸೆಂದನಾ ವಿದುರ ॥

(ರ ದ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಕ್ರೂರಸತಿಯರ ಹೃದಯವೆಂಬುದು
ಕ್ರೂರದೊಳು ಖರಕ್ರೂರಸ್ತ್ರೀಯರು
ಕ್ರೂರತನದಿಂದಾತನಱಿಯರು ಸ್ತ್ರೀಯರೆಂಬವರು ।
ಕ್ರೂರಪತಿ ಸುತರಿಲ್ಲದಾ ಸತಿ
ಕ್ರೂರವೆಂಬುದ ಕೇಳಿದರಿಯಾ
ಕ್ರೂರೆಯಹ ಸತಿಯರನು ಬಿಡು [7]ನೀನೆಂದನಾ ವಿದುರ[7] ॥

(ಚ ಪ ಯ) ಪ್ರತಿಗಳಲ್ಲಿ ೧೧ಲನೆಯ ಪದ್ಯವಾದ ಮೇಲೆ ಮುಂದಿರುವ ಮೂರು ಪದ್ಯಗಳು ಹೆಚ್ಚಾಗಿವೆ

ಅರಸ ಕೇಳ್ ಬಿಲುವಿದ್ಯೆಯಲಿ ಮೂ
ವರು ಕಣಾ ಸಾಮರ್ಥ್ಯಪುರುಷರು
ಧರೆಯೊಳೊಬ್ಬರಿಗೊಂದುಗುಣ ಪಾರ್ಥಂಗೆ ಮೂಱುಗುಣ ।
ಭರಿತವಾಗಿಹುದಾತನಿದಿರಲಿ
ಧುರದೊಳಗೆ ಮಾಱಾಂತು ಜೀವಿಸಿ
ಮರಳಬಲ್ಲವನಾವನೈ ಹೇಳೆಂದನಾ ವಿದುರ ॥

ರಾಮಚಂದ್ರನ ಚರಣಯುಗನಿ
ಸ್ಸೀಮ ಭೀಷ್ಮಾಚಾರಿಯನ [8]ಶಿರ[8]
ವಾ ಮಹಾರಥದ್ರೋಣರೆದೆ ನಡುಗುವುದು ಕದನದಲಿ ।

---

[1] ಜಾತಿ (ಣ ಬ) [2] ಹೊಲ್ಲೆಗೆ (ಖ), ಕಷ್ಟಕೆ (ಗ ಡ) [3] ಲಡಗೆ ಕಾರಣ(ಖ), ದಾವಕಾರಣ (ಜ), ದೇಹಿದೇಹಿಗೆ (ರ), ದೆಸೆಗೆ ಕಾರಣ (ನ) [4] ಭೂತನಾಗಿ ಹನವಗೆ ಸದಾ ಶತ್ರುಗಳ (ನ ಬ) [5] ವನು (ಖ) [6] ನಧಮನು (ಖ), ಕನಿಷ್ಠನು (ಜ ಠ ನ) [7] ವುದು ರಾಯ ಕೇಳೆಂದ (ರ) [8] ಗಿರ (ಪ)

[1]ವ್ಯೈ[1]ಮನ[2]ಸ್ಯನು ನಿಷ್ಪ್ರಕಂಪ ಸ[2]
ನಾಮನರ್ಜುನದೇವನಿದಿರಲಿ
ಭೂಮಿಯಲಿ ಬಿಲ್ಲಾಳದಾವವನೆಂದನಾ ವಿದುರ ॥

ನರಕಪಾಲದೊಳಶ್ವಮಾಂಸವ
ಸುರೆಯುನೆಱೆದು ಚಿತಾಗ್ನಿಯಿಂದು
[3]ತ್ತ[3]ರಿಸಿದುದನನುಭವಿಸಿ ಸೊಕ್ಕಿದನಂತೆ ನರಕದೊಳು ।
ಧರಣಿಯಮರರ ವಸ್ತುಗಳನಪ
ಹರಿಸಿದವ ಕಾಲೂರಿಯಿ[4]ದಱೊಳು
ಸು[4]ರುಳಿದಡೆ ತವಗುಣವಯೋಗ್ಯವದೆಂಬ [5]ಭಯದಿಂ[5]ದ ॥

೧೧೬ನೆಯ ಪದ್ಯಕ್ಕೆ ಮೊದಲು (ಗ ಡ ಪ) ಪ್ರತಿಗಳಲ್ಲಿ ಮುಂದಿರುವ ೧೧ ಪದ್ಯಗಳು ಹೆಚ್ಚಾಗಿವೆ

ಚಲನವಿಲ್ಲದ ನಾಕದಿಂದಿಳಿ
ಗಿಳಿದವರ ಹೃದಯದಲಿ ನಾಲುಕು
ನೆಲಸಿಹವು ದಾನಪ್ರಶಂಸೆಯು ತಾರತಮತೆಗಳು ।
ಸುಲಲಿತದ ನುಡಿ ದೇವತಾರ್ಚನೆ
ಗಳು ಮಹೀಸುರವರರ ಪೂಜಾ
ವಳಿಗಳೆಂಬಿವು ರಾಯ ಚಿತ್ತೈಸೆಂದನಾ ವಿದುರ ॥

ನರಕದಿಂದೊಗೆದವರ ಕೃತ್ಯದ
ತೆರಳಿಕೆಗಳಿವಸೂಯೆ ಗುರುಧಿ
ಕ್ಕರಣೆ ಮಾತಾಪಿತರವಜ್ಞತೆಯಾಸುರದ ಕಲಹ ।
ಪರಗುಣಸ್ತುತಿನಿಂದೆಗಳು ಭೂ
ಸುರರ ಬದ್ಧದ್ವೇಷ ಜನಸಂ
ಹರಣವೆಂಬಿವು ನಿತ್ಯವಿಧಿಯಾಗಿಹವು ಕೇಳೆಂದ ॥

ಪಾತಕರ ಪದವಿಗಳು ಮಾಂಸ
ವ್ರಾತದಲಿ ಮಧ್ಯದಲಿ ವಿಷಮ
ದ್ಯೂತದಲಿ ದುರ್ಮಾರ್ಗಸುಖದಲಿ ಲಯವನೈದುವುದು ।
ಏತಕೀ ಪಿಚುಮಂದಫಲ ಸಂ
ಜಾತ ಬಲಿಭುಕ್ಕುಗಳಿಗಲ್ಲದೆ
[6]ಖಾತಿ[6]ಯಹುದೇ ಪರಮಹಂಸಾವಳಿಗೆ ಲೋಕದಲಿ ॥

---

[1] ಸಾ (ಚ) [2] ಸ್ಯವೆನಿಪ್ಪಕಂಪ ಸ (ಪ), ಧಿ ದೇಹಪ್ರಕಂಪನ (ಯ)
[3] ತ್ಕ (ಚ) [4] ಹದೊಳಗು (ಚ) [5] ರದಱಿಂ (ಚ) [6] ಧ್ರಾಂತಿ (ಜ)

ಪರುಷ ಸೋಂಕಲು ಲೋಹಕಾಂಚನ
[1]ಸರಿಸವಾಗದೆ[1] ಮಾಣ್ಬುದೇ ಮುರ
ಹರನ ನಾಮವನಱಿದು ಮಱೆಯದೆ ನೆನೆವ ಮನುಜರಿಗೆ ।
ಮರಳಿ ಜನ್ಮವದೆಲ್ಲಿಯದು ಹೇ
ಳರಸ ನಿನ್ನಯ ಭಾಗ್ಯಲಕ್ಷ್ಮಿಗೆ
[2]ಸರಿಯ ಕಾಣೆನು ಪೂರ್ವಪುರುಷರೊ[2]ಳೆಂದನಾ ವಿದುರ ॥*

ಧರೆಯೊಳಗೆ ಶುಚಿಯುಹನು ವೈಶ್ವಾ
ನರನು ಮಾಯಾಕ್ರಾಂತಿ ಹಿಂಗಿದ
ಪರುಮುರುಷಿ ಕವಿವರನು ಸುಕೃತಾಚಾರಿಯೆನಿಸುವನು ।
ಹರಿಹರಾತ್ಮನ ನಾಮಕೀರ್ತನೆ
ವೆರಸಿ ಬದುಕುವ[3]ನೊಬ್ಬ ನೀಯ್ಯೈ[3]
[4]ವರುಗಳಲ್ಲದೆ ಭುವನದೊಳಗನ್ಯತ್ರವಿಲ್ಲೆಂದ[4] ॥

ಸಮತೆ ಬೆಂಬಲವಾ[5]ಗಿ ಬ[5]ಹುದೈ
[6]ಸಮತೆಯುಳ್ಳವಗೇನಸಾಧ್ಯವು[6]
ಸಮತೆ[7]ಯಿಂದವೆ ಭುವನವೆಲ್ಲವು ತನ್ನದಾಗಿಹುದು[7] ।
ಸಮತೆ[8]ಯಲಿ ನೀ ನೋಡಿ ನಡೆವುದು[8]
ಸಮತೆ[9]ಯೆಂಬುದು ಸರ್ವ[9]ಸಾಧನ
ಸಮತೆಯನು ಬಿಟ್ಟಿಹುದು ಮತವಲ್ಲೆಂದನಾ ವಿದುರ ॥

ವಿದ್ಯೆಯಲಿ ವೈದ್ಯದಲಿ ಪರಹಿತ
ದುದ್ಯಮನ ಶೀಲರಲಿ ಪತಿಯಲಿ
ಸದ್ಯಮಿಯ ಯೋಗದಲಿ ನಿಜಗುರುಪದದ ಭಕ್ತಿಯಲಿ ।
ಸದ್ಯುಮಣಿತೇಜದಲಿ ಖತಿಯಲ
ವಿದ್ಯೆಯಂ ಮಾಳ್ಪರಿಗೆ ಮಹಿಯಲಿ
ಸದ್ಯಫಲವದು ತಪ್ಪದವನೀಪಾಲ ಕೇಳೆಂದ ॥

---

* ಈ ಗುರುತಿನ ಪದ್ಯವು (ಟ ರ ದ) ಪ್ರತಿಗಳಲ್ಲಿಯೂ ಇದೆ

[1] ಸರಕನ್ಯೆದದೆ (ಟ ದ) [2] ನರಹರಿಯ ನೆನಹುಂಟೆ ಹರುಷದೊ (ರ) [3] ನಾವನಾತನೆ (ಚ), ನೊಬ್ಬನೇ ನಾ (ರ ನ ಬ) [4] ಧರೆಯೊಳುತ್ತಮನಲ್ಲೈ ಭೂಪಾಲ ಕೇಳೆಂದ (ಚ), ಲ್ಪರುಗಳಲ್ಲದೆ ಭುವನದೊಳಗನ,ತ್ರವಿಲ್ಲೆಂದ (ರ ಬ), ಲ್ಪರುಗಳಲ್ಲದೆ ಭವನದೊಳಗಧಿಕರು ರಾಯ ಕೇಳೆಂದ (ನ) [5] ಗಲ (ಚ) [6] ಮಮಕರಿಸಿ ಸರ್ವಾಧಿಕಾರವು (ಚ) [7] ಯೋ ಸರ್ವಕೆ ನಿಧಾನವು ದೊರಕಲದು ಮುನ್ನ (ಚ) [8] ಯೋ ಸರ್ವಕ್ಕೆ ಸಾಧನ (ಚ) [9] ಯೋ ನಿಜರಾಜ್ಯ (ಚ)

ಪ್ರಾಣವೆಂಬುದನಿತ್ಯ ನಿತ್ಯಭಿ
ಮಾನವನು ರಕ್ಷಿಪುದು ಜಗದಲಿ
ಪ್ರಾಣವಳಿವುದು ಕೀರ್ತಿಯಾಚಂದ್ರಾರ್ಕವುಳಿದಿಹುದು ।
ಕ್ಷೋಣಿಪತಿ ವರಧರ್ಮಸಾರವ
ಕೇಣವಿಲ್ಲದೆ ಕೇಳಿ ಬದುಕಾ
ಪ್ರಾಣ ಪೋಪುದು ಕೀರ್ತಿಯುಳಿವುದುಯೆಂದನಾ ವಿದುರ ॥

ಅಱಿದಱಿದು ಬಂಧುಗಳ ಕೂಡಿಹು
ದಱಿದಱಿದು ಭಾಗ್ಯದಲಿ ಮೆಱೆದಿಹು
ದಱಿದು ನಿಜಸತಿ ಪುತ್ರಮಿತ್ರರುಯೆಲ್ಲ ಕೂಡಿಹುದು ।
ಅಱಿವಿನೊಳಗಱಿವ ಹುದುವೆಯು ತಾ
ಹಿರಿದು ಧನಧಾನ್ಯಂಗಳಿಂದವೆ
ಹರಿದು ಬಂಧುವ ಹಾರಡಿಹುದರಿದೆಂದನಾ ವಿದುರ ॥

ವನಿತೆಮಕ್ಕಳುವೊಡನೆ ಬಾರರು
ತನುಸಹಿತ ಬಂಧುಗಳು ಬಾರರು
ದಿನದಿನದೊಳೊದಗಿಸಿದ ದುಷ್ಕೃತ ಬೆನ್ನ ಬಿಡದಿಹುದು ।
ಅನವರತ ನೀನೊಲಿದು ಮಾಡಿದ
ವಿನಯಧರ್ಮಪರೋಪಕಾರವು
ನಿನಗೆ ಬೆಂಬಲವಾಗಿ[1]ಹುದು ಕೇಳೆಂದನಾ ವಿದುರ[1] ॥

ಸಾರ ಮೂಱೆನಿಸುವುದಲೇ ಸಂ
ಸಾರದೊಳು ಸತ್ಸಂಗ ವೇದಾ
ಚಾರಪರನಹ ಸುತನು ಕಾಶೀದೇಶವಾಸಿತ್ವ ।
ಧಾರುಣಿಯೊಳಿದಕಧಿಕವುಂಟೆಂ
ದಾರುಕೆಲಬರು ನುಡಿಯಲದು ನಿ
ಸ್ಸಾರ ಪಾರಂಪರಿಯಲೈ ಭೂಪಾಲ ಕೇಳೆಂದ ॥

ಮುಂದಿರುವ ಪದ್ಯವು (ಟ ರ ದ ಪ) ಪ್ರತಿಗಳಲ್ಲಿ ೧೨೪ನೆಯ ಪದ್ಯವಾದ ಮೇಲೆ ಹೆಚ್ಚಾಗಿದೆ

ಐದು ಮುಖವೀರೈದು ಭುಜ ಹದಿ
ನೈದು ಕಂಗಳ ವಿಗಡರುದ್ರನು
ಮೇದಿನಿಯ ಮೇಲೊಂದುಶಿರ ಭುಜವೆರಡನಳವಡಿಸಿ ।

[1] ಬಹುದೈ ರಾಯ ಕೇಳೆಂದ (ಚ)

ಆದಿಪುರುಷನು ಭೀಮವೇಷದಿ
ಯೈದಿ ಜನಿಸಿದನಾತನಿದಿರಲಿ
ಕೈದುಕಾಱನದಾವನೈ ಹೇಳೆಂದನಾ ವಿದುರ ॥

(ಟ ರ ದ) ಪ್ರತಿಗಳಲ್ಲಿ ೧೨ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಕರಸು ಯಮನಂದನನ ರಾಜ್ಯದ
ಸಿರಿಯನೀವುದು ನೋಡಿಕೊಡು ಕರಿ
ತುರಗ ರಥ ಭಂಡಾರವನು ದಾಯಾದ್ಯಭಾಗೆಯಲಿ।
ಹಿರಿಯ ಭೀಷ್ಮದ್ರೋಣರನಿಬರ
ಕರಸಿ ಕೊಡು ಮುಂದಿಟ್ಟು ರಾಜ್ಯವ
ನರಸ ಕೊಟ್ಟಡೆ ಕೀರ್ತಿಯುಳಿವುದುಯೆಂದನಾ ವಿದುರ ॥

(ಕ ಖ) ಪ್ರತಿಗಳಲ್ಲಿ ಮುಂದಿರುವ ಪದ್ಯವಾದ ಮೇಲೆ ಮೂರನೆಯ ಸಂಧಿ ಮುಗಿದಿದೆ

ನುತಕುಮಾರವ್ಯಾಸಮುನಿಯಾ
ಕೃತಿಗೆ ಕರ್ತೃವೆನಲ್ಕೆ ಸತತಂ
ಕೃತಿಚಮತ್ಕೃತಿಯೆನಿಸದೇ ತತ್ಸೂರಿಸಭೆಯೊಳಗೆ ।
ಕೃತಿಯು ಸತ್ಕರ್ಣಾಟಕಕೆ ಭಾ
ರತಕೆ ಮಂಜುಳಮಂಜರಿಗೆ ಮ
ತ್ಕೃತಿಗೆ ನಾಯಕನಾತ ಗದುಗಿನವೀರನಾರಯಣ ॥

---

*

## ನಾಲ್ಕನೆಯ ಸಂಧಿ

---

೨೮ನೆಯ ಪದ್ಯವಾದಮೇಲೆ (ಗ ಜ ಡ ಣ ಪ ಯ ರ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಧರಣಿ ಜಲದಿಂದಾದ ಭೋಜ್ಯವ
ಮರುತಪಾವಕರಾಹುತಿಯ ಕೊಳು
ತಿರಲು ದುಃಖಾವಾಸವಾಗನು ಸತತತನುವಾಗಿ ।
ಇರುತಿಹುದು ಪರಮಾತ್ಮನೆಂಬುದ
ನಱಿಯದೇ ತಾನುಂಡೆನೆಂಬೀ
ಪುರುಷನಾವವನವನ ಹೆಸರೇನೆಂದನಾ ಮುನಿಪ ॥

೪೬ನೆಯ ಪದ್ಯವಾದಮೇಲೆ (ಗ ಜ ಟ ಡ ಣ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಮೆಱೆದ ಸಚರಾಚರವಿದೆಲ್ಲವು
ನಿರುತ ತಾನೆಂದಱಿತು ತನ್ನಿಂ
ದಿರವು ಬೇಱಿಲ್ಲೆಂಬ ಕಾಣಿಕೆಯಾವನೊಬ್ಬನೊಳು ।
ಇರುತಿಹುದದಾವಂಗವನು ಸ
ತ್ಪುರುಷನಾತನ ಪೂಜಿಸುವುದಿಹ
ಪರದ ಸುಕೃತವ ಬಯಸುವವರವನೀಶ ಕೇಳೆಂದ ॥

೪೯ನೆಯ ಪದ್ಯವಾದಮೇಲೆ (ಗಾ ಚ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಲವಲವಿಕೆಯಲಿ ಶೂದ್ರಿಯರ ಸಂ
ಗವನು ಬಯಸುವ ಭೂಸುರರು ರೌ
ರವದ ನರಕವನೈದುವವರಲ್ಲದೆ ವಿಪಾಯದಲಿ ।
ಅವಳ ಬಿಡದನುಭವಿಸಿ ಸಂತಾ
ನವನು ಪಡೆದವರುಗಳು ಬ್ರಾಹ್ಮ
ಣ್ಯವನು ರಚಿಸುವರೇ ಮಹೀಪತಿ ಚಿತ್ತವಿಸುಯೆಂದ ॥

೫೦ನೆಯ ಪದ್ಯವಾದಮೇಲೆ (ಟ ದ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ನೆರಹಿ ಧರ್ಮವನರ್ಘ್ಯವಾಗು
ತ್ತಿರೆ ಮಹಾರ್ಘ್ಯದೊಳಖಿಳವಸ್ತುವ
ದೊರಕಿಸುತ ಬಡ್ಡಿಯನು ಮೊದಲಿಂದಿಕ್ಕಿ ಲೆಕ್ಕವನು ।
ವಿರಚಿಸುವ[1][ರುಗಳಿಗಿಹಪರವಿ
ಲ್ಲರಸ][1] ಕೇಳೈ ಸರ್ವಕರ್ಮ
ಕ್ಕರುಹರಲ್ಲವರುಗಳು ಚಿತ್ತೈಸೆಂದನಾ ಮುನಿಪ ॥

೯೪ನೆಯ ಪದ್ಯವಾದಮೇಲೆ (ಖ) ಪ್ರತಿಯಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಪೃಥ್ವಿಸಲಿಲದಿ ಬೆಳೆದ ಬೆಳೆಯನು
ಮತ್ತೆ ತೇಜದಿ ಪಾಕಮಾಡಿಯೆ
ಭುಕ್ತಿಯನು ಪವನನೊಳು ಭುಂಜಿಸಿ ರೂಪುರೂಪಿನಲಿ ।
ತೃಪ್ತಿಯನು ಗಗನದಲಿ ನಡಸಿ ಸ
ಮಸ್ತಪರಿಣಾಮದಲಿಯಿಹ ಪರ
ಮಾರ್ಥವೆಂಬುದನಱಿಯದ್ದೈ ಜಗವೆಂದನಾ ಮುನಿಪ ॥ ?

೧೦೫ನೆಯ ಪದ್ಯವಾದಮೇಲೆ (ಖ ಚ ಟ ದ, ನ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಪಾಕಶಾಸನನೈದಿ ವೃತ್ರನ
ಢಾಕುಗೆಡಿಸಿ ದಧೀಚಿಯಸ್ಥಿಯು
ಲೌಕಿ ಹೊಯ್ಯಲು ದಾನವನ ತನು ನೀರೊಳಡಗೆಡೆಯೆ ।
ತೂಕಗುಂದಿ ಜಲಾಧಿದೇವತೆ
ಯಾ ಕಪರ್ದಿಯ ಕರುಣದಲಿ ದ
ರ್ಭಾಕೃತಿಯ ಕೈಕೊಂಡುದವನೀಪಾಲ ಕೇಳೆಂದ ॥

(ಪ ಬ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಶ್ರುತಿಗೆ ಪರಮೇಶ್ವರಗೆ ಲಕ್ಷ್ಮೀ
ಪತಿಯ ನಾಮಾವಳಿಗೆ ವರಭಾ
ರತದಲೊಂದೇ ಪಾದದಲಿ ಭವಭವದ ಪಾತಕವು ।
ಗತವಹುದು ನೋಡುವಡೆ ಪಂಚಮ
ಶ್ರುತಿಕಣಾ ವ್ಯಾಸೋಕ್ತಿಯೆಂಬುದು
ವಿತತ ತಪ್ಪದು ರಾಯ ಚಿತ್ತೈಸೆಂದನಾ ಮುನಿಪ ॥

---

[1] ವಾತನನುಯಿಹಪರನರಸ (ಟ ದ)

(ಗ ಡ ಪ ಯ ರ) ಪ್ರತಿಗಳಲ್ಲಿ ಮುಂದಿರುವ ಎಂಟು ಪದ್ಯಗಳು ಹೆಚ್ಚಾಗಿವೆ

ಬೆರಸಿದಂದದಲಿಹರು ಚಿತ್ತವ
ಬೆರಸಿಹರು ಬೇಱೊಬ್ಬರಲಿ ನಿಜ
ದೆರಕವೊಬ್ಬನೊಳಹುದು ಬೇಱೊಬ್ಬನೊಳಗೊಲವಿಹುದು ।
ಎರಡುಮನವೆರಡೊಡಲು ಚಿತ್ತದ
ಪರಿಯೆರಡು ಮೈಯೆರಡು ನಾರಿಯ
ರೆರಡನಲ್ಲದೆ ಬಗೆಯರವನೀಪಾಲ ಕೇಳೆಂದ ॥

ಜನಪ ಕೇಳ್ ಸಂಗಿಯನು ಕೃತಿಹೀ
ನನನು ಸೃಷ್ಟಾಗ್ನಿತ್ರಿತಯ ನಾ
ಶನನ ಬಹ್ವಾಶಿಯನು ಸತತಗ್ರಾಮಯಾಚಕನ ।
ಮನುಜನಿಂದನ ಶಪಥಕಾರಿಯ
ನನಭಿಷಿಕ್ತನ ನೀಚದೇವಲ
ಕನ ವೃಥಾ ಮಂದಿಗಳ ಪೂಜಿಪುದಂಗವಲ್ಲೆಂದ ॥

ವಹ್ನಿಪೂಜೆಯ ವಿರಚಿಸದೆ ದಿನ
ಹನ್ನೆರಡನುಳಿದವನು ಕಾಲದ
ಮನ್ನಣೆಗಳಲಿ ಸಂಜೆಯನು ಮಾಡದ ಮಹೀಸುರನು ।
ತನ್ನ ಮುಖದಿಂ ನಾಲ್ಕುವೇದವ
ಭಿನ್ನವಾಗಿಯೆ ಮಾಡುವವನುಱೆ
ಜನ್ಮಜನ್ಮದಿ ಶೂದ್ರನಹನೈ ರಾಯ ಕೇಳೆಂದ ॥

ತನ್ನ ಮುಖದಿಂದಾರ್ಜಿಸಿದ ಸಂ
ಪನ್ನಧನವುತ್ತಮವು ಪಿತೃಧನ
ವಿನ್ನು ಮಧ್ಯಮ ಮಾತೃಧನವು ಕನಿಷ್ಠ ಸತಿಯಧನ ।
ಸನ್ನಿಹಿತವಧಮಕ್ಕಧಮವದ
ಕೆನ್ನಳವೆ ಬಣ್ಣಿಸಲು ಪರಧನ
ದುನ್ನತಿಕೆಯುಪದೆಶೆಯ ಬದುಕನು ರಾಯ ಕೇಳೆಂದ ॥

ದೆಸೆಗಳೇ ವಾಸಸ್ಸು ರಾಜ
ಪ್ರಸರಣವು ನಿರ್ಲಜ್ಜೆ ಜಟೆ ರಂ
ಜಿಸುವ ಧೂಳೀಧೂಸರದ ಗಂಗಾಧರನ ಪೋಲು ।
ಎಸೆವ ಸುತರುಗಳಿಲ್ಲದಿರೆ ಶೋ
ಭಿಸುವುದೇ ಸಂಸಾರವೆಂಬುದು
ವಸುಧೆಯೊಳು ಪುಣ್ಯಾಧಿಕರುಗಳಿಗಲ್ಲದಿಲ್ಲೆಂದ ॥

ಯುವತಿಯರು ಪಾದಜ[1]ರೊಳಾವಿ
ರ್ಭವಿಸ[1]ಬಾರದವಾಟಿಕಾರಿಯು
ವವಿರಳಿತಜಪ ತೀರ್ಥಸೇವೆ ತಪಸ್ಸು ಮಂತ್ರಮುಖ ।
ಶಿವನ ಪೂಜೆಗಳುತ್ತಮಾಶ್ರಮ
ವಿವನಳುಕದಂಘ್ರೈಸೆ ನರಕಾ
ರ್ಣವದೊಳಗೆ ಮುಳುಗಾಡದಿಹರೇ ರಾಯ ಕೇಳೆಂದ ॥

ಕುಲಕೆ ಕಡೆ ಮಡದಿಯರು ಧನಸಂ
ಕುಲಕೆ ಕಡೆ ಬ್ರಹ್ಮಸ್ವ ನೃಪಸಂ
ಕುಲಕೆ ಕಡೆ ನಿರುಪಾಧಿ ಬ್ರಾಹ್ಮಣ್ಯಕ್ಕೆ ಕಟ್ಟಕಡೆ ।
[2]ನಿಲವಳಿಯದ ಸ್ವಾಂತರಂಗದ[2]
ಬಳಕೆಯಿಂತಿರಲಳಿವುಳಿವ ನೀ
ತಿಳಿದು ನಡೆವೈ ರಾಯ ಚಿತ್ತೈಸೆಂದನಾ ಮುನಿಪ ॥

ಕೆಸರಿಳೊಳಡಗಿರ್ದಾಳುತೇಳುವ
ಪಶುವನೊಂದನು ಬ್ರಾಹ್ಮಣಸ್ತ್ರೀ
ವಿಷಯದೊಳಗೊಂದೇ ಸೆರೆಯನಾ ಬ್ರಾಹ್ಮಣಾನನವ ।
ವಸುಧೆಯೊಳಗೆ ಕುಟುಂಬವೊಂದರ
ನಸಿಯನುದ್ಧರಿಸುವ ಮಹಾತುಮ
ರೆಸವರೈ ಸ್ವರ್ಗಾದಿಭೋಗದೊಳರಸ ಕೇಳೆಂದ ॥

೧೦೭ನೆಯ ಪದ್ಯವಾದಮೇಲೆ (ಖ ಗ ಚ ಡ ಣ ಪ ಯ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಮೇರೆದಪ್ಪಿದ ಜಪ ಸುಕಲ್ಪಿತ
ಧಾರೆಯುಡುಗಿದ ದಾನ ದರ್ಭಾ
ಕಾರವಿರಹಿತವಾದ ಸಂಧ್ಯಾವಂದನಾದಿಗಳು
ಪಾರವೈದದ ಶೌಚ ವಿನಯವಿ
ಹಾರವಿಲ್ಲದ ಪೂಜೆ ತಾವುಪ
ಕಾರಿಯಹವೇ ರಾಯ ಚಿತ್ತೈಸೆಂದನಾ ಮುನಿಪ ॥

---

[1] ರುಗಳು ನಿರ್ವಹಿಸ (ಡ ಪ ಯ) [2] ಹಲವಳಿಯವುಸ್ವಾಂತರಂಗಳ (ಗ ಡ ಪ ಯ)

ಮುಂದಿರುವ ಪದ್ಯವು (ಚ) ಪ್ರತಿಯಲ್ಲಿ ಮಾತ್ರ ಹೆಚ್ಚಾಗಿದೆ

ಉಚಿತದಿಂ ಸತ್ಪಾತ್ರವಱಿದಾ
ಸುಚರಿತರ ಸಂಗದಲಿ ಧರೆಯೊಳ
ಗಚರಿತದ ಧರ್ಮವನು ನಿರ್ಮಿಸಿ ಸದ್ಗತಿಯನೈದಿ।
ಸಚರಿತನು ಜನಿಸುವನು ಮತ್ತಾ
ಸುಚರಿತನು ತಾನೆನಿಸಿ ನಾಕದ
ಖಚರಿಯರೊಳಾಡುವನಲೈ ಧೃತರಾಷ್ಟ್ರ ಕೇಳೆಂದ ॥

---

# ಐದನೆಯ ಸಂಧಿ

---

## ಸೂಚನೆ ಪದ್ಯಗಳು

ಆಕೆವಾಳರು ಭೀಷ್ಮಗುರುಕೃಪ
ರಾ ಕುರುಕ್ಷಿತಿಪತಿ[1]ಯ ಕರಸಿ ವಿ
ವೇಕ ಬುದ್ಧಿಯನಂಧನೃಪ ಹೇಳಿಸಲು ನೃಪ ಜಱೆದ [1] ‖ಖ ಡ‖

ಬಂದು ಸಭೆಯಲಿ ಸಂಜಯನು ಕುರು
ನಂದನನ ಕಂಡವರು ತಮ್ಮೊಡ
ನಂದು ಬೆರಸಿದ ಮಾತನಱುಹಲು ಬೈದನಾ ಕರ್ಣ ‖ಝ‖

ರಾಯ ಕೇಳಾಸ್ಥಾನದಲಿ ರಿಪು
ರಾಯನಟ್ಟಿದ ಹದನನಾ ಕುರು
ರಾಯ ಕೇಳಿದು ಖತಿ ಮಸಗಿ ಸಂಜಯನನುಱೆ ಜಱೆದ
‖ಟ ದ ೧‖

ಹೇಳಿದನು ಸಂಜಯನು ಕುರುಭೂ
ಪಾಲನೊಳು ಕುಂತೀಕುಮಾರಕ
ರೇಳಿಗೆಯನಾ ಕೃಷ್ಣಪಾರ್ಥರು ನುಡಿದ ಮಾತುಗಳ ‖ಣ ರ‖

ಬಂದು ಸಂಜಯ ಕೃಷ್ಣಪಾಂಡವ
ರೆಂದ ಮಾತುಗಳೆಲ್ಲವನು ತಾ
ನೊಂದುಳಿಯದೆಲ್ಲವನು ವಿಸ್ತರಿಸಿದನು ಕುರುಪತಿಗೆ ‖ಮ‖

(ಣ ಯ ರ) ಪ್ರತಿಗಳಲ್ಲಿ ಮುಂದಿರುವ ಹೆಚ್ಚಿನ ಪದ್ಯವಾದಮೇಲೆ ೨ನೆಯ ಪದ್ಯವಿದೆ

ಸಾಲ ಮಕುಟದ ಮನ್ನೆಯರ ಭೂ
ಪಾಲಕರ ಮದದುಬ್ಬುಗೊಬ್ಬಿನ
ಬಾಳ ಚತುರಂಗವನು ಸಂಜಯನಾಗಲೀಕ್ಷಿಸುತ ।
ಮೇಳವಿಸಿದನೆ ಕುರುನೃಪತಿ ಜನ
ಜಾಲವನು ನೆರೆ ಲೇಸು ಪಾಂಡು ನೃ
ಪಾಲಕರ ಸಿರಿಗಧಿಕವೆಲ್ಲಿಯದೆನುತ ನಡೆತಂದ ‖

---

[1] ಗೆ ಹಿತವನು ನೂಕಿ ಹೇಳಲು ಕೇಳದವ ಸಂಗ್ರಾಮಕಮವಾದ (ಡ).

ಮೂರನೆಯ ಪದ್ಯವಾದಮೇಲೆ (ಡ) ಪ್ರತಿಯಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಮುನ್ನ ಸಭೆಯೊಳಗಾನು ನುಡಿದಾ
ಗನ್ನಗತಕದ ನುಡಿಗೆ ಭೂಪರು
ಭಿನ್ನರಾಗೊಡನೆದ್ದು ಬಳಿಕವಗಡಿಸಲೆನ್ನುವನು ।
ಮನ್ನಿಸಿದನಾ ಧರ್ಮಸುತನುರೆ
ಸನ್ನಿಹಿತದಲಿ ಮಱುದಿವಸ ಕರ
ದೆನ್ನ ಫಲುಗುಣಭೀಮರೊಡನಿಂತೆಂದನಸುರಾರಿ ॥

## ಎಂಟನೆಯ ಸಂಧಿ

(ಚ) ಪ್ರತಿಯಲ್ಲಿ ೧೩ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಆವಗಂತಪ್ರಿಯವದ್ಯೈದಾ
ರೀವರಗೆ ಕಾಂಚನದ ಬಟ್ಟಲ
ತೀವಿದಮೃತವ ಕೊಂಡು ವಿದುರ ಸಮರ್ಪಿಸಲು ಬಳಿಕ ।
ದೇವನೊಕ್ಕುಡಿತೆಯಲಿ ಕೊಂಡಾ
ಭೂವಳಯ ಜರರವನು ದಣಿಸಿದ
ನೇವೆ ಹೊಗಳುವೆ ಭಕುತಜನದುನ್ನತಿಯ ಘನತೆಯನು ॥

(ಗ ಚ ಟ ರ ಡ ಣ ಪ ಬ) ಪ್ರತಿಗಳಲ್ಲಿ ೩೮ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಸರದ ಸಿರಿಸಂಚಯದ ನಯಬಂ
ಧುರದ ಗಮಕದ ಹವಣನೋಜೆಯ
ಕೊರಳ ಚಿತ್ರಾಶ್ರಯದ ವೀಣಾರವದ ನಿಜದನಿಯ ।
ಪರಮಸಾಳಂಗದ ವಿದೇಶಿಯ
ನಿರುತ ಪರಿಣತಿಗಳೊಳು ಮಾರ್ಗದ
ನಿರುಪಮದ ಗಾಯಕರ ನಾಯಕರೆಸೆದರೊಗ್ಗಿನಲಿ ॥

(ಗ ರ) ಪ್ರತಿಗಳಲ್ಲಿ ೫೧ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ವಿಭವವೆಸದುದು ವಿಗಡನೂತನ
ದಭವನೋಲಗದಂತೆ ಘಾಳಿಪ
ರಭಸಿಗನು ರಣರಂಗಚಾಪಟಮಲ್ಲ ಕುರುರಾಯ ।
ಸಭೆಯ ನೆಡಗರಿಸಿದನು ಕರೆ ಕರೆ
ತ್ರಿಭುವನದಲತಿದ್ಮೈವ ಗಡ ಎಂ
ದಭಿನುತನು ಕಳುಹಿದ ವಿದುರನರಮನೆಗೆ ಪಡಿಹರರ ॥

(ಚ) ಪ್ರತಿಯಲ್ಲಿ ಮುಂದಿನ ಪದ್ಯವಿದೆ

ಸಭೆಯ ನೆಡಗರಿಸಿದನು ಸಕಲ
ಪ್ರಭುಗಳೊಡನಾ ಕರ್ಣಸೌಬಲ
ರಭಿಮತದಿ ಸೈಂಧವನು ದುಶ್ಶಾಸನರ ಮೇಳದಲಿ ।
ವಿಭವದಲಿ ಸಿಂಹಾಸನದ ಮೇ
ಲಭಿನಯದಿ ಕರೆಯೆಂದು ಹೇಳಿದ
ತ್ರಿಭುವನಕ್ಕಧಿದ್ಮೈವವನು ಕರೆಯೆಂದು ನೇಮಿಸಿದ ॥

(ಗ ಚ ರ ಡ ನ ಪ) ಪ್ರತಿಗಳಲ್ಲಿ ೪೬ನೆಯ ಪದ್ಯವಾದಮೇಲೆ ಮುಂದಿನ ೧೩ ಪದ್ಯಗಳು ಹೆಚ್ಚಾಗಿವೆ.

ನಳಿನವದನದ ಹೊಳೆವ ಕಡೆಗಂ
ಗಳ ಸು[1]ಕಾಂತಿಯ ನವ[1]ವಿಳಾಸದ
ಬೆಳವಿಗೆಯ ಶೃಂಗಾರದೊಯ್ಯಾರದ ವಿ[2]ಡಂಬನದ[2]
ಬಲುಮೊಲೆಯ ಹಂಸೆಗಳ ನಡೆಯಲಿ
ಬಲು[3]ಮನದ ಬಲುರತಿಗಳಂತ್ಯದ
ಬಳಲಿಕೆಯ ಬೆಬ್ಬಳೆಯ ವರಚೋಳತಿ[3]ಯರೊಪ್ಪಿದರು ॥

ತೋಳುಗಳ ಕೋಮಲತೆಗಳ ಬಂ
ಬಾಳ ಕೇಶದ ಕೊಂಕುಗುರುಳಿನ
ಲೋಲನಯನದ ದಂತಿಗಮನದ ಸುರಭಿಪರಿಮಳದ ।
ಲೀಲೆಯಲಿ ಸೊಗಸುವ ಮನೋಜನ
ಕೇಳಿಯಲಿ ಮಧ್ಯಮೆಯರೆನಿಸುವ
ಮಾಳವದ ಮಾನಿನಿಯರೆಸೆದರು ನೃಪನ ಸಭೆಯೊಳಗೆ ॥

ಸುರತಸೌಖ್ಯದ ಲಂಪಟತ್ವದ
ಕರಿಯ ಗಮನದ [4]ಗಿಳಿಯ ನುಡಿಗಳ[4]
ಗುರುನಿತಂಬದ ಶಶಿಯಬಿಂಬವನೇಳಿಪಾನನದ ।
ಪುರುಷರನು ಬಲುತೆಱದಿ ಮೋಹಿಪ
ಪರಿಮಳ[5]ಕೆ ಮಿಗೆ ಕವಿವ ತುಂಬಿಯ
ಸರಸಿಜಾಕ್ಷಿಯರೆಸೆದರಾ ಪಾಂಚಾಲನಾರಿಯರು[5] ॥

ಅಸಿಯಜಂಘೆಯ ವಿಕಟಜಘನದ
ಬಸಿಱಬಾಸೆಯ ಸೊಗಸು ಮಿಗೆ ರಂ
ಜಿಸುವ ನಡುವಿನ ಸುಳಿಯ ನಾಭಿಯ ವೃತ್ತಕುಚಯುಗದ ।
ಎಸೆವ ನಗೆಗಂಗಳ ವಿನೋದ
ಪ್ರಸರದೇಳ್ಗೆಯ ಕಾಮರಸ ಪಸ
ರಿಸುವ ಸುರತದ ಗುಜ್ಜರಿಯರೊಪ್ಪಿದರು ಸಭೆಯೊಳಗೆ ॥

---

[1] ಕರಣಾಂಗದ (ಚ ರ ಡ ನ) [2] ರಾಸದಲ (ರ) [3] ರತಿಯನಿನಿಯರಿಂಗೆ ತೋಱುವ ಬಲುಮೆಗಾತಿಯರೆನಿಪ ಚೋಳಾಂಗನೆ (ರ) [4] ನಯನಕಾಂತಿಯ (ರ) [5] ದ ಮೃಗಗಳಲ ತುಂಬಿಯಗುರುಳ ಪಾಂಚಾಲಾಂಗನೆಯರೊಪ್ಪಿದರು ಸಭೆಯೊಳಗೆ (ರ)

ಘನತರದ ನಖಹತಿಗೆ ಮುಖಚುಂ
ಬನದ ಸೌಖ್ಯಕೆ ನಾಗರೀಕರ
ಮನವೊಲಿದು ಕೈಕೊಂಬ ಸುರತದ ಚಪಳತೆಯೊಳೆಸೆವ ।
ಮುನಿಸು ಹರ್ಷಕೆ ಕಲಹ ಸರಸದ
ಕಿನಿಸುಗಳ ತುಂಗೋರುಜಂಘೆಯ
ವನಜಮುಖಿಯರು ಮೆಱೆದರಾ ಸೌರಾಷ್ಟ್ರನಾರಿಯರು ॥

ನುಡಿಯೊಳಮೃತದ [1]ರಸವನೇಳಿಪ[1]
ನಡೆಯೊಳಂಚೆಯನಣಕವಾಡುವ
ಕುಡಿತೆಗಂಗಳ ಬಲೆಯ ಬೀಸುವ ಕಾಮಿಮೃಗಕುಲಕೆ ।
ಬೆಡಗು ಮಿಗೆ [2]ಬಹುಕಾಮ[2]ಭೋಗದ
ಕಡಲೊಳಗೆ ವಿಟಚಯವ ಮುಳುಗಿಪ
ಕಡುಗರುವೆಯರು [3]ಸರಸಿಯರು ತೆಲುಗಿತಿಯರೊಪ್ಪಿದರು[3] ॥

ಲಲಿತಸುಖೆ ಸುರತಾಂಗಿ ಸರಸಿಜ
ದಳವಿಲೋಚನೆ ಮಧ್ಯರತಿ ವಿಟ
ನೊಲಿದಡೊಲಿಯುಳು ಬೆರಸಿ ಬೆರಸದೆ ಮನವ [4]ಬೈಚಿಡುವ[4] ।
ನಳಿನಮುಖಿ ಬೇಟದಲಿ ಬೇಗೆಯ
ಬೆಳಸುವಳು ಕಡುಚಪಳೆ ಸುರತದ
ಕಲೆಯನಱಿವ ಕಳಿಂಗವನಿತೆಯರೆಸೆದರೊಗ್ಗಿನಲಿ ॥

ಆಳಿಕಾತಿಸರೋಜಮುಖಿಯನು
ಕೂಲ[5]ರತಿ ಕಮನೀಯ[5] ರೂಪಿಣಿ
ಲೋಲಲೋಚನೆ ಕಠಿಣಕುಚಯುಗೆ ರಾಗವತಿಯೆನಿಪ ।
ಲೀಲೆಯಲಿ ಲೋಕವನು ಮೋಹಿಸಿ
ಸೋಲಿಸುವ ಸೊಬಗಿಯರು ಸಖಿಯರ
ಮೇಳವಣಿಯಲಿ ಮೆಱೆದರೊಡ್ಡಿಯ ದೇಶದಬಲೆಯರು ॥

---

1 ಮಳೆಯ ಕರೆವುತ (ರ) 2 ಮನಸಿಜನ (ಪ) 3 ತೆಲುಗಿತಿಯರೊಪ್ಪಿದರು ಸಭೆಯೊಳಗೆ (ರ ಪ) 4 ವಂಚಿಸುತ (ಗ) 5 ವತಿ ಕಾಮಿನಿ ಸು (ಗ).

ಗುರುನಿತಂಬದ [1]ಮಂದಗಮನದ
ತರಳನಯನದ[1] ಗೌರವರ್ಣದ
ಸರಸಿಜಾನನಕಾಂತಿಗಳ ಪಾಟಲಿಯ ಪರಿಮಳದ ।
ಪುರುಷಕೇಳಿಯ ಕುಹಕಭಾವದ
ಬೆರಕೆಗಳ [2]ಸಂಪೂರ್ಣಭಾವದ[2]
ತರುಣಿಯರು ಲೇಸೆನಿಸಿದರು ಗೌಳವದ ನಾರಿಯರು ॥

ಒಲಿಸಲಱಿಯರು ವಿಟರ ಚಿತ್ತವ
ನಿಲಿಸಲಱಿಯರು ಕೂರ್ತೊಡೆಯು ತಾವ್
ಹಲವುಮಾತಿನಲಸುವನೀವರು ಹುಸಿಯ ಹುರುಡಿನಲಿ ।
ಕಲಹವನು ಕಲ್ಪಿಸುವ[3]ರಭಿಮತ[3]
ಚಳಮನದಲಾಡುವರು ಸುರತ
ಕ್ಕೊಲಿದು ಕೂಡುವ ಮನದವರು ಮಲಹಿತಿಯರೊಪ್ಪಿದರು ॥

ಮುಸುಕಿನಲಿ ಮೂಲೋಕವನು ಮೋ
ಹಿಸುವ ಕಡೆನೋಟದಲಿ ಕಂಡವ
ರಸುವನಲ್ಲಾಡಿಸುವ ಕೂಟದೊಳಮರಪದವಿಯನು ।
ಹುಸಿಯೆನಿಸಿ ತೋ[4]ಱಿಸುವ ಮದನನ[4]
ಹೆಸರ ಬಿರುದನು ಜಗದೊಳಗೆ ಸಾ
ಱಿಸುವರೆಸೆದಿಹರಲ್ಲಿ ಹೊಯ್ಸಳದೇಶದಬಲೆಯರು ॥

ನೋಡಲಱಿಯರು ವಿಟ[5]ರ[5] ಚಿತ್ತವ
ಕೂಡಲಱಿಯರು ಬಳಸಿ ಬೇಟವ
ಮಾಡಲಱಿಯರು ಹಣವಿ[6]ನಾಸೆಗೆ[6] ಜೀವದುಳಿವೆಂದು ।
ಬೇಡಿ ಬೇಸಱಿಸುವ ವಿಲಾಸದ
ಜೋಡಿಗಳ ತೋಱಿಸುವ ಜವ್ವನ
ಗೇಡಿಗಳು ಚೆಲುವಾದರೈ ಕೊಂಕಣದ ವನಿತೆಯರು ॥

---

[1] ತರಳನಯನದ ಕರಿಯುಗಮನದ(ಗ) [2] ಸಂಪೂರ್ಣ ಕಲೆಗಳ (ಚ), ನಿಸ್ಸಾಳ ರಭಸದ (ರ) [3] ಲಲಿತರ (ಗ), ರತಿಸುಖ(ಚ), ಚಂಚಲ (ರ) [4] ಱುವ ಮನೋಜನ (ರ) [5] ನ (ಡ ನ ಪ) [6] ನಲಿ ಮಿಗೆ (ಡ ನ ಪ)

ಮುಡಿಯ ಭಾರದೊಳೊಲಿದು ತುಱು[1]ಬಿ[1]ದ
ತೊಡಬೆಗಳ ಚೆಲುವಿಕೆಯೊಳೂರ್ವಶಿ
ಪಡಿಯೆ ಸಾರೆಂಬಂತೆ ಮೆಱೆವೊಯ್ಯಾರದೊದಕೆಗಳ ।
ನಡಗರದಲಿ ನಿಸುಳಿ ನುಡಿಗೆ ತಲೆ
ಗೊಡಹಿಸುವ ಮಿಗೆ ನೆರೆದರಾದಡೆ
ಕಡೆಯ ಕಾಣಿಸದದಟೆಯರು ತುಳುವಿತಿಯರೊಪ್ಪಿದರು ॥

(ನ) ಪ್ರತಿಯಲ್ಲಿ ೫೪ನೆಯ ಪದ್ಯಕ್ಕೆ ಮೊದಲು ಮುಂದಿರುವ ಪದ್ಯವು ಹೆಚ್ಚಾಗಿದೆ

ಎನುತ ಮಂಚವನಿಳಿದು ಕೌರವ
ನಣಕ ಲೇಸಲ್ಲೆನುತ ವಜ್ರದ
ಗೋಣಿಯದೊಡ್ಡಿನ ಹೊನ್ನಹಾವುಗೆಯೊಳಗೆ ಕಾಲಿಡುತ ।
ಕುಣಿವ ಕಡೆಯ[ವ]ನೊದರಿಸುತ ಸಂ
ದಣಿಯ ಪರಿಜನದೊಳಗೆ ವಿದುರನ
ಮಣಿದಲೆಯ ಮೇಲಸುರರಿಪು ಕರವಿಟ್ಟು ನಡೆತಂದ ॥

೫೬ನೆಯ ಪದ್ಯವಾದ ಮೇಲೆ (ಗ ಚ ಝ ರ ಡ ನ ಪ ಯ) ಪ್ರತಿಗಳಲ್ಲಿ ಮುಂದಿರುವ ಐದು ಪದ್ಯಗಳು ಹೆಚ್ಚಾಗಿವೆ

ಸರಸಿಜಾಕ್ಷನು ಬಂದ ಯದುಕುಲ
ವರಶಿರೋಮಣಿ ಬಂದ ದಾನವ
ಶರಧಿವಡಬಾನಲನು ಬಂದನು [2]ಸಿರಿಯರಸ[2] ಬಂದ ।
ದುರಿತಕದಳಿ[3]ಕುರಾರ[3] ಬಂದನು
ಸುರಸಮೂಹಾರ್ಚಿತನು ಬಂದನು
ಅರಸು ಗದುಗಿನ ವೀರನರಯಣ ಬಂದನೋಲಗಕೆ ॥

ಯಾದವರ ಕುಲತಿಲಕ ಬಂದನು
ಸಾಧುಸಜ್ಜನರರಸ ಬಂದನು
ಮೇದಿನಿಯ [4]ರಿಪುವಿಪಿನದಹನ[4] ಕೃಶಾನುವಿದೆ ಬಂದ ।
ವೇದವೇದ್ಯನು ಬಂದನಿದೆ ಸನ
ಕಾದಿ ಪೂಜ್ಯನು ಬಂದನಬುಜಭ
ವಾದಿ ದೇವಪ್ರಿಯನು ಬಂದನು ನೃಪತಿಯರಮನೆಗೆ ॥

---

[1] ಗಿ (ಚ ಡ ಪ) [2] ಕಾಮಪಿತ (ಗ). [3] ಮದೇಭ (ರ) [4] ಭಾರಾಪಹಾರ (ರ).

ಕಂಡವರ ಕಡುದುರಿತರಾಶಿಗೆ
ಕೆಂಡವನು ಬೀಱುತ್ತ ಕೈಗಳ
ಮಂಡೆಗಾನಿಸಿದವರಿಗುದ್ಭವ ಕೋಟಿಗಳ ಕೊಡುತ ।
ಚಂಡಮತಿಯಲಿ ಹೊಗಳಿದವರಿಗೆ
ಹಿಂಡುಮುಕುತಿಯ ಬೀಱುತವೆಯು
ದ್ದಂಡದೇವನು ಬರುತಲಿರ್ದನು ನೃಪತಿಯೋಲಗಕೆ ॥

ರಾಮು ಬಂದನು ಸಕಲಮುನಿಜನ
ಪ್ರೇಮಿ ಬಂದನು ಪಾಂಡವರ ಸು
ಕ್ಷೇಮಿ ಬಂದನು ಲಕ್ಷ್ಮಣಾಗ್ರಜ ನಿಖಿಳದಾತಾರ ।
ಭೂಮಿಯೊಳಗರ್ಥವನು ಬೇಡ
ಲ್ಕಾಮಹಾತ್ಮನೆ ತಾನೆ ಬಂದನು
ಕಾಮಪಿತ ಮುರವೈರಿ ಬಂದನು ನೃಪತಿಯೋಲಗಕೆ ॥

ಸುರರ ಸಲಹಿದ ದೇವ ಬಂದನು
ನರನ ಜೀವ[1]ನ[1]ಸಖನು ಬಂದನು
ಪರಮಕರುಣೋದಯನು ಬಂದನು ಕಾಮಪಿತ ಬಂದ ।
ದುರುಳರಾವಣವೈರಿ ಬಂದನು
[2]ಸಿರಿಲತಾಂಗಿಯರಮಣ ಬಂದನು
ವರ ಅಹಲ್ಯೆಗೆ ಮೋಕ್ಷವಿತ್ತವ ಬಂದನೋಲಗಕೆ[2] ॥

(ಚ) ಪ್ರತಿಯಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಅಜಸುರಾರ್ಚಿತಚರಣ ಬಂದನು
ಸುಜನಜನರಕ್ಷಕನು ಬಂದನು
ತ್ರಿಜಗಪತಿಪಾವನನು ಬಂದನು ಸುರರ ಸಂರಕ್ಷ ।
ಅಜನಪೆತ್ತವ ಬಂದ ಲೋಕ
ತ್ರಿಜಗವಲ್ಲಭ ಬಂದ ದಾನವ
ಕುಜನ ದೈತ್ಯವಿಭಾಡ ಬಂದನು ನೃಪತಿಯರಮನೆಗೆ ॥

---

[1] ದ (ಡ ಪ)    [2] ವರದ ಬಂದನು ಸತಿಯಹಲ್ಯೆಯ ಸಿರಿಲತಾಂಗಿಯ ರಮಣ ಬಂದನು ನೃಪತಿಯೋಲಗಕೆ (ಡ ನ ಪ ಯ)

(ರ) ಪ್ರತಿಯಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ರಾಮು ಬಂದನು ಭಕ್ತಜನನು
ಪ್ರೇಮಿ ಬಂದನು ಯಾದವಾಂಬುಧಿ
ಸೋಮ ಬಂದನು ಭಾಗವತಜನ ಲೋಲುಪನು ಬಂದ ।
ಕಾಮಿನಿಯ ಮೊಱೆಗೇಳಿ ಸಲಹಿದ
ಪ್ರೇಮಿ ಬಂದನು ನೀಲಕುಮುದ
ಶ್ಯಾಮ ಬಂಡನು ಕೌರವೇಂದ್ರನ ರಾಜಮಂದಿರಕೆ ॥

(ಯ ರ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ದೇವ ಲಕ್ಷ್ಮೀಕಾಂತ ವರರಾ
ಜೀವಲೋಚನ ಭಕ್ತವತ್ಸಲ
ರಾವಣಾಂತಕ ಗೋಪವೇಷಭಯಾಪವಿಲಹಾಸ ।
ದೇವಕೀನಂದನ ಯಶೋದಾ
ದೇವಿಯುನ್ನತಪುಣ್ಯ ನೆನೆವರ
ಕಾವ ದೇವನು ಬಂದ ಕೌರವರಾಯನರಮನೆಗೆ ॥

(ರ ಯ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಸುರಗಣಾಧ್ಯಕ್ಷಕನು ದಾನವ
ರರಸ ಜನಶಿಕ್ಷಕನು ಕೋಮಲ
ಸರಸಿ[1]ಜೋದರವೈರಿ ಮದಮಾತಂಗ ಪಂಚಾಸ್ಯ[1] ।
ವರಭುವನಕುಕ್ಷಿಕನು ಪಾಂಡವ
ಧರಣಿಪರ ಪಕ್ಷಕನು ಕೌರವ
ಶರಧಿವಡಬಾನಲನು ಬಂದನು ನೃಪತಿಯೋಲಗಕೆ ॥

(ಕ ವ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ದೇವ ಸನಕಸವಂದ್ಯ ಬಂದನು
ದೇವ ಮುನಿಜನರಕ್ಷ ಬಂದನು
ದೇವ ದೇವನು ನೆನೆವ ಸುಜನರ ರಕ್ಷಿಸುವ ಬಂದ ।
ದೇವ ದೈತ್ಯಕುಠಾರ ಬಂದನು
ದೇವ ನರಕನವೈರಿ ಬಂದನು
ದೇವ ಕಂಸಾಮರ್ದ ಬಂದನು ನೃಪತಿಯರಮನೆಗೆ ॥

---

[1] ಜದ ಬಂಧುಕನು ವಂಶೋದ್ಭವಕೆ ನಿರ್ಮಲನು (ಯ)

(ಟ) ಪ್ರತಿಯಲ್ಲಿ ೭ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಬೀದಿಬೀದಿಯಲನಿಲಜಾತವಿ
ರೋಧಿಯರಮನೆಗೆಯ್ತರಲು ಕಮ
ಲೋದರನ ತಱುಬಿದರು ತಡೆದರು ದ್ವಾರವಟ್ಟದಲಿ ।
ಯಾದವನು ಬಂದಿಹನರಸ ಚಿ
ತ್ತೋದಯವ ಬೆಸಸೆನಲು ಬರಹೇ
ಳಾದರೆನುತವನೀಶ ದೂತರ ಕರೆದು ನೇಮಿಸಿದ ॥

೮ನೆಯ ಸಂಧಿ ಕೊನೆಯಲ್ಲಿ ಮುಂದಿರುವ ಪದ್ಯವು (ಟ ದ ಬ) ಪ್ರತಿಗಳಲ್ಲಿ ಹೆಚ್ಚಾಗಿದೆ

ಸಿರಿವರನು ಯಾದವರ ಕುಲದಲಿ
ವರಮಹಾತ್ಮನು ಕೃಷ್ಣರಾಯನು
ದುರುಳಕೌರವ[1]ನೀತಿ[1] ಯಾದವನೀತಿವಚನವನು ।
ಇರದೆ ಕೇಳುತ ಮನದೊಳಗೆ ಅತಿ
ಹರುಷದಿಂ ಕೌರವಗೆ ನುಡಿದನು
ಪರಮಕರುಣಾಸಿಂಧು ಗದುಗಿನ ವೀರನಾರಾಯಣ ॥

---

[1] ನೃಪತಿ (ದ, ಬ)

## ಒಂಬತ್ತನೆಯ ಸಂಧಿ

---

(ಖ) ಪ್ರತಿಯಲ್ಲಿ ೨ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಸವಬಲದೊಳನುಮಾನದಲಿ ಭೇ
ದವನು ನೆನೆವುದು ಹೀನಬಲರಲಿ
ತವಕಿಸದೆ ತನ್ನಂಘ್ರಿಗೆಱಗುಪ ನಯವ ನೆಗಳುವುದು ।
ಅವನಿಪರ ಬಲುಗೈಗಳೊಡನಾ
ಹವವ ನಿಶ್ಚೈಸದೇ ಸಂಧಾ
ನವನು ನೆನೆವುದು ಮಂತ್ರವಿದು ತಿಳಿಯೆಂದನಸುರಾರಿ ॥

ಅದೇ ಪ್ರತಿಯಲ್ಲಿ ೫ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಒಲುವ ವೈರಿಗೆವೊಳಗಹುದು ಬಲು
ಗಲಿಗಳಿಗ ಬಿನ್ನಾಣದಲಿ ಸಲೆ
ವೊಳಗುಮಾಡಲು ಕಲಿಯಬೇಹುದು ಭೂಮಿಪಾಲಕರು ।
ತಿಳಿಯೆ ನೀ ಪಾಂಡವರು ನಿನ್ನಲಿ
ಸಲುಗೆಯುಳ್ಳವರಹರು ಟೆಕ್ಕರಿ
ಗಳೆಯದೆನ್ನಯ ಮಾತ ಸಲಿಸಲು ಲೇಸು ನಿನಗೆಂದ ॥

೨೩ನೆಯ ಪದ್ಯವಾದಮೇಲೆ (ಖ ಗ ಚ ಟ ಡ್ನ ದ ನ ಯ ರ) ಪ್ರತಿಗಳಲ್ಲಿ ಮುಂದಿರುವ ೬ ಪದ್ಯಗಳು ಹೆಚ್ಚಾಗಿವೆ

ಕೆಡಿಸದಿರು ಧೃತರಾಷ್ಟ್ರ ಕುಲದಲಿ
ಕೊಡಲಿ[1]ಗಾವನು ಹೊತ್ತು[1] ವಂಶವ
ಕೆಡಿಸಿ ಕಳೆದರೆ ಹಾನಿವೃದ್ಧಿಗಳೆಲ್ಲ ನಿನಗಹುದು ।
ನುಡಿಗೆ [2]ನೀ ಮತಗೊಡದೆ *ಗರ್ವದ*[2]
[3]ಗಡಣದಲಿ ಮುಂದಱಿಯುದವದಿರ
ನೊ[3]ಡಬಡಿಸಿ ಪಾಂಡವರ ಸ್ವಾಮ್ಯವ ಕೊಡಿಸು ನೀನೆಂದ ॥

---

[1] ಯನು ನೀ ಹಡೆದು (ಖ), ಕಂಟಕನು ಹುಟ್ಟಿ (ರ) [2] ನೀ ಮತವಾದಡಾ ಖಳ (ರ) * ಹಿಸುಣರ (ಚ) [3] ನುಡಿಗಳನು ಧಾವಿಸದೆ ಧರ್ಮದರೊ (ಚ)

ಹಲಬರಜ್ಞಾನಪ್ರವೃತ್ತಿಯು
ಛಲದೊಳಗೆ ಕೈವಳಸಿ ನರಕದೊ
ಳಿಳಿ[1]ದ ಕಥೆ ಹಲವೆಂದು[1] ಗೌತಮಕಶ್ಯಪಾದಿಗಳು ।
[2]ತಿಳಿದು ನೀತಿಯ ಪದವ ತಂತ
ಮ್ಮೊಳಗೆ ಕೌರವಗಱುಹೆ[2] ಮುನಿಸಂ
ಕುಲದ ವಚನವ ಕಿವುಡುಗೇಳುತ ಮೊಗವ ತಿರುಹಿದನು ॥

ವ್ಯಾಸವಚನವನಾ ವಸಿಷ್ಠಮು
ನೀಶನೊಳು ನುಡಿಗಳನು [3]ಕೋವಿದ[3]
ಕೌಶಿಕನ [4]ಕಥನ[4]ವನು ಕೈಕೊಳ್ಳದೆ ಸುಯೋಧನನು ।
ದೇಶವನು ಪಾಂಡವರಿಗೀವ
ಭ್ಯಾಸವೆಮ್ಮೊಳಗಿಲ್ಲ ನೀತಿಯ
ರಾಶಿ[5]ಯಾ[5]ನಹೆನೆನ್ನನೊಡಬಡಿಸುವಿರಿ ನೀವೆಂದ ॥

ಮಗನೆ ಸೋಮಾನ್ವಯವ ನೀರಲಿ
[6]ಹೊಗಿಸ[6]ದಿರು ದನುಜಾರಿ ಮುನಿದರೆ
ತೆಗೆಯದಿರ ನಮ್ಮಸುಗಳನು ಪಾಂಡವರ ಸಂತೈಸು ।
ವಿಗಡತನ[7]ವಿದು ವಿರಸವಾ ಹಿಂ
ದೊಗೆದ ಜೂಜಿನ ಗಸಣಿ ಸಾಕೈ
ಮಗನೆ ಬೇಡಿದೆನೆಂದು ತಲೆವಾಗಿದಳು[7] ಗಾಂಧಾರಿ ॥

ಮಾತೃವಚನವ ಮಿಱಿ ನಿಮ್ಮಯ
ತಾತನಾಜ್ಞೆಯ [8]ನೂಕಿ ಹಿರಿಯರ[8]
[9]ಮಾತುಗಳನತಿಗಳೆದು ಹಿತವರ[9] ಮಾತ ಮನ್ನಿಸದೆ ।
[10]ನೀತಿ[10]ಯಲಿ ಮನಗೊಡದೆ ಘನಗ
ರ್ವಾತುರದಲವನಿಪರು ಬಳಸಲು
ಮಾತು ಹಲವಱಲೇನು ಕೆಡದಿರನೆಂದನಾ ವಿದುರ ॥

---

[1] ಮಮತ ಬೇಱೆಂದು (ಯ ರ) [2] ತಿಳುಹಲಂತಾಗಮರು ಹೊಸಕಥೆಗಳನು ಕೌರವಗಱಿಹೆ (ಚ), ತಿಳುಹಲವದಿರ ನೀತಿವಚನಮನಿಕೆಗಾಣುತ ಭೂಪ (ಯ ರ) [3] ಕನಲದ (ಟ ಯ ರ) [4] ವಾಕ್ಯ (ಚ), ವಚನ (ಟ ದ ಪ) [5] ನಾ (ಟ ದ) [6] ಮಗುಚ (ಯ ರ) [7] ಮನು ಬಿಟ್ಟು ಬಿಡು ನೀನಗಡುಮಾಡದೆ ಹಿಂದೆ ಜೂಜಿನ ಸೊಗಸು ಸಾಕೈ ಮಗನೆಯೆಂದಳು ಬಳಿಕ (ಟ ಯ ರ) [8] ನೆಣಸಲೊಲ್ಲದೆ (ಟ ರ), ಮಿಱಿ ಹಿತವರ (ಪ) [9] ನೀತಿಗಳ ಮೊಟ್ಟೈಸಿ ಹಿರಿಯರ (ಟ ಯ ರ) [10] ಖ್ಯಾತಿ (ಟ ಯ ರ).

ಇಳೆಯ ಭಾಗವ ಕೊಡನು ಸಮರಕೆ
[1]ಕಳನ[1] ಕೊಟ್ಟೆನು ಕೃಷ್ಣನನು ವೆ
ಗ್ಗಳಿಸಿ ಭೀಷ್ಮದ್ರೋಣಕೃಪಮೊದಲಾಗಿ ನಮ್ಮವರು ।
ಒಲವರವು ನಿಮಗುಳ್ಳಡೀಗಳೆ
ತೊಲಗಿ ಪಾಂಡವರತ್ತ ಜಾಳಿಸಿ
ಹಲವುನುಡಿಯಲಿ ಮುಂದುಗೆಡಿಸದಿರೆಂದು ಖಳ ನುಡಿದ ॥

(ಚ) ಪ್ರತಿಯಲ್ಲಿ ಮಾತ್ರ ಮುಂದಿರುವ ಪದ್ಯವು ಹೆಚ್ಚಾಗಿದೆ

ಧರ್ಮವಶದಲಿ ದೈವವಿಹುದಾ
ಧರ್ಮವಶದಲಿ ಜಯದ ಜೋಡಣೆ
ಧರ್ಮವಶದಿಂ ಸಕಲ ಸತ್ಯಜ್ಞಾನಸುಖವಿಹುದು ।
ಧರ್ಮವನು ಪಾಲಿಸುವರಾ ಸ
ದ್ಧರ್ಮ ಪಾಂಡವ ಭೂಮಿಪಾಲರೊ
ಳುಮ್ಮಹವ ಬಿಡು ಮಗನೆಯೆಂದನು ನೃಪಗ ಧೃತರಾಷ್ಟ್ರ ॥

೨೭ನೆಯ ಪದ್ಯವಾದಮೇಲೆ (ಖ ಗ ಚ ಟ ಡ ನ ಯ ರ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಸಲುವ ರಾಜ್ಯದ ಭಾಗವನು ನಿನ
ಗೊಲಿದು ಬಿಡುವರು ಗ್ರಾಮವೈದನು
ಸಲಿಸಿ ಪಾಂಡುಕುಮಾರರನು ನಿನ್ನತ್ತ ಮಾಡಿದರೆ ।
ಕುಲದ ಕೊಲೆ ತಪ್ಪುವುದು ಸದ್ಗತಿ
ಸುಲಭವಪ್ಪುದು ನಿನ್ನ ಮನದಲಿ
ಹೊಳೆದ ಹದನನು ಹೇಳೆನುತ ನೇವಿಸಿದನಸುರಾರಿ ॥

(ಗ ಚ ಟ ಡ ಣ ಪ ಯ ರ) ಪ್ರತಿಗಳಲ್ಲಿ ೩೩ನೆಯ ಪದ್ಯವಾದ ಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಹಗೆಯ ಸಂಧಿಯ ನೆವದೊಳೆಮ್ಮಯ
ಬಗೆಯನಱಿಯಲು ಬಂದೆ ಯಾದವ
ರಗಡುತನ ನಮ್ಮಲ್ಲಿ ಸಲ್ಲದು ಸಾಕು ನುಡಿಯದಿರು ।
ಹಗೆ[2]ಯನಾದಡೆ[2] ಕೊಂಡು ಬಾ ನಡೆ
ಮಗುಳ್ದೊಡಱಿಯಲು ಬಹುದು ನೀ ಹರಿ
ಹುಗಿಲು ಮಾಡುವ ಮಂತ್ರ ಸಾಕಿನ್ನೆಂದನವನೀಶ ॥

---

[1] ನೆಲನ (ಟ ಯ ರ) [2] ಗಳವದಿರ (ಚ). ಗೆ ಬಂದರೆ (ಟ.ಡ ದ.ಪ).

೩೪ನೆಯ ಪದ್ಯವಾದಮೇಲೆ (ದ ಪ) ಪ್ರತಿಗಳಲ್ಲಿ ಮುಂದಿರುವ ಪದ್ಯವೂ, (ರ) ಪ್ರತಿಯಲ್ಲಿ ಮುಂದಿರುವ ಪದ್ಯವನ್ನು ಬಿಟ್ಟು ಉಳಿದ ೧೩ಪದ್ಯಗಳೂ, (ಟ ಯ) ಪ್ರತಿಗಳಲ್ಲಿ ಮುಂದಿರುವ ೧೪ ಪದ್ಯಗಳೂ ಹೆಚ್ಚಾಗಿವೆ (ಗ ಚ ಡ ಣ ನ) ಪ್ರತಿಗಳಲ್ಲಿ ೩೪ನೆಯ ಪದ್ಯಕ್ಕೆ ಮೊದಲು ಈ ೧೪ ಹೆಚ್ಚಿನ ಪದ್ಯಗಳೂ ಇವೆ

ಖತಿ[1]ವಿಡಿದು ಮನದೊಳಗೆ[1] ಮಣಿಯದ
ಮತಗುಡದ ಫಣಿಕೇತನನ ಕಂ
ಡತುಲಬಲ ಗುರುಸಿಂಧುತನಯಾದಿಗಳ ಮೊಗನೋಡಿ ।
[2]ವೆತಿತ[2]ರವನಿ[3]ಯ[3] ಬಯಸಿ [4]ಕದನವ
ನತಿಮಥನದಲಿ ಬಗೆದೊಡೀಶನ[4]
ಸತಿಯ[5]ಕಿವಿಯೋಲೆಗಳು ತಿರವಲ್ಲೆಂದನಸುರಾರಿ[5] ॥

ಎಲವೊ ದ್ರುಪದನ ಮಗಳ ಮದುವೆಗೆ
ನೆಲನು ಬೆಸಲಾದಂತೆ ನೀ ಮೊದ
ಲೆಳಯ ರಾಯರು ನೆರೆದರಂದಿನ ಬಿಲ್ಲ ನೆಗಹುವಡೆ ।
ಉಲಿದು ಹೋರಿದು ಕೆಡೆದರಂದತಿ
[6]ಬಳರು[6] ಧನುವನು [7]ಮುಱಿದು[7] ತೆಗೆದ
ಗ್ಗಳದ ಯಂತ್ರವ ಜಯಿಸನೇ ನರನನುವ ನೀನಱಿಯ॥

ಅಡವಿಯಲಿ ಪಾಂಡವರ ಬೇಟೆಗೆ
ನಡೆದು ಬಂದರೆ ಮುನಿದು ಖಚರನು
ಹೆ[8]ಡಗು[8]ಡಿಯ ಬಿಗಿದಡರಿದನು ಗಗನವನು ಜಗವಱಿಯೆ ।
ಬಿಡಿಸಿದನಲಾ ನರನು [9]ಭೀಮನ[9]
[10]ಕಡನ ತಲೆಯಿದೆ ನಿನ್ನ ಕೊರಲಲಿ
ಸುಡು ನುಡಿಗೆ ಹೇಸಿದೆನು ಕೌರವಯೆಂದನಸುರಾರಿ[10] ॥

---

[1] ಯ ಹಿಡಿದನು ಶೌರಿ (ಚ ಟ ಯ) [2] ವ್ಯತಿಕ (ಚ ಟ ಡ ಯ) [3] ವ (ಗ) [4] ದನು ಬೇಡುತಿರೆ ಕದನವ ನೆನೆವ ಧೂಪನ (ಟ ಯ) [5] ರಾ ಕಿವಿಯೋಲೆಯಸ್ಥಿರ ವೞಿಯೆತಾನೆಂದ (ಟ ಯ) [6] ಖಳರು (ಗ ಟ್ಟ ಣ) [7] ತೊನೆದು (ಚ) [8] ಡೆವೆ (ಚ) [9] ಮಾರುತಿ (ಚ ಟ ಯ) [10] ಕಡಿದ ತಲೆಯಿದೆ ನಿನ್ನ ಕೈಯಲ ಸುಡು ನುಡಿಲವೋ ಪಾಪಿಕೌರವ ನುಡಿಯಲೇಕೆಂದ (ಚ),

ತುಱುಗಳನು ಹಿಡಿದೊಯ್ಯ[1]ಲಾಕ್ಷಣ
ವ[1]ಱಿಸಿ ಬಂದನುವೊಂದುರಥದಲಿ
[2]ತುಱುವ ಮರಳಿಚಿ ತಱುಬಿ ನಿಂದನು ಈ ಸಮರ್ಥರನು[2] ।
ಮುಱಿದು ಕೆಡಹಿದನೊಂದು ಬಾಣದಿ
ಕೊಱೆದು ಕೊಂದನು ನಿನ್ನ ಬಲವನು
ಬಱಿಯ [3]ಹಮ್ಮೆಯ[3] ಕೆದಱು[4]ವರೆ ನಮ್ಮೊಡನೆ ನೀನೆಂದ[4] ॥

ಎಲವೊ ನಿನ್ನಯ [5]ಭಂಗಕೋಟಿಗ
ಳೆಳತೆಗೆಯ್ದುವು ಕೈದುಗೊಂಡರೆ
ಯುಳಿಯಲಾಪವರುಂಟೆ ಕುಂತಿಯ ಮಕ್ಕಳದಿರಿನಲಿ[5] ।
ಗಳಹತನವನು ಮಾಡದಿರು ಕುರು
ಕುಲವ ಕೆಡಿಸದಿರಕಟ [6]ಕುಟಿಲನೆ
ತಿಳಿಯೆ ಕೈ[6]ಸಾಱಿದೆನು [7]ತೊಡಕಿದಡಳಿಯದಿರೆಯೆಂದ[7] ॥

ಬೇಡ ಮರುಳೇ [8]ಪಾಂಡವರು ಕೈ[8]
ಮಾಡಿದರೆ ನೀನುಳಿಯೆ ನಿನ್ನಯ
ಕೇಡು ತನ್ನದು ಡಿಂಗರಿಗರಪ[9]ಮಾನ[9]ವೊಡೆಯನದು ।
ಮಾಡು ಸಂಧಿಯನೊಲ್ಲದಿದ್ದೊಡೆ
[10]ನಾಡು ಮೆಚ್ಚದು ಸಲುವುದಪ[10]ಜಯ
ಜೋಡಿ ಮೇಲಣ ಹದನು ಸಾವನು ತಹುದು ನಿನಗೆಂದ ॥

---

[1] ಲಕೆಯೊಡನ (ಗ ಟ ಡ ನ ಯ) [2] ಉಱುಬಿದನು ತಱುಬಿದನು ಮುಱಿದನು ಈ ಸಮರ್ಥರನು (ಚ), ತುಱುವ ಮರಳಿಚಿ ತಱುಬಿ *ನಿನ್ನನು ನರ ಸಮರ್ಥರನು* (ನ) *ನಿಂದನು ನರ ಸಮರ್ಥನಲೆ (ಡ), ಉಱುಬಿದನು ತಱುಬಿದನು ರಣದಲ ಸಕಲ ಸಮರಥರ (ರ) [3] ಬಲುಮೆಯ (ರ) [4] ವರೆ ನಮ್ಮೊಡನೆ ಹೇಳೆಂದ (ಚ ಟ ಡ ನ ಯ), ತಿಹೆ ನೀನೆಂದನಸುರಾರಿ (ರ) [5] ತೊಡೆಗಳನು ಮಿಗೆ ಕಲಹದೊಳಗುಳಿಲಜನು ಹೊಯ್ಯಾಗುಳಿಹಿ ಕೊಂಬವರುಂಟೆ ಕುಂತಿಯ ಮಕ್ಕಳೈವರಲ (ರ) [6] ನೀನೇ ತಿಳಿದುಕೋ (ರ) [7] ಸಾಱಿದೆನೆಂದನಸುರಾರಿ (ಗ) [8] ಮತ್ತೆ ಸಾಱಿದೆ (ಚ ಟ ಡ ನ ಯ ರ) [9] ರಾಧ (ಚ ಟ ಡ ನ ಯ ರ) [10] ರೂಢಿ ಮೆಚ್ಚಳು ಸಲುವುದಪ (ಚ ಟ ಡ ನ ಯ), ರೂಢಿ ಮೆಚ್ಚದು ಬಳಿಕಲಪ (ರ).

ತುಱುಗಿ ಕಬ್ಬಕ್ಕಿಗಳ್ ಗೂಡಿನ
ಲೆಱಗುವಂತಿರೆ [1]ಪಾರ್ಥನಂಬುಗ
ಳುಱುಬಿ ನಿನ್ನಯ ದೇಹದಲಿ ಮುಱಿವಾಗ ಸೈರಿಸದೆ ।
ಒಱಲಿ ನೀ ಕೆಡೆವಾಗ ಸಂಧಿಯ
ಮುಱಿದ ವಿಧಿಯನು[1] [2]ಬಳಿಕ ನೆನೆಯದೆ[2]
[3]ಬಱದೆ ತೀಱುವುದಲ್ಲ ಖಳ ಕೇಳೆಂದನಸುರಾರಿ[3] ॥

ಕಿವಿ[4]ಗೆ ಕಠಿಣವು[4] ನಮ್ಮ ನುಡಿಯಿಂ
ದವನಿಪತಿ ಮುಖದಿರು[5]ಹದಿರು ಕೌ
ರವರ[5] ಸಂಗ್ರಾಮದಲಿ [6]ಕಡುಗಿದ[6] ಪವನನಂದನನ ।
ತಿವಿದ [7]ಬಲುಗದೆಹೊಯ್ಲಿನಲಿ ರೌ
ರವವ[7]ನದ ದಿಟವೆಂತು ಸೈರಿಸ
ದವಮತಿಗೆ ನೀ ಗಂಡನಹೆ ಮರುಳರಸ ಕೇಳೆಂದ ॥

ಲೀಲೆಯಲಿ ನೀನಖಿಳರಾಯರ
ನೋಲಗಿಸಿಕೊಳಲಲಸಿ ಕಾಲನ
ಕಾಲಕೆಳಗೋಲೈ[8]ಸುವುದು[8] ಕುಂದಲ್ಲವೇ ನಿನಗೆ ।
ಸೋಲು ತಪ್ಪದು ಭೀಮಪಾರ್ಥರ
ಕೋಲು [9]ಕೊಂಕು[9]ವುವಲ್ಲ ಧರಣಿಯ
ಲೋಲುಪತೆಯಿಂದಳಿಯಬೇಡೆಂದಸುರರಿಪು ನುಡಿದ ॥

* ಈ ವಿಜಯವೀ ಬಳಗವೀ ಸಿರಿ
ಯೀ ವಿಳಾಸತೆಯೀ ಸಮರ್ಥತೆ
ಯೀ ವಿಡಂಬತೆಯೀ ಸಮಗ್ರತೆ ಪಾಂಡವರ ಕೂಡೆ ।
ಭಾವಿಸಲು ಲೇಸಹುದು ಛಲದಲಿ
ನೀವು ಸಂದರೆ ಬಳಿಕ [10]ಮೆಱೆಯದು[10]
ಕಾವರಿಲ್ಲೆಲೆ ಭೂಪ ಮರುಳಾಳಾಪ ಬೇಡೆಂದ ॥

---

[1] ನರನ ಬಾಣಗಳಿರದೆ ಸೇನಾವನವ ಕಳಿದುಱೆ ನಿನ್ನ ಮೈಗಳಲ ಮುಱಿವ ಸಮಯದಿ ಮಱುಗುತೊರ್ವನೆ ಕರಗಿ ಸಂಧಿಯ (ಚ). [2] ಮಾಳ್ಪೆನೆಂದಡೆ (ಚ), ಬಳಿಕ ಬೈದರೆ (ಟ ಯ), ಬಳಿಕ ನೆನದರೆ (ರ) [3] ಬಱದೆ ತೀಱದು ಖೂಳ ಕೇಳಕಟೆಂದನಸುರಾರಿ (ಚ), ತಿರುಗುವುದೆ ಖಳ ನಿನ್ನ ನೀನಱಿಯೆಂದನಸುರಾರಿ (ರ) [4] ಕಠೋರವು (ರ) [5] ಹಿದರೆ ರೌರವದ (ಡ) [6] ಕನಲಿದ (ಟ ಯ ರ). [7] ತಿವಿಗಳ ಗದೆಯ ಹೊಯ್ಲಿನ ರವುಕುಳವ (ಡ.ಪ) [8] ಸಿದರೆ (ಟ ಡ ಯ ರ) [9] ತಪ್ಪು (ಟ ಯ ರ) [10] ಕಡೆಯಲ (ಚ)

* ಈ ಗುರುತಿನ ಪದ್ಯವು (ದ ಪ) ಪ್ರತಿಗಳಲ್ಲೂ ಇದೆ.

* ಈ ಕುಮಾರರನೀ ಪ್ರಧಾನರ
ನೀ ಕುರಾರಚತುಷ್ಟಯವನೀ
ಯಾಕೆವಾಳಿಕೆಯುಳ್ಳವರನೀ ಮಕುಟವರ್ಧನರ ।
ನಾಕದಲಿ ನೆಲಗೊಳಿಸಿ ನಿನ್ನವಿ
ವೇಕಶಿಖಿಯಾನು ನರನ ಬಾಣಾ
ನೀಕಜಲ ಮುಕ್ಕುಳಿಸದಿಹುದೇ ಎಂದ[1]ನಸುರಾರಿ[1] ॥

ಸಿಡಿಲು [2]ಕುಱಿ[2]ಗಳನುಱುಬಿ ತಿವಿವಂ
ತೆಡಬಲನನೊಡೆಹಾಯ್ದು ಪಲ್ಲವ
ಗೊಡೆಯ ಮುಱದೀಡಾಡಿ ಬಿರುದಿನ ಹಳವಿಗೆಯ ಕಡಿದು ।
ತೊಡೆಯ ಖಂಡಿಸಿ ನಿನ್ನ ಮಕುಟವ
ಹುಡಿಯೊಳೊರಸದೆ ಬಱದೆ ಬಿಡುವನೆ
ಜಡಿದನಾದರೆ ಭೀಮನಾತನ ಬಲುಹ ನೀನಱಿಯ ॥

ನರನ ಗಾಂಡೀವಪ್ರತಾಪ
ಸ್ಫುರಿತನಾರಾಚಪ್ರಚಂಡೋ
ತ್ಕರದ ದಾವಾನಲನಲೀ[3] ಕೌರವಕುಲಾರಣ್ಯ ।
ಉರಿದು ನಂದದೆ ಮಾಣದಧಿಕರೊ
ಳಿರದೆ ತೊಡಕುವುದಾಗದಂಬುದ
ನಱಿಯೆಯಾ ನೀನೆಂದು ಜಱೆದನು ಕೌರವಾಧಿಪನ ॥

(ಟ ಯ ರ) ಪ್ರತಿಗಳಲ್ಲಿ ೩೫ ನೆಯ ಪದ್ಯಕ್ಕೆ ಮೊದಲು ಮುಂದಿರುವ ಪದ್ಯವು ಹೆಚ್ಚಾಗಿದೆ.

ಬಿಡುವುದಿಲ್ಲವನಿಯನು ಪಾಂಡವ
ರೊಡನೆ ಬಾಳ್ವುದರಿಂದ ಹಿಮಗಿರಿ
ತಡಿಯೊಳಗೆ ತಪಮಾಳ್ಪುದೊಳ್ಳಿತು ಕೃಷ್ಣ ನೀ ಕೇಳು ।
ಕಡೆಯ ಮಾತಿದು ಭೂಮಿ ತನ್ನಯ
ಮಡದಿ ಮಡದಿಯ ಪರರ್ಗೆ ಕೊಡುವೆನೆ
ನಡವಳಿಯ ತಾನೊಲ್ಲೆ ಹೇಳದಿರೆಂದನಾ ಭೂಪ ॥

---

[1] ನಾ ವಿದುರ (ಟ ದ ಪ)   [2] ಗಿರಿ (ಗ)   [3] ವು ತಾನಳವಡಿಸದುದು (ಟ ಯ)

* ಈ ಗುರುತಿನ ಪದ್ಯವು (ದ ಪ) ಪ್ರತಿಗಳಲ್ಲೂ ಇದೆ. ಈ ಪದ್ಯವಾದ ಮೇಲೆ ೩೫ನೆಯ ಪದ್ಯವಿದೆ.

೩೭ನೆಯ ಪದ್ಯವಾದಮೇಲೆ (ಗ ಚ ಟ ಡ ಣ ದ ನ ಪ ಯ ರ) ಪ್ರತಿಗಳಲ್ಲಿ ಮುಂದಿರುವ ಸೂಚನೆ ಪದ್ಯವಿದೆ

ಭಯರಹಿತನಿರ್ಗುಣನನಮಲಾ
ದ್ವಯನ [1]ಬಂಧಿಸಲೆಂದು ಕುರುಪತಿ
ನಿಯಮಿಸಲು ಬೆಳಗಿದನು ಮುರರಿಪು ವಿಶ್ವರೂಪದಲಿ[1] ‖

ಸೂಚನೆ ಪದ್ಯವಾದಮೇಲೆ (ಗ ಚ ಡ ನ ಯ) ಪ್ರತಿಗಳಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ (ಟ ರ) ಪ್ರತಿಗಳಲ್ಲಿ ೩೭ನೆಯ ಪದ್ಯವಾದಮೇಲೆ ಈ ಪದ್ಯವಿದೆ

ದೃಗುಯುಗಳ ಕೆಂಪಾಗೆ ಕಾರ್ಬೊಗೆ
ನೆಗೆದುದುಸಿರೊಳು ಮುರಹರನ ಮಾ
ತುಗ[2]ಳ ಮೊನೆಯಂಬುಗಿದು[2] ನಟ್ಟವು ನೃಪನ ಚಿತ್ತದಲಿ ।
ಬಗೆಗೆ ಭೀಕರವಾಯ್ತು ಕರ್ಣಾ
ದಿಗಳ ವದನವ ನೋಡಿ ಕೃಷ್ಣನ
ಬಿಗಿಯಲೆಂದಳವಡಿಸಿದ[3]ರು ತಮತಮಗೆ ಕೌರವರು[3] ‖

(ಚ) ಪ್ರತಿಯಲ್ಲಿ ೩೭ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ಅಂಜದಿರಿ ನೀವೆನುತ ಹೇಳಲು
ಮುಂಜೆರಗ ಬರಸೆಳದು ಖತಿಯಲಿ
ಕುಂಜರನು ಕೇಸರಿಯ ಮುಱಿಯನು ತುಡುಕುವಂದದಲಿ ।
ಮಂಜು ಪವನನ ಸೆಱಗ ಮಾರಿಯ
ಮಂಜರನು ಗಿಳಿಯುಱಸುವಂತಿರೆ
ಕಂಜನಾಭನ ಬಿಗಿಯಲಳವಡಿಸಿದರು ನೇಣುಗಳ ‖

(ಗ ಯ) ಪ್ರತಿಗಳಲ್ಲಿ ೩೭ನೆಯ ಪದ್ಯವಾದಮೇಲೂ, (ಚ ಟ ರ) ಪ್ರತಿಗಳಲ್ಲಿ ೩೮ನೆಯ ಪದ್ಯಕ್ಕೆ ಮೊದಲೂ ಮುಂದಿರುವ ಪದ್ಯವು ಹೆಚ್ಚಾಗಿದೆ

ಖಳಲಲಾಮನ ಖತಿಮಿ[4]ಗುವ[4] ಕಂ
[5]ಗೆಲಸನನ್ನೆಗೆ ತಮತಮಗೆ ಕಳ
ವಳದೊಳಾ ದುಶ್ಯಾಸಕರ್ಣಾದಿಗಳು ಗಜಬಜಿಸಿ[5] ।

---

[1] ನನುಪಮಮಹಿಮ ಮುರವೈರಿಯನು ಬಂಧಿಸಲೆಂದು ಗಜಬಜಿಸಿದರು ಕೌರವರು (ನ) [2] ಳು ಮುಱುಮೊನೆಯಾಗಿ (ಗ), ಳ ಮೊನೆಯಂಬಾಗಿ (ಡ ನ) [3] ನು ಖತಿಮಿಗಿಲು ಕುರುರಾಯ (ಚ ಟ ನ ಯ ರ), ನು ಖತಿಯಿಂದ ಕುರುರಾಯ (ಡ) [4] ಗಲು (ಟ ಯ ರ) [5] ಣುಲುಹುಗಳ ಸನ್ನೆಯಲಿ ಕೆಲಕಡೆ ಮನೆಯೊಳಳವಡಿಸಿದರು ಸೌಬಲ ಕರ್ಣರೊಡಗೂಡಿ (ಚ).

ಮಿಳಿಗಳನು ಮುಸುಕಿನಲಿ ತೆಗೆತೆಗೆ
ದಳವಡಿಸಿದರು ಕಾಲವ ಜಲದಲಿ
ಕಲಕುವಂದದಿ ನೆಗಳಿದರು [1]ಸೌಜನ್ಯಬಾಹಿರರು[1] ॥

೪೩ನೆಯ ಪದ್ಯವಾದಮೇಲೆ (ಗ ಚ ಝ ಟ ಡ ನ ಯ) ಪ್ರತಿಗಳಲ್ಲಿ ಮುಂದಿರುವ ನಾಲ್ಕು ಪದ್ಯಗಳು ಹೆಚ್ಚಾಗಿವೆ.

ರೂಪಯುಕ್ತನರೂಪ ವಿಶ್ವ
ವ್ಯಾಪಿ ದುಗ್ಧಾಂಭೋಧಿವಾಸಿ ಕೃ
ಪಾಪರನ ನಿರುಪಮನ ನಿತ್ಯನ ನಿರ್ಮಳಾತ್ಮಕನ ।
ವೈಪರೀತ್ಯ ಚರಿತ್ರನನು ಚಿ
ದ್ರೂಪನನು ತನತನಗೆ ಕೌರವ
ಭೂಪತಿಯ ನೇಮದಲಿ ಬಂಧಿಸಲೆಂದು ನೆಗಳಿದರು ॥*

ಜಲನಿಧಿಯ ಕಾರ್ಬೊಗೆಯ ದೂರದ
ಸುಳುವಿನಂತಿರೆ ರಜ್ಜು ಸರ್ಪನ
ಬಳಕೆಯಂತಿರೆ ಸ್ವಪ್ನರಾಜ್ಯವಿಲಾಸದಂದದಲಿ ।
ತಿಳಿಯಲುಂಟಿಲ್ಲೆಂಬ ಮಾಯೆಯ
ಬೆಳವಿಗೆಗೆ ಜನಮನವ ಬಂಧಿಸಿ
ತೊಲಗಿದಾತನ ಹಿಡಿದು ಬಂಧಿಸಲೆಂದು ನೆಗಳಿದರು ॥

ವಿವಿಧಮುನಿಗಳ ಮನದೊಳಗೆ ಹೊಳ
ಕುವನು ಹೆಱಿಸಾರುವನು ಯೋಗಿಗ
ಳವಿರತಧ್ಯಾನದಲಿ ನಿಲುವನು ತೊಲಗಿ ಕಾಡುವನು ।
ಭುವನವನು ಬಸಿಱೊಳಗೆ ಧರಿಸುವ
ನವನಿಯಲಿ ತಾನೊಗೆವ ಲೀಲಾ
ವಿವರನನು ನಿಗ್ರಹಿಸ ಬಗೆದರು [2]ಭೂಪ ಕೇಳೆಂದ[2] ॥

---

* ಈ ಗುರುತಿನ ಪದ್ಯವು (ಪ) ಪ್ರತಿಯಲ್ಲಿಯೂ ಹೆಚ್ಚಾಗಿದೆ.

[1] ಸೌಬಲ ಜಯದ್ರಥರು (ಟ, ಯ, ರ) [2] ವೈವದೂಷಕರು (ಹ, ಟ, ಡ, ನ, ಯ).

* ತುಡುಕಲರಿಯವು ದಿವ್ಯಮಂತ್ರದ
ಗಡಣ ಬೊಮ್ಮಾದಿಗಳ ಸೋಂಕಿನ
ಗೊಡವೆಗಳು ಗೋಚರಿಸಲರಿಯವು [1]ಗರುವಹರಿಯಿರವ[1] ।
ಜಡಮತಿ[2]ಯ ಬಹುಮೂಢಜನರವ[2]
ಗಡಿಸಿ ದೇವನ ಬಿಗಿಯಲೆಂದಳ
ವಡಿಸಿದರು [3]ನೇಣುಗಳನೆಂದನು ಭೀಷ್ಮನಾ ನೃಪಗೆ[3] ॥

(ಗ) ಪ್ರತಿಯಲ್ಲಿ ೫೮ನೆಯ ಪದ್ಯವಾದಮೇಲೆ ಮುಂದಿರುವ ಪದ್ಯವು ಹೆಚ್ಚಾಗಿದೆ

ವಿದುರನಿಂತೆನುತಿರಲು ದುರಿಯೋ
ಧನನು ಕರ್ಣಾದಿಗಳ ನೋಡಲು (?)
ಕದುರಿದರು ದುಶ್ಶಾಸ ರವಿಸುತ ಶಕುನಿಸೈಂಧವರು ।
ಹೊದಱುಹುರಿನೇಣುಗಳ ಕೈಯೊಳ
ಗೊದಱಿಸುತ ತಮತಮಗೆ ಸನ್ನೆಯ
ನೊದವಿ ಮೊಗವನು ನೋಡುತಿರ್ದರು ಖಳರು ಕೇಳೆಂದ ॥

೫೮ನಯ ಪದ್ಯವಾದಮೇಲೆ (ಚ ಟ ಡ ದ ನ ಪ ರ) ಪ್ರತಿಗಳಲ್ಲಿ ಮುಂದಿರುವ ಎರಡು ಪದ್ಯಗಳು ಹೆಚ್ಚಾಗಿವೆ

ಬಳಲಿದವು ಶ್ರುತಿ[4]ರಾಶಿ[4]ಗಳು ನಿ
ರ್ಮಳ ಸು[5]ತೇಜವನಱಿಸಿ[5] ಮುನಿಸಂ
ಕುಲ[6]ವಚನ ಸಂಚರಿಸಿದವು ಸಿದ್ಧಾಂತಯೋಗದಲಿ[6] ।
ಸುಳಿವುದೋಱದ ವರ್ಣಭೇದಾ
ವಳಿಯನಱಿಯದ ದಿವ್ಯತೇಜದ
ನಳಿನನಾಭನು ಹಿಡಿದನಗ್ಗದ ವಿಶ್ವರೂಪವನು ॥

---

* ಈ ಗುರುತಿನ ಪದ್ಯವು (ಪ ರ) ಪ್ರತಿಗಳಲ್ಲಿಯೂ ಇದೆ

[1] ರುದ್ರಕೋಟಿಗಳ (ಟ ಯ ರ) [2] ಗಳುದ್ರೇಕತನವವ (ಟ ಯ ರ) [3] ಕೇಳೆಂದು ಭೀಷ್ಮನು ನುಡಿದನವನಿಪಗೆ (ಟ ಯ ರ), ಭೀಷ್ಮಾದಿಗಳ ಮಾತುಗಳ ಮನ್ನಿಸದೆ (ಚ ನ) [4] ಕೋಟಿ (ಚ ಟ ದ) [5] ಧಾಳರವಿಮಲ (ಟ ರ) [6] ವು ಜಯವಚನದಲಿ ಮುಳುಗಿತು ಹರುಷಜಲಧಿಯಲಿ (ಟ ರ).

[1]ಮಗುಳೆ ಗಜಬಜವಾಯ್ತು ಭೀಷ್ಮಾ
ದಿಗಳ ನುಡಿಗಳು ಬಳಲಿದವು ತಾ
ಳಿಗೆಗೆ ನೀರಸವಾಗೆ ಬೆಂಡೆದ್ದೊದಱಿದನು ಭೂಪ ।
[2]ಬಗೆದು ತವ೬ತವುಗೆದ್ದು ನೃಪನೋ
ಲಗದೊಳಸುರಾಂತಕನ ಕೈಗಳ
ಬಿಗಿಯಲೆಂದನುವಾಗೆ ಹಿಡಿದನು ವಿಶ್ವರೂಪವನು ॥

(ಗ ಚ) ಪ್ರತಿಗಳಲ್ಲಿ ಮುಂದಿರುವ ಮೂರು ಪದ್ಯಗಳಾದಮೇಲೆ ೫೫ನೆಯ ಪದ್ಯವಿದೆ

ಮುಂದುವರಿಯಲು ನಿಜಮಹಾಪ್ರಭೆ
ಯಿಂದಲದ್ಭುತವಾಗೆ ನೋಳ್ಪರಿ
ಗಿಂದು ಚೋದ್ಯವಿದೆನುತ ನೋಟಕಜನವು ಬೆಱಗಾಗೆ ।
ಒಂದು ಯೋಜನದಗಲದಳತೆಯ
ಲಂದವಹ ಕಾಯಾಗ್ರ ಸ್ಥೂಲದ
ಮಂದರಾಧರನಿರ್ದ ಮೂರ್ತಿಯ ಕಂಡುದಾಸ್ಥಾನ ॥

ಸಿಡಿಲ ಬಳಗವ ಹಿಡಿದು ಮುಪ್ಪುರಿ
ವಿಡಿದ ತೆಱನಂತಿರ್ದ ಕಣು ತಾ
ನಡಗಿ ನೋಡುವ ನೋಟ ಮೂಜಗವೆಲ್ಲ ಮೋಹಿಸಲು ।
ಕಡುಚಲುವ ಮೈ ನೀಲವರ್ಣದ
ತೊಡರ ಹರಹಿನೊಳೊಪ್ಪಿ ತೋಱುವ
ಜಡರ ಮನಕನುವಾಗಿ ಪೀತಾಂಬರದೊಳೊಪ್ಪಿದನು ॥

ಇಂದುಧರನಾ ಪಾರ್ವತಿಯು ಸಹ
ಬಂದು ಗಗನದಿ ನೋಡುತಿರಲಾ
ನಂದದಿಂದವೆ ತೋಱುತಿರಲಸುರರಿಪುವಂದವನು ।
ಬಂದು ದೇವನ ಘನತೆಯಲಿ ಸಲೆ
ನಿಂದು ಋಷಿಗಳು ದೇವತಂಡವು
ಕುಂದು ಹೆಚ್ಚನಿತಿಲ್ಲವೆನಲಂದಡರಿದರು ನಭವ ॥

---

[1] ಅಗಿವ (ಗ ಚ ಡ) [2] ವಿಗಡದುರ್ಯೋಧನನ ನೇಮದೋಳೊಗುವ ಕರ್ಣಾದಿಗಳು ಕೃಷ್ಣನ (ಚ).

ಮುಂದಿರುವ ಪದ್ಯವು (ಗ) ಪ್ರತಿಯಲ್ಲಿ ೬೫ನೆಯ ಪದ್ಯವಾದಮೇಲೆ ಹೆಚ್ಚಾಗಿದೆ

ಜಯತು ಯಾದವಕುಲಶಿರೋಮಣಿ
ಜಯತು ಸುರನರಫಣಿಪವಂದಿತ
ಜಯತು ಪಾಂಡವಕುಲ ಪ್ರತಿಷ್ಠಾಚಾರ್ಯ ಜಯ ಜಯತು !
ಜಯತು ಪರತರ ಪರಮಪುರುಷನೆ
ಜಯ ಜಯತು ಮುರಹರ ಮುಕುಂದನೆ
ಜಯತು ಕೃಷ್ಣನೆ ಕೃಪಾಳುವೆನುತ್ತಿರ್ದುದಾಸ್ಥಾನ ॥

---

## ಹತ್ತನೆಯ ಸಂಧಿ

೩೧ನೆಯ ಪದ್ಯವಾದ ಮೇಲೆ (ಚ) ಪ್ರತಿಯಲ್ಲಿ ಮುಂದಿರುವ ಎಂಟು ಪದ್ಯಗಳು ಹೆಚ್ಚಾಗಿವೆ

ಹಾಡಿದೆನೆ ಮನದಣಿಯೆ ನಾ ಕೊಂ
ಡಾಡಿದೆನೆ ನಿನ್ನುಪನು ಹರಿದೆಡೆ
ಯಾಡಿದೆನೆ ತಾನೊಮ್ಮೆ ತೊಟ್ಟಿಲೊಳುಪ್ಪವಡಿಸಿದೆನೆ ।
ನಾಡ ಬಾಲಕರಂತೆ ನೀನಡೆ
ದಾಡಿ ಬರಲಿದಿರೆತ್ತಿಕೊಂಡೆನೆ
ನಾಡ ಸಲಹುವ ನೃಪತಿ ಬಾರೆಂದಪ್ಪಿದಳು ಮಗನ ॥

ಮಗನೆ ಬಾರೈಯೆನ್ನ ಚಿತ್ತದ
ಲಗಲದಿಹ ಚಿಂತಾಮಣಿಯೆ ಬಾ
ಜಗದ ವಂದಿತನಾ ಜನಾರ್ದನ ಭಕ್ತ ನೀ ಬಾರೈ ।
ಪೊಗಳಲೆನ್ನಳವಲ್ಲ ದಾನದಿ
ಸುಗುಣರಿನ್ನಾರುಂಟು ಹೋಲುವ
ಮಗನು ನಿನ್ನವೊಲೆಂದು ಕರೆದಳು ಕುಂತಿ ವಿನಯದಲಿ ॥

ಕಂದ ಬಾರೈಯೆನ್ನ ಚಿತ್ತದಿ
ಕುಂದದಿಹ ಚಿಂತಾಮಣಿಯೆ ಬಾ
ತಂದೆ ಬಾರೈ ವರಜನಾರ್ದನಭಕ್ತ ನೀ ಬಾರೈ ।
ಇಂದು ಮೇದಿನಿಗೊಡೆಯ ಬಾರೈ
ತಂದೆ ಬಾರೈ ಕರ್ಣ ಎನುತವೆ
ಇಂದುಮುಖಿ ನಂದನನ ಕರೆದಳು ತನ್ನ ಹೊರೆಗಾಗಿ ॥

ಉದಯವಾಗಲು ಸೂರ್ಯನೆರಡಕೆ
ಪದಪುರಾಗಕೆ ಬರುವ ಸಮಯಕೆ
ಬುಧಜನಕೆ ಹದಿನೆಂಟು ಕೋಟಿಯನಿತ್ತ ದಾನದಲಿ ।
ಮುದದಿ ಮೆಚ್ಚಿಸುತಿಹನೆ ಬಾರೈ
ಸದಮಳಜ್ಞಾನಿಗಳ ಮಸ್ತಕ
ಕದನಗಲಿ ಬಾಯೆಂದು ಕರ್ಣನ ಕರೆದಳಾ ಕುಂತಿ ॥

ಮಾತೆ ಕೇಳೌ ಎನ್ನ ಮಾತನು
ತಾತರಿಬ್ಬರದೇನು ನಿಮ್ಮೊಳು
ಜಾತಿಸಿದ ಪರಿಯೇನು ನಿಮ್ಮಡಿ ಬಂದ ಹದನೇನು ।
ಜಾತಕ್ಷತ್ರಿಯ ಪಾಂಡುರಾಯನ
ನೋತು ನೀ ವಧುವಾದ ಪರಿಯನು
ಆತನಂದಾ ತಾತನೆಂಬುದ ತಿಳಿಯ ಹೇಳೆಂದ ॥

ಮಗನೆ ಕೇಳೈ ಕುಂತಿಭೋಜಗೆ
ಮಗಳಹೆನು ತಾ ತನ್ನ ಬಾಲ್ಯದಿ
ಮಗುವುತನದಲಿ ಬೆಳವುತಿರಲಾ ಕನ್ನಿಕೆಯಬೆನಿಸಿ ।
ಅಗಣಿತಾಂಬುಜಸೀಮೆಗೇರಿಗೆ
ಮಿಗೆ ಪಿತನು ಕಾಳಗಕೆ ನಡೆಯಲು
ವಿಗಡ ಮುನಿಪತಿ ತನ್ನ ಮನೆಗೈತಂದ ದೂರ್ವಾಸ ॥

ಬಂದ ಮುನಿಗಳಿಗರ್ಘ್ಯಪಾದ್ಯವ
ನಂದದಿಂ ತಾನಿತ್ತೆ ಭಕ್ತಿಯೊ
ಳಂದು ಶುಶ್ರೂಷೆಯಲಿ ಸತ್ಕರಿಸುತ್ತ ತಾನಿರಲು ।
ಇಂದುಮುಖಿ ಬಾ ತಾಯೆ ಎನುತವೆ
ಮುಂದಣುತ್ಪಾದನೆಗೆ ಕಾರಣ
ವೆಂದು ಕಿವಿಯೊಳಗೈದುಮಂತ್ರವನಿತ್ತ ಮುನಿಯೆನಗೆ ॥

ಆ ಮಹಾಮುನಿವರನ ಮಂತ್ರದಿ
ಕಾಮಿಸಿದೆ ಶಿಶುವೆಂದು ತಾನುರೆ
ವ್ಯೋಮಪುರುಷನು ಬರಲು ನಿನ್ನುತ್ಪತ್ತಿಯಾಯ್ತಿಲ್ಲಿ ।
ಭೂಮಿಯೊಳಗಪಕೀರ್ತಿಗೋಸುಗ
ವೀ ಮಹಾಸತಿ ಗಂಗೆಗಿತ್ತೆನು
ಸೋಮಕುಲನಿಸ್ಸೀಮ ಬಾರೆಂದಪ್ಪಿದಳು ಮಗನ ॥

——————

## ಹನ್ನೊಂದನೆಯ ಸಂಧಿ

(ಗ) ಪ್ರತಿಯಲ್ಲಿ ೧೩ನೆಯ ಪದ್ಯವಾದಮೇಲೆ ಮುಂದಿರುವ ೬ ಪದ್ಯಗಳು ಹೆಚ್ಚಾಗಿವೆ

ತಡಿಯ ಹೊಲಿಸುವ ಜೋಡುಗಳನೆಡ
ಬಿಡದೆ ಹಮ್ಮುಗೆಗಳನು ಬಲಿಸುವ
ಕಡಿವಣವ ಕಬ್ಬಿಗಳ ವಾಗೆಯ ಬಿಗಿಯ ತಾಪಣಿಯ ।
ಸಡಗರಿಸಿ ಸಂಹರಿಸಿ ಹಲ್ಲಣ
ಒಡೆಯ ಹೊಂಬರಹದ ಸುರೇಖೆಯ
ನುಡಿಯಲರಿದನೆ ಜೋಡಿಸಿತು ರಾವುತರು ನಿಮಿಷದಲಿ ॥

ಗುಳವೊರಜೆಯಡಿವೊರಜೆ ಬೆನ್ನಿನ
ಮಿಳಿಯ ಜಾಳಿಗೆವೊರಜೆಯೊಪ್ಪುವ
ಹೊಳೆವ ಗಂಟೆಯಲಂಕುಶದ ಹೊರೆಗಳ ಬಡಿಗೆಗಳನು ।
ಪ್ರಳಯರವಿಗಳ ರಶ್ಮಿಯಂತಿರೆ
ಬೆಳಪ ಜುಂಚೆಯನಾಯುಧವ ಕೈ
ಗೊಳಿಸುತಿರ್ದರು ಕರಿಯ ಸಜ್ಜೋಡುಗಳ ಮಾವುತರು ॥

ಗಾಲಿಗಳನಳವಡಿಸಿಯಚ್ಚಿನ
ಕೀಲುಗಳ ಬಲಿವುತ್ತ ಹಲಗೆಯ
ಸಾಲ ಜೋಡಿಸಿ ಧ್ವಜಪತಾಕಾಜಾಲವನು ರಚಿಸಿ ।
ಕೋಲುಗಳ ಬಲಿವುತ್ತೆಯಾಚಿನ
ಜಾಲ ಸುತರುವಿದಶ್ವಚಯವನು
ಲೀಲೆಯಿಂದಳವಡಿಸುತಿರ್ದುದು ರಥಿಕಸಂದೋಹ ॥

ಇನಿತು ಗಜ ಹಯ ರಥ ಪದಾತಿಯ
ಘನತರದ ಸಂವರಣೆಗಳ ತನ
ತನಗೆ [ಸ]ಜ್ಜೋಡುಗಳ ಜೋಡಿಸಿ ತಂದುಪಪ್ಲವದಿ ।
ಜನಪ ಪಾಂಡವರಿರದೆ ನಾಳಿನ
ದಿನ ಕುರುಕ್ಷೇತ್ರಕ್ಕೆ ಪಯಣವ
ಮನಗೊಳಿಸಲಿನನಪರಪರ್ವತದಗ್ರವೇಱಿದನು ॥

ನಡೆಯು ಭರವಡಗಿತ್ತು ಜರೆ ತನ
ಗಡಸಿತೆಂದತಿನೊಂದು ಖಾತಿಯು
ಕಡುಹು ಕುಂದಿತು ತೇಜವಡಗಿತು ತನ್ನ ರಶ್ಮಿಗಳ ।
ಕಡುಕುಜನಮನದಂತೆ ಕತ್ತಲೆ
ಹೊಡಕರಿಸುತಿರೆ ಕಂಡು ಕಡುಸಿ
ಗ್ಗಡಸಿ ಬಿದ್ದನು ರವಿಯೆನಲು ಅಸ್ತಮಯ ರಂಜಿಸಿತು ॥

ಅರಸ ಸಂಧ್ಯಾದೇವಿಯುರನುಪ
ಚರಿಸಿ ಶೌರಿಯು ಪದಯುಗವ ನೆನೆ
ದರಿವಿದಾರಣ ಕರಸಿದನು ದ್ರುಪದಾದಿನಾಯಕರ ।
ಬರಿಸಿ ಕೃಷ್ಣಂಗೆಱಗಿ ನಾಳಿನ
ಧುರಕ ದಳಪತಿಯಾವನೆಂಬುದ
ಕರುಣಿ ಬೆಸಸ್ಯೆ ತಂದೆಯೆನಲಿಂತೆಂದನಸುರಾರಿ ॥

೩೦ನೆಯ ಪದ್ಯಕ್ಕೆ ಮೊದಲು (ಐ) ಪ್ರತಿಯಲ್ಲಿ ಮುಂದಿರುವ ಪದ್ಯಾರ್ಧವು ೧೩ನೆಯ ಸಂಧಿಯ ಸೂಚನೆ ಪದ್ಯವಾಗಿದೆ

ರಾಯ ದ್ರುಪದನಸುತನ ಸೇನಾ
ನಾಯಕನ ಮಾಡಿದರು ಪಾಂಡವ
ರಾಯತಿಕೆಯಲಿ ಬಂದು ಬಿಟ್ಟರು ಸಮರಭೂಮಿಯಲಿ ॥

(ಗ) ಪ್ರತಿಯಲ್ಲಿ ಮುಂದಿರುವ ಪದ್ಯವು ೩೨ನೆಯ ಪದ್ಯವಾದಮೇಲೆ ಹೆಚ್ಚಾಗಿದೆ

ಅರಸ ಕೇಳ್ ದ್ರುಪದಾತ್ಮಜನ ಸರಿ
ದೊರೆಯದಾವನು ಲೋಕದಲಿ ನೀ
ಕರಸಿ ಪಟ್ಟವ ಬಿಗಿಯೆನಲು ಕೈಕೊಂಡು ಯಮಸೂನು ।
ತರಿಸಿ ಭದ್ರಾಸನವ ನೆಱೆ ಸಿಂ
ಗರಿಸಿ ಪುರದೊಳು ಮಂಗಳೋತ್ಸವ
ಮೆಱೆಯಲೆಂದಟ್ಟಿದನು ಚರರನು ಭೂಪ ದೆಸೆದೆಸೆಗೆ ॥

೩೫ನೆಯ ಪದ್ಯವಾದಮೇಲೆ ಮುಂದಿರುವ ೪ ಪದ್ಯಗಳು (ಗ) ಪ್ರತಿಯಲ್ಲಿ ಹೆಚ್ಚಾಗಿವೆ

ಮೊಳಗಿದವು ನಿಸ್ಸಾಳ ಮಂತ್ರದ
ಕಳಕಳಿಕೆ ಮಿಗೆ ಭೂಸುರರು ನನೆ
ಗಳನು ಕಱೆದರು ನೃಪತಿ ಕಳುಹಿದನವರನುಚಿತದಲಿ।
ಬಲಜಲಧಿ ಕಾಣಿಕೆಯನಿಕ್ಕಿತು
ನಳಿನವದನೆಯರಾರತಿಯ ಕೈ
ಕೊಳುತ ಹರಿಪದಕೆಱಗಿ ಧೃಷ್ಟದ್ಯುಮ್ನನನುವಾದ॥

ಹರದುದೋಲಗವಿರುಳು ಮೂಡಣ
ಗಿರಿಯ ತುದಿಯಲಿ ಕೆಂಪು ತೋಱೆ
ತ್ರಿರಿವಿದಾರಣ ಕೃಷ್ಣನುಪ್ಪವಡಿಸಿದನೊಲವಿನಲಿ।
ಹರಿಯುಮಗ ಹರಿಸೂನು ಹರಿತನು
ಜರು ಯಮಳರುಪ್ಪವಡಿಸಿದರಾ
ಹರಿಯ ಚರಣಕ್ಕೆಱಗಿ ರವಿಯುದಯಾದ್ರಿಗಡರಿದನು॥

ಹರಿಯ ನೇಮದೊಳರಸ ಕರಸಿದ
ಧರಣಿಯಮರರ ಬಳಿಕ ಶುಭದಿನ
ವರಮುಹೂರ್ತದಲರಸ ಹೊಯ್ಸಿದನಂದು ಹೊಱಗುಡಿಯ
ತರಿಸಿ ಕನಕವ ರತ್ನವಸ್ತ್ರಾ
ಭರಣವನು ಭೂಸುರರಿಗಿತ್ತನು
ಹರುಷ ಮಿಗೆ ಮುರವೈರಿಸಹ ಹೊಱವಂಟನರಮನೆಯ॥

ಕರಸಿದನು ಯಮಸೂನು ದ್ರುಪದಾ
ದ್ಯರ ವಿರಾಟಾಧೀಶ ಸಚಿವರ
ಬರಸಿದನು ಮನ್ನೆಯರನಕ್ಷೋಹಿಣಿಯ ನಾಯಕರ।
ನರನಮಗನಭಿಮನ್ಯು ಮೊದಲಾ
ಗಿರೆ ಘಟೋತ್ಕಚ ಪಂಚಪಾಂಡವ
ರುರವಣಿಸಿ ನೆರೆಯಿತ್ತು ಕದನಕರೋರಕರ್ಕಶರು॥

೩೮ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಸುರಪನೈರಾವತವನಿಳಿಕಿಯು
ವರ ಬಲದ ಗಜಯೂಥವೆಲ್ಲವ
ಕರೆಯಲೆತ್ತಿದ ಕೈಯು ಪುಷ್ಕರವೆಸವ ಭಾವಗಳ।
ಪರಿಯನೇವೇಳುವೆನು ಯಮಸುತ
ನರಸುತನದ ಸುವಿಸ್ತರಕ್ಕೀ
ಧರಣಿ ಸಜ್ಜುವೆಯೆಂದು ಹೇಳುವೂಲೆಸೆದುದಿಭಪಂಕ್ತಿ ॥

೪೧ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮುಂದಿರುವ ಪದ್ಯವು ಹೆಚ್ಚಾಗಿದೆ

ಇಳೆ ಜರಿಯೆ ದೆಸೆ ಹಿಗ್ಗೆ ದಿಕ್ಕರಿ
ತಲೆಗೊಡಹೆ ವಿತಳದಲಿ ಶೇಷನು
ತಲೆಯುಡುಗೆ ತರುಗಿರಿಗಳೆಲ್ಲಾ ದಳದ ಪದಹತಿಗೆ ।
ನೆಲ ಸರಿಸವಾಗಲ್ಕೆ ಕೆಂಧೂ
ಳೊಲೆದು ಮೇಲಣ ಶಿಂಶುಮಾರ[ವ]
ತಲೆಯೊಳಾಂತುದು ತಿರುಗಿ ಕುಡಿದುದು ಸಪ್ತಸಾಗರವ ॥

೪೩ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಮುಂದಿರುವ ಎರಡು ಪದ್ಯಗಳು ಹೆಚ್ಚಾಗಿವೆ.

ಎಕ್ಕಸರದಲಿ ಕೋಟಿಭೇರಿಗ
ಳೊಕ್ಕಲಿಕ್ಕಿತು ಮೊಱೆವ ಮುರಜದ
ತೆಕ್ಕೆಯಲಿ ಚಂಬಕನ ಡೌಡೆಯು ರಾಯಗಿಡಿಬಿಡಿಯು ।
ಮುಕ್ಕುಳಿಸಿ ಮೇಲಣ ಜಗಂಗಳ
ಹಿಕ್ಕಿ ಹೊಕ್ಕುದತಳವನಾ ದಶ
ದಿಕ್ಕು ಬಿರಿಯಲು ಮೊಳಗಿದವು ಬಹುವಾದ್ಯನಿರ್ಘೋಷ ॥

ಹಣೆಯು ದನಿ ತುಂಬಿಡುವ ಕೊಂಬಿನ
ದನಿ ಕಹಳೆಯ ರವದಿಯುರೆ ಮೊಱೆವ
ಚೀರ್ಣಧ್ವನಿಯು ಮೌನಿಯು ನಾಗವಾಸರದ ।
ನೆರವಿ ಶಬ್ದಬ್ರಹ್ಮ ಮೀಱ
ತ್ತರರೆ ಮೇಲಣ ಸತ್ಯಲೋಕವ
ಹಿರಿದು ಬಣ್ಣಿಸಲಱಿಯೆ ದಿಕ್ಕರಿ ಕೊಡಹಿದವು ಶಿರವ ॥ (?)

ಮುಂದಿರುವ ಪದ್ಯವು ೪೫ನೆಯ ಪದ್ಯವಾದಮೇಲೆ (ಗ) ಪ್ರತಿಯಲ್ಲಿ ಹೆಚ್ಚಾಗಿದೆ

ರಾಜಭವನದ ಮುಂದೆ ಬಲದಲಿ
ಮೂಜಗಕ್ಕಧಿದೈವವಗ್ಗದ
ರಾಜಸೂಯಕ್ರತುವ ಪಾಯ್ದಳ ನಿಳಯವನು ರಚಿಸಿ ।
ರಾಜರಾಜನ ಪುರಕೆ ಸರಿಮಿಗ
ಲೀ ಜಗಕ್ಕೆನೆ ದ್ರುಪದಸುತೆಯು ಸ
ಮಾಜರಿಗೆ ನಿಜಭವನವಾದವು ನೃಪತಿ ಕೇಳೆಂದ ॥

———

# ಪರಿಶಿಷ್ಟ ೨

## ಭಾರತ ನಿಘಂಟು

*ಶ್ರೀವಾಗ್ವಲ್ಲಭೆಯಂ ರಾ
ಜೀವೋದ್ಭವನರಸಿಯಂ ಸುವಿದ್ಯಾಂಬುಧಿಯಂ ।
ದೇವತ್ರಯಪೂಜಿತೆಯಂ
ಭಾವಿಸಿ ಭಯಭಕ್ತಿಯಿಂದ ಭಜಿಸುವೆನನಿಶಂ ॥ ೧ ॥

ಭಾರತದೊಳ್ ಕವಿರಾಜ ಕು
ಮಾರವ್ಯಾಸಂ ನೆಗಳ್ದ ಶಬ್ದಂಗಳ ನಾ
ನಾರಯಿದುಸುರ್ವೆಂ ನಿಜದಿಂ
ಧೀರರಿದಂ ಮೆಚ್ಚಿ ಮನದೆಗೊಳ್ವುದು ಮುದದಿಂ ॥ ೨ ॥

ಭಾರತದೊಳ್ವಿನ ನುಡಿಯಂ
ಚಾರು ಸುದೇಶೀಯವೆಂಬ ಭಾಷಾಂತರಮಂ ।
ಸೂರಿಜನ ಮೆಚ್ಚೆ ಪೇಳ್ವೆಂ
ಧಾರುಣಿಯೊಳ್ ಕೋವಿದರ್ಗೆ ಮುದಮೊದಗುವಿನಂ ॥ ೩ ॥

ಅಡಬಳಮೆಂದೆನೆ ಮಾಂಸಂ
ಪಡಿಸಣಮೆಂದೆನೆ ಪರೀಕ್ಷೆ ಕಡುಹೆನೆ ಶೌರ್ಯಂ ।
[1]ಕಡುಪೆನೆ[1] ಪರಾಕ್ರಮಂ [2]ಮು
ಕ್ಕುಡಿ[2]ಯೆನಲವಗಡಕೆ ನಾಮಮೆಂದಱಿಗೆ ಬುಧರ್ ॥ ೪ ॥

[3]ಬೇ[3]ಡನೆನೆ ಭೀತಚಿತ್ತಂ
ಕೋಡಿಯೆನಲ್ ನೀರಬಟ್ಟೆ ಪಾಡೆನೆ ಪಂಥಂ ।
ಖೋಡಿಯೆನೆ ಕೊಱತೆ ಖಾಡಾ
ಖಾಡಿಯೆನಲ್ ಮಲ್ಲಯುದ್ಧಮೆಂದಱಿಗೆ ಬುಧರ್ ॥ ೫ ॥

---

(ಕ) ಪ್ರತಿಯಲ್ಲಿ ೧ನೆಯ ಪದ್ಯವಿಲ್ಲ

[1] ಮಿಡುಕೆನೆ (ಖ ಚ) [2] ಮುಂಕುಡಿ (ಖ ಗ) [3] ಬೇ (ಖ ಗ)

ವಾಯುಮೆನಲ್ ಪುಸಿವೆಡೆಗೆ ನ
ವಾಯಿಯೆನಲ್ ರೀವಿ [1]ಮಚ್ಚಿನಲ್ ಕತ್ತಲೆ[1] ಚೀ ।
ಲಾಯ್ಥಮೆನಲ್ ಕಿತ್ತಲಗು ವಿ
ಡಾಯಮೆನಲ್ ವಹಣಿಯಕ್ಕುಮೆಂದಱಿಗೆ ಬುಧರ್ ॥ ೬ ॥

ಓಳಿಯೆನಲ್ ಮೊತ್ತಂ ಮಾ
ತಾಳಿಯೆನಲ್ ಗಳ[2]ಪ[2]ನಾಕೆವಾಳನೆ ಶೂರಂ ।
ಪಾಳಿಯೆನಲ್ ಕ್ರಮಮಪ್ಪುದು
ಮೌಳಿಯೆನಲ್ ಮಕು[3]ಟ[3]ಮೆಂದು ತಿಳಿಗೆ ವಿದಗ್ಧರ್ ॥ ೭ ॥

ಬಿದ್ದಿನರೆನೆ ಬೀಗರ್ ಮಿಗೆ
ಬಿದ್ದಿನನೆನೆ ಜಲದೊಳಾಳ್ದ ಭಾಸ್ಕರನಕ್ಕುಂ ।
ಅದ್ದನೆನೆ ಮುಳುಗಿದರ್ಥಂ
ಕ್ರುದ್ಧಮೆನಲ್ [4]ಕೋಪಿಯೆಂದು[4] ತಿಳಿಗೆ ವಿದಗ್ಧರ್ ॥ ೮ ॥

ಒಪ್ಪರಮೆ ಕಣ್ಣಟೊಪ್ಪಿಗೆ
ಕುಪ್ಪಳಿಸಿತೆನಲ್ಕೆ ನೆಗೆದು ದಾಂಟಿದುದಕ್ಕುಂ ।
ಅಪ್ಪೆನಲಾಲಿಂಗನಮದು
ತುಪ್ಪುಳೆನಲ್ ಖಗದ ರೋಮಮೆಂದಱಿಗೆ ಬುಧರ್ ॥ ೯ ॥

ಜೀವನೆನಲ್ ಸುರಗುರುವುಂ
ವೈವಾದಮೆ ಭಿನ್ನ ಕೃಪಣ ಲೋಭಿಯು ಹಗಲಿನ ।
ಹಾವಸೆಯೆನೆ ಮಂಜಿನಸರಿ
ಕಾ[5]ವನೆ[5] ರಕ್ಷಿಪನು ಮದನನೆಂದಱಿಗೆ ಬುಧರ್ ॥ ೧೦ ॥

ಉಳಿತಮೆನಲ್ ಸೇರುವೆಯಂ
ಜುಳಿಯೆನೆ ತಾಂ ಹಸ್ತ ಬೆಡಗನೆಂ[6]ದರೆ[6] ಚದುರಂ ।
ಚಳೆಯಮೆನೆ ನೀರ ತಳಿದುದು
ಚಳಕಮೆನಲ್ [7]ವಹಿಲಮೆಂದು[7] ತಿಳಿಗೆ ವಿದಗ್ಧರ್ ॥ ೧೧ ॥

---

[1] ಮೆಚ್ಚಿನಲ್ ಕಡಿತಲೆ (ಕ), ಮೆಚ್ಚಿನಲ್ ಕೆಡತಲೆ (ಗ) [2] ಹೆ (ಚ) [3] ರ (ಕ ಗ) [4] ಕೋಪಮಕ್ಕು (ಕ), ಕೋಪವೆಂದು (ಗ) [5] ವಂ (ಚ) [6] ದೆನೆ (ಕ) [7] ತ್ವರಿತಮೆಂದು (ಕ), ತಳಿತುದೆಂದು (ಗ)

ಆಸುರಮೆನಲತಿಶಯಮದು
ಸೀಸಕಮೆನೆ ತಲೆಯ ರೌಳಿ ವಾಸಿಯೆ ಪಂಥಂ ।
ಮಿಾಸಲೆನೆ ಬಳಸದಿರ್ಪುದು
ವೈಸಿಕಮೆನೆ ಕಪಟಕೃತ್ಯಮೆಂದಱಿಗೆ ಬುಧರ್ ॥ ೧೨ ॥

ನೆರವಿಯೆನಲ್ ಮೊತ್ತಂ ಮಂ
ಜರ[1]ವೆ[1]ನೆ ಮಾರ್ಜಾಲಮೊಡ್ಡವಣೆ ಸನ್ನಾಹಂ ।
ಜರನೆನೆ ಪೊನ್ನುಂ ವಿಸಟಂ
ಬರಿದುದೆನಲ್ ಬೀದಿವರಿದುದಂದಱಿಗೆ ಬುಧರ್ ॥ ೧೩ ॥

ಪರುರವಮೆನೆ ವಿಸ್ತರಮು
ಪ್ಪುರಮೆನೆ [2]ಮೇ[2]ಲೆಂಬುದರ್ಥಮೊಡ್ಡನೆ ಸೈನ್ಯಂ ।
ಪುರುಳೆನಲೊಳ್ಳಿತು ಗುಳಮೆನೆ
ಕರಿಗಳ ಬೆಂಗಿಟ್ಟ ಱಂಚೆಯೆಂದಱಿಗೆ ಬುಧರ್ ॥ ೧೪ ॥

[3]ಉಱಿಳಿ[3]ಯೆನಲ್ ಮೊತ್ತಂ [4]ನಿ[4]
ಗರ್ರಾಳಂ ಕೋವಾಲನು ಕುವರ ಜವನಿಕೆ ಮುಸುಕಂ ।
ಕಱುಬನೆನೆ ಕಪಟಹೃದಯಂ
ಕುಱುಬನೆನಲ್ ಮೂಢಚಿತ್ತನೆಂದಱಿಗೆ ಬುಧರ್ ॥ ೧೫ ॥

ಬೇಗುದಿಯೆನೆ ಸಂತಾಪಂ
ಸೀಗುರಿಸಿತೆನಲ್ಕೆ [5]ಬಳ್ಳಿಮೂಡಿ[5]ದುದಕ್ಕುಂ ।
ಮೂಗನೆನೆ ಮೌನಿಯಕ್ಕುಂ
ಬೇಗ[6]ಡಮೆ[6]ನೆ [7]ಬೆ[7]ಜ್ಜಮೆಂದು ತಿಳಿಗೆ ವಿದಗ್ಧರ್ ॥ ೧೬ ॥

ಅಗ್ಗಳಿಯನೆನಲ್ ಬಲ್ಲದ
ನಗ್ಗಡಲೆನೆ ರಕ್ತಜಲಧಿ ಮೊಗ್ಗರಮೆ ಬಲಂ ।
ಲಗ್ಗೆಯೆ [8]ದಾಳಿಯೆನಿಕ್ಕುಂ[8]
ಸುಗ್ಗಿಯೆನಲ್ ಹಬ್ಬಮೆಂದು ತಿಳಿಗೆ ವಿದಗ್ಧರ್ ॥ ೧೭ ॥

---

[1] ನೆ (ಕ ಗ) [2] ಮಿಗಿ (ಕ) [3] ಪುರುಳಿ (ಖ) [4] ನೀ (ಖ) [5] ಬಳ್ಳಿ ಮಾಲ (ಕ), ಬಳ್ಳಿ ಮಾಡಿ (ಗ) [6] ಡೆಯೆ (ಚ) [7] ವೆ (ಕ ಗ) [8] ನೆ ದಾಳಿಯಕ್ಕುಂ (ಖ)

ದುಗುಡಮೆನಲ್ ಚಿಂತೆಯುಂ ತಾಂ
ಒಗುಮಿಗೆಯೆನೆ ಬಹಳ ಗೆಂಟೆನಲ್ಕತಿದೂರಂ ।
ಗಗನಮಣಿಯೆನಲ್ ರವಿ ಸುಂ
ಟಿಗೆಯಡಗೆನೆ ಹೃದಯಮಾಂಸಮೆಂದಱಿಗೆ ಬುಧರ್ ॥ ೧೮ ॥

ಬೋಳಿಯರೆನಲಮರರ್ ಮಿಗೆ
ಕಾಳಾದುದೆನಲ್ಕೆ ಕೆಟ್ಟುಪೋದುದುಮಕ್ಕುಂ ।
ತಾಳಿಗೆಯೆಂದೆನೆ ಗಂಟಲು
ಸೂಳೆಯರೆನೆ [1]ಜೋಡೆ[1]ಯೆಂದು ತಿಳಿಗೆ ವಿದಗ್ಧರ್ ॥ ೧೯ ॥

ತಲ್ಲ[2]ಳ[2]ಮೆನೆ ಭಯಮಕ್ಕುಂ
ಹಲ್ಲಣಿಸಿತೆನಲ್ಕೆ ನಿಲ್ಲದೈದಿದುದಕ್ಕುಂ ।
ಬಲ್ಲವಣಿಯೆನಲ್ ಪೆರ್ಚುಗೆ
ಗಲ್ಲಣಿಯೆನೆ ಘಾ[3]ಸಿ[3]ಯೆಂದು ತಿಳಿಗೆ ವಿದಗ್ಧರ್ ॥ ೨೦ ॥

ಗಹಗಹಿಕೆಯೆನಲ್ [4]ಸಂತಸ
ರಹಣಿಯೆನಲ್ ಸರಣಿ ಸಹಸಮೆಂದೊಡೆ ಸತ್ತ್ವಂ ।
ಅಹಹಮೆನಲ್ ನೋವಿನ ನುಡಿ
[5]ಲಹರಿ[5]ಯೆನಲ್ ತೆರೆಗಳೆಂದು ತಿಳಿಗೆ ವಿದಗ್ಧರ್ ॥ ೨೧ ॥

ಹೊಡೆ ಮರಳಿದುದೆನೆ ಬೆಳೆದುದು
ಹೊಡಕರಿಸಿತನಲ್ಕೆ [6]ಬೇಗ[6]ಬೆರಸಿದುದಕ್ಕುಂ ।
ಬಿಡಯ[7]ಮೆ[7]ನಲ್ [8]ಸೆಣಸಕ್ಕುಂ[8]
[9]ತೊಡರೆಂದೊಡೆ[9] ತೋಟಿಯಕ್ಕುಮಿದನಱಿಗೆ ಬುಧರ್ ॥ ೨೨ ॥

*ತವಲಾಯಮೆನಲ್ ವೀಳೆಯ
ಭವಮೆನ ಪುಟ್ಟುವುದು ರಂಗೆನಲ್ ಮಟ್ಟಾಖ್ಯಂ ।
ಪವರಮೆನಲ್ ಪಾನಂ ಬೋ
ನವೆಯ[10]ಡಾಗೊಳಿಗದು[10] ನಾಮಮೆಂದಱಿಗೆ ಬುಧರ್ ॥ ೨೩ ॥

---

[1] ಜೊಡ್ಡು (ಖ ಗ) [2] ಣ (ಖ ಗ ಚ) [3] ತಿ (ಕ ಖ ಗ) [4] ತೋಷಂ (ಚ)
[5] ವಹಣಿ (ಚ) [6] ತಾನು (ಚ) [7] ಯೆ (ಖ ಗ) [8] ನೆನಪಕ್ಕುಂ (ಕ ಖ ಗ)
[9] ತೊಡರೆಂದೆನೆ (ಖ), ಹೊಡಕೆಂದೊಡೆ (ಚ) [10] ಡಿಕರಿಗದು (ಕ ಖ)
* (ಕ ಗ) ಪ್ರತಿಗಳಲ್ಲಿ ೨೩ನೆಯ ಪದ್ಯವಾದ ಮೇಲೆ ೨೪ನೆಯ ಪದ್ಯವಿದೆ.

ಹೊದಕುಳಿಯೆನೆ ಸಂತಾಪಂ
ಮದವಮುಖರೆನೆ ದರ್ಪಮುಖರು ಬಿಂಜಮರಣ್ಯಂ ।
ಸದಮಲವೆಂದೊಡೆ ನಿರ್ಮಲ
ಕುಧರಮೆನಲ್ ಪರ್ವತಾಖ್ಯಮೆಂದಱಿಗೆ ಬುಧರ್ ॥ ೨೪ ॥

ದೆಖ್ಖಾ[1]ಣ[1]ಮೆನಲ್ ಹೆಚ್ಚುಗೆ
ಸೊಕ್ಕಿ[2]ದುದೆನೆ[2] ಮೂರ್ಛೆ ವಹಿಲಮೆನೆ ವೇಗಾರ್ಥಂ ।
ಪಕ್ಕಲೆಯೆಂದೊಡೆ ಅದು ತಾ
ನಕ್ಕುಂ ಕೊಪ್ಪರಿಗೆ ನಿಸದಮಿದನಱಿಗ ಬುಧರ್ ॥ ೨೫ ॥

ಹೂಣಿಗನೆನೆ ಸಾಹಸಿಗಂ
ಕೇಣಮೆನಲ್ ಮತ್ಸರಕ್ಕೆ ನಾಮಂ ಹಾಣಾ ।
ಹಾಣಿಯೆನಲ್ ಬೆರಸಿರುವುದು
ಜಾಣಾಯ್ಲನೆನಲ್ಕೆ ಜಾಣನೆಂದಱಿಗೆ ಬುಧರ್ ॥ ೨೬ ॥

*ಬೋಳೆಯೆನಲ್ ಶರಭೇದಂ
ಬೋಳಯೆನಲ್ ಮೃತ್ಯು ಬಾಡುಯೆನೆ ಮಾಂಸಂ ಹೀ ।
ಹಾಳಿಯೆನಲ್ [3]ಪಾಶಿಯು[3] ಮಿಗೆ
ಬೇಳಂಬುಪಹತಿಗೆ ನಾಮಮೆಂದಱಿಗೆ ಬುಧರ್ ॥ ೨೭ ॥

ಕೈಮೆಯೆ [4]ಕೈ[4]ಚಳಕಂ ನಿ
ರ್ನಾಮಮೆನಲ್ ನಾಶಮುಗಲಮೆನೆ [5]ವಿಸ್ತಾರಂ ।
ಸೀ[5]ಮವೆನಲ್ ಸಾಮರ್ಥ್ಯಂ
ಸ್ವಾಮಿಯೆನಲ್ಒಡೆಯನೆಂದು ತಿಳಿಗೆ ವಿದಗ್ಧರ್ ॥ ೨೮ ॥

†ಬಾತುದೆನಲ್ [6]ಬೀಗಿ[6]ರ್ದುದು
ಬಾತೆನೆ ತಾಂ [7]ಕೋಳಿಯೆಂ[7]ಬುದರ್ಥಂ ನಿಜದಿಂ।
ಬೀತುದೆನಲ್ [8]ಮುಗಿದಿ[8]ರ್ದುದು
ಬೂತುಗಳೆನೆ ಬಂಡರೆಂದು ತಿಳಿಗ ವಿದಗ್ಧರ್ ॥ ೨೯ ॥

---

* (ಕ) ಪ್ರತಿಯಲ್ಲಿ ೨೯ನೆಯ ಪದ್ಯವಾದ ಮೇಲೆ ೨೭ನೆಯ ಪದ್ಯವಿದೆ

† (ಗ) ಪ್ರತಿಯಲ್ಲಿ ೨೯ನೆಯ ಪದ್ಯವಿಲ್ಲ

[1] ಳ (ಕ) [2] ದನೆನೆ (ಖ). [3] ಕಾಲ್ದುಳಿ (ಚ) [4] ನರ್ (ಕ ಖ ಗ) [5] ಬಿತ್ತರ ನಿಸ್ಸೀ (ಕ ಖ ಗ) [6] ಬಿಗಿದಿ (ಕ ಖ) [7] ಒಳ್ಳಿತೆಂ (ಕ.ಖ) [8] ಮುಱಿದಿ (ಖ), ತೀಱಿ (ಚ)

ಅಟಕಟಮೆಂದೊಡೆ ಬಳಲಿಕೆ
ತಟ[1]ಮೆನೆ ತಾಂ[1] ಪ್ರಾಣಬಾಧೆ ಮುಕು[2]ರೆ[2]ನೆ ಮುಗ್ಧಂ ।
ನಿಟಿಲಮೆನಲ್ ಭಾಳಂ ಸಂ
ಘಟಿಸಿತೆನಲ್ ಸಾಧ್ಯನಾಮಮೆಂದಱಿಗೆ ಬುಧರ್ ॥ ೩೦ ॥

ಮೋಹರಮೆನೆ ನೃಪಸೈನ್ಯಂ
ಬೇಹರಮೆನೆ ಭೂರಿ[3]ಬು[3]ದ್ಧಿಬಲಯುತನಕ್ಕುಂ ।
ಹೂಹೆಯೆನೆ ಹಸುಳೆಯಕ್ಕುಂ
ಗಾಹೆನೆ ಕಪಟಕ್ಕೆ ನಾಮಮೆಂದಱಿಗೆ ಬುಧರ್ ॥ ೩೧ ॥

ಪಾವುಡಮೆನಲುಡುಗೊಱೆ ತಾಂ
ನೇವುರಮುಂದುಗೆಯು ಪಾರಿಹಾರ್ಯಂ ಕಡೆಯಂ ।
ಡಾವುರಮೆನಲಾಪೇಕ್ಷೆಯು
ಕಾವುರಮೆನೆ ಕೋಪಮೆಂದು ತಿಳಿಗೆ ವಿದಗ್ಧರ್ ॥ ೩೨ ॥

ನಲವೆಂದೆನೆ ಸಂತೋಷಂ
ಸಲಗನೆ ತಾಂ ಗೂಳಿ ಸೂಟಿಯೆನೆ ವೇಗಾರ್ಥಂ।
ಕೆಲಸಮೆನಲ್ ಕಜ್ಜಂ ವ
ಲ್ಕಲಮೆನೆ ತಾಂ ನಾರಸೀರೆಯೆಂದಱಿಗೆ ಬುಧರ್ ॥ ೩೩ ॥

ತೋರಹತ್ತನೆನೆ ತಾಂ ರಣ
ಧೀರಂ ದಟ್ಟೈಸಿತೆಂದೊಡತಿಸಾಂದ್ರಾರ್ಥಂ।
ಹೋರಟೆಯೆನೆ ಪೋರ್ಕೆಯು ಸರ
ದಾರನೆನಲ್ ಸಲೆ ಸಮರ್ಥನೆಂದಱಿಗೆ ಬುಧರ್ ॥ ೩೪ ॥

[4]ಹೂಸಕ[4]ಮೆನೆ ತೊಡಹಂ [5]ಡೊ[5]
ಳ್ಳಾಸಮೆನಲ್ ಕಪಟ ಡಾಳಮೆನೆ ಲಾವಣ್ಯಂ।
ಏಸೆನಲೆನಿತೆಂಬರ್ಥಂ
ಪೈಸರಿಸಿತೆನಲ್ಕೆ ಜಾಱಿತೆಂದಱಿಗೆ ಬುಧರ್ ॥ ೩೫ ॥

ಚಂಡಿಯೆನೆ [6]ನಾ[6]ಸಿಯಕ್ಕುಂ
ದಂಡಿಯೆನಲ್ ಸೆಣಸು ಬ[7]ದ[7]ಗನೆಂದೊಡೆ ಭೃತ್ಯಂ ।
ತಂಡಮೆನಲೋಳಿ ಮನ್ನೆಯ
ಗಂಡುದೆನಲ್ ತೆಗೆದು ಪೋ[8]ದು[8]ದೆಂದಱಿಗೆ ಬುಧರ್ ॥ ೩೬ ॥

---

[1] ಮಟಮೆನೆ (ಕ) [2] ಡ (ಚ) [3] ವ್ಯ (ಖ ಗ) [4] ಪೂಷರ (ಖ) [5] ದೊ (ಖ,ಗ) [6] ವಾ (ಖ ಗ) [7] ದಿ (ಖ), ಡ (ಚ) [8] ಪು (ಚ)

ಅಳವೆಂದೆನೆ ಸತ್ತ್ವಂ ಮ
ಮ್ಮಳಿಯೆನೆ ರೂಪಳಿದ ಸಾವು [1]ಮಳಿ[1]ಯುಚ್ಚೆನಿಕುಂ।
ಮೊಳಕೆಯೆನಲ್ಕಂಕುರ ಪ
ರ್ವಳಸಿತೆನಲ್ ಕೆಲಕೆ ಪಾಯ್ದುದೆಂದಱಿಗೆ ಬುಧರ್ ॥ ೩೭ ॥

ಕೊಳುಗುಳಮೆಂದೆನೆ ಕಾಳಗ
ಮಳವೆಂದೆನೆ ಸತ್ತ್ವಮುಂ ಸಮಿಾಪಮುಮಕ್ಕುಂ।
ತಳಪಟಮೆಂದೊಡೆ ಬಯಲು
ಮ್ಮಳಮೆಂದೊಡೆ ದುಗುಡಮೆಂದು ತಿಳಿಗೆ ವಿದಗ್ಧರ್ ॥ ೩೮ ॥

ಪಾಡೆನೆ ಸದೃಶಮುಮಕ್ಕುಂ
ಮೂಡಿಗೆಯೆನಲಿಷುಧಿ ಗೂಡೆನಲ್ಕದು ದೇಹಂ।
ಜೋಡೆನೆ ಸವಗಮದಕ್ಕುಂ
ಮಾಡಿಯೆನಲ್ [2]ಬಂ[2]ಡಿಯೆಂದು ತಿಳಿಗೆ ವಿದಗ್ಧರ್ ॥ ೩೯ ॥

ನೀಳಮೆನಲ್ ನೀಟಂ ನಿ
ಸ್ಸಾಳಮೆನಲ್ ಭೇರಿ [3]ಕೂ[3]ಳನೆಂದೊಡೆ ಗಾಂಪಂ।
ಸೂಳಯಿಸಿತೆನಲ್ ಪೊಯ್ದುದು
ಮೂಳೆಯೆನಲ್ಕೆಲುಗಳೆಂದು ತಿಳಿಗೆ ವಿದಗ್ಧರ್ ॥ ೪೦ ॥

ಘುಳಿಲೆನೆ ವೇಗಂ ಬಾಹ
ಪ್ಪಳಿಸಿದನೆಂದೆನಲು ಭುಜವ ಹೊಯ್ದುದುದಕ್ಕುಂ।
ತಳಿರ್ವಟ ಸತ್ತಿಗೆಯಕ್ಕುಂ
ಪಳವಿಗೆ ಕೇತನಕೆ ನಾಮಮೆಂದ[4]ಱಿಗೆ[4] ಬುಧರ್ ॥ ೪೧ ॥

ಬವರಮೆನಲ್ ಸಂಗ್ರಾಮಂ
ಬವರಿಯೆನಲ್ ಭ್ರಮರಿ ಶ್ರಮವೆನಲ್ಕಭ್ಯಾಸಂ।
ತವೆದುದು ತೀರ್ದುದು ಬೀತುದು
ಸವೆದುದೆನಲ್ ಕ್ಷಯಮನೈದಿತೆಂದಱಿಗೆ ಬುಧರ್ ॥ ೪೨ ॥

ನೆಱವಣಿಗೆಯೆನ[5]ಲ್ಕೊಳ್ತನ[5]
ಮುಱಿಕನೆನಲ್ ಕೋಪಿಯಱವೆಯೆಂದೊ[6]ಡೆ[6] ಜೀರ್ಣಂ।
ಕಿಱುಕುಳರೆನೆ ಸಾಮಾನ್ಯರ್
ಗಱಿಸೊಪ್ಪೆನೆ ಘಾಸಿಯೆಂದು ತಿಳಿಗೆ ವಿದಗ್ಧರ್ ॥ ೪೩ ॥

---

1 ಲಳಿ (ಕ ಖ ಗ) 2 ದಂ (ಕ ಖ ಗ); ಗಾ (ಚ) 3 ಖೂ (ಖ) 6 ರ್ವಿ (ಕ) 5 ಲು ಉತ್ತಮ (ಖ), ಲ್ಕುತ್ತಮ (ಗ) 6 ಡ (ಚ)

ದಿಟವೆನೆ ಸತ್ಯದ ಪೆಸ[1]ರು
ಬ್ಬಟೆ[1]ಯೆನೆ ಶೌರ್ಯಾತಿರೇಕಮೊಡ್ಡನೆ ಮೊತ್ತಂ।
ಅಟಮಟವೆನೆ [2]ಕಪಟಂ[2] ಚಾ
[3]ವ[3]ಟಿಯರೆನಲ್ ಜಾರರೆಂದು ತಿಳಿಗೆ ವಿದಗ್ಧರ್ ॥ ೪೪ ॥

ಥಟ್ಟೆನೆ ಮೋಹರಮಕ್ಕುಂ
ಥಟ್ಟು[4]ರಿ[4]ದುದೆನಲ್ಕೆ ಬೆಂಗೆ ಮೂಡಿದುದಕ್ಕುಂ।
ಕಟ್ಟಾಳೆನೆ ತ್ರಾಳಿಲಾಳಡ
ಗಟ್ಟಿದನೆನಲಡ್ಡಲಾದನೆಂದಱಿಗೆ ಬುಧರ್ ॥ ೪೫ ॥

ಅರರೆ ಧಣಾ ಭಾಪು ಭಳಿರೇ
ಧಿರುರೇ ಮಝು ಪ್ಪ್ರತು[5]ರೆ ಪಾಯ್ಕು[5] ಚಾಗು ಸಲೆ ಸುಂ।
ಪುರೆಯೆನೆ ಕೊಂಡಾಟದ ನುಡಿ
ತುಱುಗಳೆನಲ್ಕಾಕಳೆಂದು ತಿಳಿಗೆ ವಿದಗ್ಧರ್ ॥ ೪೬ ॥

ಜಂಗುಡಿಯೆನೆ ಭುಜದೇಶಂ
ಮುಂಗುಡಿಯೆನೆ ಮುಂದುಚೂಣಿಯೆನಲಗ್ರಬಲಂ।
ಜಂಗುಳಿಯೆನೆ ಮೊತ್ತಂ ಮಿಗ
ಹಿಂಗಿದುದೆನೆ ಬಿಟ್ಟುಪೋದುದೆಂದಱಿಗೆ ಬುಧರ್ ॥ ೪೭ ॥

ವೇಡೆಯಮೆನೆ ಹಯಮಂಡ[6]ಲ[6]
[7]ದಾ[7]ಡಾಯವನೆಂದಡಟ್ಟಿ ಕೊಂಡಾಡುವನುಂ।
ಬೀಡಾರಂ ಮನೆ ಮೋಡಾ
ಮೋಡಿಯೆನಲ್ [8]ಕಂದುಗಾಱ[8]ನೆಂದಱಿಗೆ ಬುಧರ್ ॥ ೪೮ ॥

ಮೀಟೆನಲುತ್ತಮಮಪ್ಪುದು
ಕೋಟಲೆಯೆನೆ ನೋವು [9]ಬೇಟ[9]ಮೆನೆ ವಿರಹಾರ್ಥಂ।
ಗೋಟೆನಲೊಂದೆಸೆಯಕ್ಕುಂ
ಗಾಟವೆನಲ್ ದೊಡ್ಡಿತೆಂದು ತಿಳಿಗೆ ವಿದಗ್ಧರ್ ॥ ೪೯ ॥

---

1 ರಾರ್ಭಟ (ಕ) 2 ರಕ್ಕುಂ (ಕ) 3 ಪ (ಖ) 4 ಗಿ (ಖ ಗ) 5 ಪಾಯಿಕು (ಕ ಗ) 6 ಲಿ (ಚ) 7 ಗಾ (ಕ), ರಾ (ಗ). 8 ದುಂದುಗಾಱ (ಖ), ಮುಂದುಗಾಣ (ಚ) 9 ಬಿರಹ (ಕ).

ಗಜಬಜಮೆನೆ ಕೋಲಾಹಲ
ಮಜಿಗಿಜಿಯೆನಲರೆ[1]ದು[1] ಚೂರ್ಣಮೆನಿಸಿದುದಕ್ಕುಂ।
ಗಜಱೆನೆ ಕೋಪಿಸಿ ನುಡಿದುದು
ಗುಜುಗುಜುಯೆನೆ ಬಿನುಗುನುಡಿಗಳೆಂದಱಿಗೆ ಬುಧರ್ ॥೫೦॥

ವಲವರಮೆನಲೊಲವಕ್ಕುಂ
ಮಲವನೆನಲ್ ಮೇಲುವಾಯ್ದು ಸೆಣಸುವನಕ್ಕುಂ।
ತಲೆವತ್ತಿದುದೆನೆ ಹೊಯ್ದುದು
ಅಲಗಣಿಸಿತೆನಲ್ಕಸಹ್ಯಮೆಂದಱಿಗೆ ಬುಧರ್ ॥೫೧॥

ಅಬ್ಬರಮೆನೆ ವಾದ್ಯದ ರವ
ನಿಬ್ಬರವೆನೆ ನಿರ್ಭರಕ್ಕೆ ನಾಮಂ ನಿಜದಿಂ।
ಬೊಬ್ಬೆಯೆನಲ್ ಭಟಗರ್ಜನೆ
ಬೆಬ್ಬಳಮೆಂದೆನೆ ವಿಕಳತ್ವಮೆಂದು ತಿಳಿಗೆ ವಿದಗ್ಧರ್ ॥೫೨॥

ಬೇಹೆನೆ ಬೇಕೆಂದೆಂಬುದು
ಬಾಹುರಿಕೆಯೆನಲ್ಕೆ ಬಾಹು[2]ಪೂರಕೆ[2] ನಾಮಂ।
ತೋಹಡಿಕೆಯೆನಲ್ವೊಗಡಿಕೆ
ಚೋಹಮೆನಲ್ ವೇಷಮೆಂದು ತಿಳಿಗೆ ವಿದಗ್ಧರ್ ॥೫೩॥

[3]ದು[3]ರುಳನೆನಲ್ ದುಶ್ಶೀಲಂ
ತರುವಲಿಯೆನೆ ತರಳನದಟನೆನೆ ಕಡುದಿಟ್ಟಂ।
ನಿರುತಮೆನಲ್ [4]ಸ[4]ತ್ಯಂ ನಿ೧
ದಱಿಕೆಯೆನಲ್ ಸಂದ ಪವಣಮೆಂದಱಿಗೆ ಬುಧರ್ ॥೫೪॥

ಆಗಸಮೆನಲಾಕಾಶಂ
ಕಾಗೆನಲತಿನೀಲ[5]ಮುಳಲೆನಲ್ ಕಡುಶೋಕಂ[5]।
ಮೂಗೆನೆ ಮುಂಗುಡಿಯಕ್ಕುಂ
ತಾಗುಳಮೆನೆ ರೌದ್ರಮೆಂದು ತಿಳಿಗೆ ವಿದಗ್ಧರ್ ॥೫೫॥

---

[1] ದ (ಚ) [2] ರಕ್ಷೆಗೆ (ಕ) [3] ಮ˘(ಚ) [4] ನಿ (ಖ) [5] ಮುಮ್ಮಳಿಕೆಯೆನೆ ವೈಶಾಖಂ (ಗ)

ಅಸದಳಮೆಯುಶಕ್ಯಂ ಛೊಂ
ಪಿಸಿದುದೆನಲ್ ಮರವೆಯಕ್ಕು ಡೊಕ್ಕ[1]ರ[1] ಗುದ್ದುಂ।
ಕುಸಿಯೆನೆ ಜರಿದುದು ನೆಲನೆನೆ
ವಸುಧೆಯ ಪರ್ಯಾಯಮೆಂದು ತಿಳಿಗೆ ವಿದಗ್ಧರ್ ॥೫೬॥

ಜಳ್ಳೆನೆ ಜರಡೆನೆ ಜಾಳೆನೆ
ಪೊಳ್ಳೆನೆ ತಾಂ ನಿಷ್ಪ್ರಯೋಜನಾರ್ಥಮದಕ್ಕುಂ।
[2]ಡಿ[2]ಳ್ಳಮೆನಲ್ ತಲ್ಲಣಮದು
ತಳ್ಳಂಕಮೆ ಭೀತಿಯಕ್ಕುಮಿದನಱಿಗೆ ಬುಧರ್ ॥೫೭॥

ಗಹನಮೆನಲ್ ಕೊಱಿತೆಯ ನುಡಿ
ಮಹಳಮೆನಲ್ಕದು ಮಹಾಲಯಾಭಿಧಮಕ್ಕುಂ ।
ರಹಮೆನಲತ್ಯಾಶ್ಚರ್ಯಂ
ರಹಿಯೆಂದೊಡದೀ ಪ್ರಕಾರಮೆಂದಱಿಗೆ ಬುಧರ್ ॥೫೮॥

ಭಾರಣೆಯೆನೆ [3]ಬಲು[3]ಭಾರಂ
ಭಾರಂಕಮೆನಲ್ಕೆ ದಂಡಿಯೇಱೆನೆ ಘಾಯಂ।
ಪೂರಿಗೆನೆ ಕರೋರಂ ವ್ಯಾ
ಪಾರಮೆಯುದ್ಯೋಗಮೆಂದು ತಿಳಿಗೆ ವಿದಗ್ಧರ್ ॥೫೯॥

ತಡಕಸಮೆನಲುಪಹತಿಯು
ಕ್ಕುಡರೆನೆ ಸತ್ವ[4]ಗರು[4] ತಗುಸಿಯೆಂದೊಡೆ ಕುಂದುಂ ।
ಪಡಿಮೆಚ್ಚೆನಲದು ಸಂಶಯ
[5]ಮಡಗೆನೆ ಮಾಂಸಕ್ಕೆ ನಾಮಮೆಂದಱಿಗೆ ಬುಧರ್[5] ॥೬೦॥

ದಾಣಸಿಯೆನಲಡಿಗೆಯವಂ
ರಾಣುವೆಯೆನೆ ಸೇನೆಯಾಟವಿಕನೆನೆ ಧೂರ್ತಂ ।
ಹೂಣೆಹೊಕ್ಕುದುದೆನಲ್ ಸ
ತ್ರಾಣದಿನೊಳಪೊಕ್ಕುದೆಂದು ತಿಳಿಗೆ ವಿದಗ್ಧರ್ ॥೬೧॥

---

[1] ಳ (ಕ) [2] ದಿ (ಚ) [3] ಭರ (ಕ ಖ ಗ) [4] ಮಡು (ಕ) [5] ಜಡವೆಂದೆನೆ ಜಾಡ್ಯಮೆಂದು ತಿಳಿಗೆ ವಿದಗ್ಧರ್ (ಕ)

ಭಾರಿಯೆನಲೊಡ್ಡು ಮಿಗೆ ಜ
ಜ್ಝಾರರೆಯುದ್ಧತರು ಆಳೆನಲ್ಕೆ ಭಟಂ ನೀ।
ಹಾರಮೆನಲ್ ಸರಿಸಮುಮುಪ
ಹಾರಮೆನಲ್ ಪಸರಮೆಂದು ತಿಳಿಗೆ ವಿದಗ್ಧರ್ ॥೬೨॥

ಆಣತಿಯೆನೆ ಗಾನಮದು
ಗ್ರಾಣ[1]ತೆ[1]ಯೆನೆ ಬಹಳಮಾಗಿ ಪೊಣ್ಮಿದುದಕ್ಕುಂ।
[2]ಕೇ[2]ಣಮೆನಲ್ಕಾಲೋಚನೆ
ಗೋಣೆಂದೆನೆ ಗಳದ ನಾಮುಮೆಂದಱಿಗೆ ಬುಧರ್ ॥೬೩॥

ಅಡುಪಾಡೆನೆ ತಿವಿದಾಟದ
ನುಡಿ ಚೊಕ್ಕೆಯತನಮೆ ನಾಡೆ ಬಿನ್ನಣಮೆಂಬರ್।
ಅಡರೆನೆ ಕೆಡುವುದುಮಕ್ಕುಂ
ಸಡಗರಮೆನೆವೊಳ್ಳಿತೆಂದು ತಿಳಿಗೆ ವಿದಗ್ಧರ್ ॥೬೪॥

ಕರಣಿಕರ ಲೆಕ್ಕಸಂಖ್ಯೆಯೊ
ಳರಸರ್ ವಿಬುಧಾಳಿಗೀಯುವರ್ಥ್ಯಂಗಳೊಳುಂ।
ಮರಣದೊಳು ಮದನತಾಪದಿ
ಪರಿವರ್ತಿಸು ಪಾರುಖಾಣೆಯೆಂದಱಿಗೆ ಬುಧರ್ ॥೬೫॥

ಪಿಡಿ ಸವಡಿಯೆನಲ್ ಪೆಣ್ಗಜ
ಮಿಡಿಯೆಂದೊಡೆ ಪರಳುಗಾಯಿ ಬಗ್ಗನೆ ವ್ಯಾಘ್ರಂ।
ಪೊಡೆಯೆನಲುದರಂ ಮಿಗೆಯಾ
ಸಡಿಯೆನಲಾಷಾಢ[3]ಮೆಂದು ತಿಳಿಗೆ ವಿದಗ್ಧರ್[3] ॥೬೬॥

*ದಿಟ್ಟನೆ ಧೀರಂ ಧೂಳೀ
ಪಟ್ಟಮೆನಲ್ಕಡರಿ ಧೂಳಿ ಪುಟ್ಟಿದುದಕ್ಕುಂ।
ಬೆಟ್ಟಿತೆನಲ್ ಬಿಱಿಸಕ್ಕುಂ
ಘಟ್ಟಣೆಯೆನೆ ಗಾಯಮೆಂದು ತಿಳಿಗೆ ವಿದಗ್ಧರ್ ॥೬೭॥

---

[1] ತಿ (ಖ ಗ) [2] ಕೀ (ಚ) [3] ಮಾಸಮೆಂದಱಿಗೆ ಬುಧರ್ (ಕ)

*(ಕ ಖ) ಪ್ರತಿಗಳಲ್ಲಿ ೬೭ನೆಯ ಪದ್ಯವಿಲ್ಲ, (ಗ) ಪ್ರತಿಯಲ್ಲಿ ೬೬, ೬೮ನೆಯ ಪದ್ಯಗಳಿಲ್ಲ.

ಅಱುವತ್ತೇೞುಂ ಕಂದದ
[1]ಉರುತರ ಭಾರತದ ಕೃತಿಯೊಳಿರುತಿಹ ಶಬ್ದಾ।
ರ್ಥರಹಸ್ಯ ಪರಿಷ್ಕೃತಿಗೋ[1]
ಸ್ಕರವಾಗಿಯೆ ಪೇೞ್ದನಖಿಲಶಬ್ದಾಂತರಮುಂ ॥೬೮॥

ಕರ್ಣಾಟಕ ಭಾರತ ನಿಘಂಟು

ಸಂಪೂರ್ಣಂ

---

[1] ಉರುವ ಮಹಾಭಾರತವರ್ಣಕಕೃತಿಯೊಳುಱುಗಿಹ ಶಬ್ದಾರ್ಥಕ್ಕೋ (ಕ).

# ಭಾರತ ನಿಘಂಟಿನ ಪದಗಳ ಅಕಾರಾದಿ

| ಪದ | ಅರ್ಥ | ಪದ್ಯ ಸಂ |
|---|---|---|
| | **ಅ** | |
| ಅಕ್ಕುಡರ್ | ಸತ್ತ್ವಗೆರು | ೬೦ |
| ಅಗಲ | ವಿಸ್ತಾರ | ೨೮ |
| ಅಗಡಲು | ರಕ್ತಜಲಧಿ | ೧೭ |
| ಅಗ್ಗಳಿಯ | ಬಲ್ಲಿದ | ೧೭ |
| ಅಜಿಗಿಜಿ | ಅರೆದ ಚೂರ್ಣ | ೫೦ |
| ಅಂಜುಳಿ | ಹಸ್ತ | ೧೧ |
| ಅಟಕಟ | ಬಳಲಿಕೆ | ೩೦ |
| ಅಟಮಟ | ಕಪಟ | ೪೪ |
| ಅಡಗಟ್ಟು | ಅಡ್ಡಲಾಗು | ೪೫ |
| ಅಡಗು | ಮಾಂಸ | ೬೦ |
| ಅಡಬಳ | ಮಾಂಸ | ೪ |
| ಅಡರು | ಕೆಡುವುದು | ೬೪ |
| ಅಡುಪಾಡು | ತಿವಿದಾಟದ ನುಡಿ | ೬೪ |
| ಅದಟ | ಕಡುದಿಟ್ಟ | ೫೪ |
| ಅದ್ದು | ಮುಳುಗಿದ | ೮ |
| ಅಪ್ಪು | ಆಲಿಂಗನ | ೯ |
| ಅಬ್ಬರ | ವಾದ್ಯರವ | ೫೨ |
| ಅರರೆ | ಕೊಂಡಾಟದ ನುಡಿ | ೪೭ |
| ಅಱವೆ | ಜೀರ್ಣ | ೪೩ |
| ಅಲಗಣಿಸು | ಅಸಹ್ಯಪಡು | ೫೧ |
| ಅಸದಳ | ಅಶಕ್ಯ | ೫೭ |
| ಅಹಹ | ನೋವಿನ ನುಡಿ | ೨೧ |
| ಅಳ | ಸತ್ತ್ವ | ೩೭ |
| ಅಳ | ಸಮೀಪ | ೩೮ |
| ಅಳಲು | ಕಡುಶೋಕ | ೫೫ |
| | **ಆ** | |
| ಆಕೆವಾಳ | ಶೂರ | ೭ |
| ಆಗಸ | ಆಕಾಶ | ೫೫ |
| ಆಟವಿಕ | ಧೂರ್ತ | ೬೧ |

| ಪದ | ಅರ್ಥ | ಪದ್ಯ ಸಂ |
|---|---|---|
| ಅಣತಿ | ಗಾನ .. | ೭೩ |
| ಆಸಡಿ | ಆಷಾಢ | ೭೭ |
| ಆಸುರ | ಅತಿಶಯ | ೧೨ |
| ಆಳು | ಭಟ | ೭೨ |

## ಉ

| ಪದ | ಅರ್ಥ | ಪದ್ಯ ಸಂ |
|---|---|---|
| ಉಗ್ರಾಣತಿ | ಬಹಳವಾಗಿ ಪ್ರೋಣ್ಮದುದು | ೭೩ |
| ಉಪಹಾರ | ಪಸರ ... | ೭೨ |
| ಉಪ್ಪರ | ಮೇಲು | ೧೪ |
| ಉಬ್ಬಟೆ | ಶೌರ್ಯಾತಿರೇಕ | ೪೪ |
| ಉಮ್ಮಳ | ದುಗುಡ | ೩೮ |
| ಉರಿಕ | ಕೋಪಿ | ೪೩ |
| ಉಱಿಳಿ | ಮೊತ್ತ | ೧೫ |
| ಉಳಿತ | ಸೇರುವೆ | ೧೧ |

## ಏ

| ಪದ | ಅರ್ಥ | ಪದ್ಯ ಸಂ |
|---|---|---|
| ಏಱು | ಘಾಯ | ೨,೯ |
| ಏಸು | ಎನಿತು | ೩೫ |

## ಒ

| ಪದ | ಅರ್ಥ | ಪದ್ಯ ಸಂ |
|---|---|---|
| ಒಗುಮಿಗೆ | ಬಹಳ | ೧೮ |
| ಒಡ್ಡವಣೆ | ಸನ್ನಾಹ | ೧೩ |
| ಒಡ್ಡು | ಸೈನ್ಯ | ೧೪ |
| ಒಡ್ಡು | ಮೊತ್ತ | ೪೪ |
| ಒಪ್ಪರ | ಕಣ್ಚೊಪ್ಪಿಗೆ | ೬ |

## ಓ

| ಪದ | ಅರ್ಥ | ಪದ್ಯ ಸಂ |
|---|---|---|
| ಓಳಿ | ಮೊತ್ತ | ೭ |

## ಕ

| ಪದ | ಅರ್ಥ | ಪದ್ಯ ಸಂ |
|---|---|---|
| ಕಜ್ಜ | ಕೆಲಸ .... | ೩೩ |
| ಕಟ್ಟಾಳು | ತುಳಿಲಾಳು .... | ೪೫ |
| ಕಡುಪು | ಪರಾಕ್ರಮ | ೪ |
| ಕಡುಹು | ಶೌರ್ಯ . | ೪ |
| ಕಱುಬ | ಕಪಟಹೃದಯ . | ೧೫ |
| ಕಾಗು | ಅತಿನೀಲ .... | ೫೫ |
| ಕಾವನು | ರಕ್ಷಿಸುವವನು, ಮದನನು ... | ೧೦ |

| ಪದ | ಅರ್ಥ | ಪದ್ಯ ಸಂ |
|---|---|---|
| ಕಾವುರ | ಕೋಪ | ೩೨ |
| ಕಾಳಾದುದು | ಕೆಟ್ಟುಹೋದುದು . | ೧೯ |
| ಕಿಱುಕುಳರು | ಸಾಮಾನ್ಯರು | ೪೩ |
| ಕುಧರ | ಪರ್ವತ | ೨೪ |
| ಕುಪ್ಪಳಿಸು | ನೆಗೆದು ದಾಂಟು | ೯ |
| ಕುಱುಬ | ಮೂಢಚಿತ್ತ .. | ೧೫ |
| ಕುವರ | ಜವನಿಕೆ | ೧೫ |
| ಕುಸಿದುದು | ಜರಿದುದು | ೫೭ |
| ಕೂಳ | ಗಾಂಪ | ೪೦ |
| ಕೃಪಣ | ಲೋಭಿ | ೧೦ |
| ಕೇಣ | ಮತ್ಸರ | ೨೭ |
| ಕೇಣ | ಅಲೋಚನೆ .. | ೭೩ |
| ಕೈಮೆ | ಕೈಚಳಕ . | ೨೮ |
| ಕೊಳುಗುಳ | ಕಾಳಗ | ೩೮ |
| ಕೋಟಲೆ | ನೋವು . | ೪೯ |
| ಕೋಡಿ | ನೀರಬಟ್ಟೆ | ೫ |
| ಕ್ರುದ್ಧ | ಕೋಪಿ . | ೮ |
| | **ಖ** | |
| ಖಾಡಾಖಾಡಿ | ಮಲ್ಲಯುದ್ಧ ... | ೫ |
| ಖೋಡಿ | ಕೊಱತೆ | ೫ |
| | **ಗ** | |
| ಗಗನಮಣಿ | ರವಿ . | ೧೮ |
| ಗಜಬಜ | ಕೋಲಾಹಲ | ೫೦ |
| ಗಜಱು | ಕೋಪಿಸಿ ನುಡಿ . | ೫೦ |
| ಗಱುಸೊಪ್ಪು | ಘಾಸಿ | ೪೩ |
| ಗಲ್ಲಣೆ | ಘಾಸಿ .. | ೨೦ |
| ಗಹಗಹಿಕೆ | ಸಂತಸ .. | ೨೧ |
| ಗಹನ | ಕೊಱತೆಯ ನುಡಿ | ೫೮ |
| ಗಾಟ | ದೊಡ್ಡಿತು .. | ೪೯ |
| ಗಾಹು | ಕಪಟ | ೩೧ |
| ಗುಜುಗುಜು | ಬಿನುಗುನುಡಿ . | ೫೦ |
| ಗುಳ | ಕರಿಗಳ ಬೆಂಗಟ್ಟ ಱಂಚೆ | ೧೪ |
| ಗೂಡು . | ದೇಹ .... | ೩೯ |
| ಗೆಂಟು | ಅತಿದೂರ | ೧೮ |

| ಪದ | ಅರ್ಥ | | ಪದ್ಯ ಸಂ |
|---|---|---|---|
| ಗೋಟು | ಒಂದೆಸೆ | | ೪೯ |
| ಗೋಣು | ಗಳ | | ೬೩ |
| | **ಘ** | | |
| ಘಟ್ಟಣೆ | ಗಾಯ | | ೬೭ |
| ಘಳಿಲನೆ | ಬೇಗನೆ | | ೪೧ |
| | **ಚ** | | |
| ಚಂಡಿ | ನಾಸಿ | | ೩೬ |
| ಚಳಕ | ವಹಿಲ (ತ್ವರಿತ) | | ೧೧ |
| ಚಳೆಯ | ನೀರ ತಳಿದುದು | | ೧೧ |
| ಚಾಗು | ಕೊಂಡಾಟದ ನುಡಿ | | ೪೬ |
| ಚಾವಟಿಯರು | ಜಾರರು | | ೪೪ |
| ಚೀಲಾಯ | ಕಿತ್ತಲಗು | | ೬ |
| ಚೊಕ್ಕಯತನ | ಬಿನ್ನಣ | | ೬೪ |
| ಚೋಹ | ವೇಷ | | ೫೩ |
| | **ಜ** | | |
| ಜಂಗುಡಿ | ಧುಜದೇಶ | .... | ೪೭ |
| ಜಂಗುಳಿ | ಮೊತ್ತ | .. | ೪೭ |
| ಜಜ್ಜಾರರು | ಉದ್ಧತರು | .. | ೬೨ |
| ಜರ | ಪೊನ್ | .... | ೧೩ |
| ಜರಡು | ನಿಷ್ಪ್ರಯೋಜನ | .... | ೫೭ |
| ಜಳ್ಳು | ನಿಷ್ಪ್ರಯೋಜನ | .. | ೫೭ |
| ಜವನಿಕೆ | ಮುಸುಕು | . | ೧೫ |
| ಜಾಣಾಯ್ಲ | ಜಾಣ | .... | ೨೬ |
| ಜಾಳು | ನಿಷ್ಪ್ರಯೋಜನ | ... | ೫೭ |
| ಜೀವ | ಸುರಗುರು | . . | ೧೦ |
| ಜೋಡು | ಸವಗ | . .. | ೩೯ |
| ಜೋಡೆ | ಸೂಳೆ | .... | ೧೯ |
| | **ಝ** | | |
| ಝೊಂಪಿಸು | ಮರವೆ | | ೫೬ |
| | **ಡ** | | |
| ಡಾವುರ | ಅಪೇಕ್ಷೆ | .. | ೩೨ |
| ಡಾಳ | ಲಾವಣ್ಯ | .... | ೩೫ |

| ಪದ | ಅರ್ಥ | ಪದ್ಯ ಸಂ |
|---|---|---|
| ಡಿಳ್ಳ | ಭೀತಿ | ೫೭ |
| ಡೊಕ್ಕರ | ಗುದ್ದು | ೫೭ |
| ಡೊಳ್ಳಾಸ | ಕಪಟ | ೩೫ |

## ತ

| ಪದ | ಅರ್ಥ | ಪದ್ಯ ಸಂ |
|---|---|---|
| ತಗುಸಿ | ಕುಂದು | ೬೦ |
| ತಟ | ಪ್ರಾಣಬಾಧೆ | ೩೦ |
| ತಡಕಸ | ಉಪಹತಿ | ೬೦ |
| ತಂಡ | ಓಳಿ | ೩೬ |
| ತರುವಲಿ | ತರಳ | ೫೪ |
| ತಲೆವತ್ತಿದುದು | ಹೊಯ್ದುದು | ೫೧ |
| ತಲ್ಲಣ | ಭೀತಿ | ೫೭ |
| ತಲ್ಲಳ | ಭಯ | ೨೦ |
| ತವಲಾಯ | ವೀಳ್ಯ | ೨೩ |
| ತವೆ | ಕ್ಷಯವೈದು | ೪೨ |
| ತಳಪಟ | ಬಯಲು | ೩೮ |
| ತಳ್ಳಂಕ | ಭೀತಿ | ೫೭ |
| ತಳಿರ್ಪಟ | ಸತ್ತಿಗೆ | ೪೧ |
| ತಾಗುಳ | ರೌದ್ರ | ೫೫ |
| ತಾಳಿಗೆ | ಗಂಟಲು | ೧೯ |
| ತೀರ್ದುದು | ಕ್ಷಯ-ವೈದಿದುದು | ೪೨ |
| ತುಪ್ಪುಳ್ | ಖಗದ ರೋಮ | ೬ |
| ತುಟು | ಆಕಳು | ೪೬ |
| ತೊಡರು | ತೋಟಿ | ೨೨ |
| ತೋರಹತ್ತ | ರಣಧೀರ | ೩೪ |
| ತೋಹಡಿಕೆ | ಒಗಡಿಕೆ | ೫೩ |

## ಥ

| ಪದ | ಅರ್ಥ | ಪದ್ಯ ಸಂ |
|---|---|---|
| ಥಟ್ಟು | ಮೋಹರ | ೪೫ |
| ಥಟ್ಟಿರಿದುದು | ದಂಗೆ ಮೂಡಿದುದು | ೪೫ |

## ದ

| ಪದ | ಅರ್ಥ | ಪದ್ಯ ಸಂ |
|---|---|---|
| ದಟ್ಟೈಸು | ಅತಿಸಾಂದ್ರವಾಗು | ೩೪ |
| ದಂಡಿ | ಸೆಣಸು | ೩೬ |
| ದಾಡಾಯುವ | ಅಟ್ಟಿ ಕೊಂಡಾಡುವವ | ೪೮ |
| ದಿಟ | ಸತ್ಯ | ೪೪ |
| ದಿಟ್ಟ | ಧೀರ | ೬೭ |

| ಪದ | ಅರ್ಥ | | ಪದ್ಯ ಸಂ |
|---|---|---|---|
| ದುಗುಡ | ಚಿಂತೆ | . | ೧೮ |
| ದುರುಳ | ದುಶ್ಶೀಲ | .... | ೫೪ |
| ದೇಖ್ಖಾಣ | ಹೆಚ್ಚುಗೆ | .... | ೨೫ |

## ಧ

| ಪದ | ಅರ್ಥ | | ಪದ್ಯ ಸಂ |
|---|---|---|---|
| ಧಣು | ಕೊಂಡಾಟದ ನುಡಿ | ... | ೪೬ |
| ಧಿರುರೇ | ಕೊಂಡಾಟದ ನುಡಿ | | ೪೬ |
| ಧೂಳೀಪಟ್ಟ | ಅಡರಿ ಧೂಳಿ ಪುಟ್ಟಿದುದು | ... | ೬೨ |

## ನ

| ಪದ | ಅರ್ಥ | | ಪದ್ಯ ಸಂ |
|---|---|---|---|
| ನಲವು | ಸಂತೋಷ | .... | ೩೩ |
| ನವಾಯಿ | ಠೀವಿ | ... | ೬ |
| ನಿಟಿಲ | ಫಾಳ | ... | ೩೦ |
| ನಿಂದಱಿಕೆ | ಸಂದ ಪವಣಂ | .. | ೫೪ |
| ನಿಬ್ಬರ | ನಿರ್ಭರ | .... | ೫೨ |
| ನಿರುತ | ಸತ್ಯ | . | ೫೪ |
| ನಿರ್ಗರುಳಂ | ಕೋಮಲನು | | ೧೫ |
| ನಿರ್ನಾಮ | ನಾಶ | . | ೨೮ |
| ನಿಸ್ಸಾಳ | ಭೇರಿ | | ೪೦ |
| ನೀಹಾರ | ಸರಿಸ | | ೬೨ |
| ನೀಳ | ನೀಟ | ... | ೪೦ |
| ನೆರವಿ | ಮೊತ್ತ | . | ೧೩ |
| ನೆಱವಣಿಗೆ | ಒಳ್ತನ | | ೪೩ |
| ನೆಲ | ವಸುಧೆ | ... | ೫೬ |
| ನೇವುರ | ಅಂದುಗೆ | .. | ೩೨ |

## ಪ

| ಪದ | ಅರ್ಥ | | ಪದ್ಯ ಸಂ |
|---|---|---|---|
| ಪಕ್ಕರೆ | ಕೊಪ್ಪರಿಗೆ | ... | ೨೫ |
| ಪಡಿಮೆಚ್ಚು | ಸಂಶಯ | .... | ೬೦ |
| ಪಡಿಸಣ | ಪರೀಕ್ಷೆ | .... | ೪ |
| ಪರುರವ | ವಿಸ್ತರ | | ೧೪ |
| ಪರ್ವಳಿಸು | ಕೆಲಕೆ ಪಾಯಿ | | ೩೬ |
| ಪವರ | ಪಾನ | ... | ೨೩ |
| ಪಳವಿಗೆ | ಕೇತನ | .... | ೭ |
| ಪಾಡು | ಪಂಥ | .... | ೫ |
| ಪಾಡು | ಸದೃಶ | | ೩೯ |
| ಪಾಯ್ಕು | ಕೊಂಡಾಟದ ನುಡಿ | . | ೪೬ |

| ಪದ | ಅರ್ಥ | ಪದ್ಯ ಸಂ |
|---|---|---|
| ಪಾರಿಹಾರ್ಯ | ಕಡೆಯು . | ೩೩ |
| ಪಾರುಖಾಣೆ | ಮದನತಾಪ, ಕರಣಿಕರ ಲೆಕ್ಕ ಸಂಖ್ಯೆ, ಮರಣ, ಅರಸರು ವಿಬುಧಾಳಿಗೀವ ಅರ್ಘ್ಯ .. | ೬೫ |
| ಪಾವುಡ | ಉಡುಗೊಱೆ | ೩೨ |
| ಪಾಳಿ | ಕ್ರಮ | ೬ |
| ಪಿಡಿ | ಪೆಣ್ಗಜ | ೬೬ |
| ಪುರುಳ್ | ಒಳ್ಳಿತು | ೧೪ |
| ಪೂರಿಗ | ಕಠೋರ . | ೫೯ |
| ಪೈಸರಿಸು | ಜಾಱು | ೩೫ |
| ಪೊಡೆ | ಉದರ ... | ೬೬ |
| ಪೊಳ್ಳು | ನಿಷ್ಪ್ರಯೋಜನ .. | ೫೬ |

ಬ

| ಪದ | ಅರ್ಥ | ಪದ್ಯ ಸಂ |
|---|---|---|
| ಬಗ್ಗ | ವ್ಯಾಘ್ರ . | ೬೬ |
| ಬದಗ | ಭೃತ್ಯ .. | ೩೬ |
| ಬವರ | ಸಂಗ್ರಾಮ .... | ೪೨ |
| ಬವರಿ | ಭ್ರಮರಿ | ೪೨ |
| ಬಾಡು | ಮಾಂಸ | ೨೬ |
| ಬಾಣಸಿ | ಅಡಿಗೆಯವ .. | ೬೧ |
| ಬಾತು | ಕೋಳಿ . | ೨೯ |
| ಬಾತುದು | ಬೀಗಿರ್ದುದು .... | ೨೯ |
| ಬಾಹಪ್ಪಳಿಸು | ಭುಜವ ಹೊಯ್ . | ೪೧ |
| ಬಾಹುರಿಕೆ | ಬಾಹುಪೂರ . | ೫೩ |
| ಬಿಂಜ | ಅರಣ್ಯ . | ೨೪ |
| ಬಿಡಯ | ಸೆಣಸು ... | ೨೨ |
| ಬಿದ್ದಿನ | ಜಲದೊಳಾಳ್ದ ಭಾಸ್ಕರ ... | ೮ |
| ಬಿದ್ದಿನರು | ಬೀಗರು .. | ೮ |
| ಬೀಡಾರ | ಮನೆ . | ೪೮ |
| ಬೀತುದು | ಮುಗಿದಿರ್ದುದು . | ೨೯ |
| ಬೀತುದು | ಕ್ಷಯಮನೈದಿದುದು ... | ೪೨ |
| ಬುಲ್ಲವಣೆ | ಪೆರ್ಚುಗೆ | ೨೦ |
| ಬೂತುಗಳು | ಬಂಡರು .... | ೨೯ |
| ಬೆಟ್ಟಿತು | ಬಿಱುಸು .. | ೬೬ |
| ಬೆಡಗ | ಚದುರ .... | ೧೧ |
| ಬೆಬ್ಬಳ | ವಿಕಳತ್ವ . | ೫೨ |
| ಬೇಗಡ | ದೆಪ್ಪ | ೧೬ |
| ಬೇಗುದಿ | ಸಂತಾಪ .. | ೧೬ |

| ಪದ | ಅರ್ಥ | ಪದ್ಯ ಸಂ |
| --- | --- | --- |
| ಬೇಟ | ವಿರಹ | ೪೯ |
| ಬೇಡ | ಭೀತಚಿತ್ತ | ೫ |
| ಬೇಹರ | ಧೂರಿ ಬುದ್ಧಿಬಲಯುತ | ೩೧ |
| ಬೇಹು | ಬೇಕು | ೫೩ |
| ಬೇಳಂಬ | ಉಪಹತಿ | ೨೭ |
| ಬೊಬ್ಬೆ | ಘೂಗರ್ಜನೆ | ೫೨ |
| ಬೋನ | ಅಡುಗೂಳು | ೨೩ |
| ಬೋಳ | ಮೃತ್ಯು | ೨೭ |
| ಬೋಳೆ | ಶರಭೇದ | ೨೭ |
| ಬೋಳೆಯರ್ | ಅಮರರ್ | ೧೯ |

## ಭ

| ಪದ | ಅರ್ಥ | ಪದ್ಯ ಸಂ |
| --- | --- | --- |
| ಭವ | ಪುಟ್ಟುವುದು | ೨೩ |
| ಭಳಿರೇ | ಕೊಂಡಾಟದ ನುಡಿ | ೪೭ |
| ಭಾಪು | ಕೊಂಡಾಟದ ನುಡಿ | ೪೭ |
| ಭಾರಂಕ | ದಂಡಿ | ೫೯ |
| ಭಾರಣೆ | ಬಲುಭಾರ | ೫೬ |
| ಭಾರಿ | ಒಡ್ಡು | ೭೨ |

## ಮ

| ಪದ | ಅರ್ಥ | ಪದ್ಯ ಸಂ |
| --- | --- | --- |
| ಮಝು ಪೂತುರೇ | ಕೊಂಡಾಟದ ನುಡಿ | ೪೭ |
| ಮಂಜರ | ಮಾರ್ಜಾಲ | ೧೩ |
| ಮದಮುಖ | ದರ್ಪಮುಖ | ೨೪ |
| ಮನ್ನೆಯಗೆಂಡುದು | ತೆಗೆದು ಪೋದುದು | ೩೭ |
| ಮಬ್ಬು | ಕತ್ತಲೆ | ೭ |
| ಮಲವ | ಪೋಲುವಾಯ್ದು ಸೆಣಸುವ | ೫೧ |
| ಮಹಳ | ಮಹಾಲಯ | ೫೮ |
| ಮಳೆ | ಉಬ್ಬೆ | ೩೭ |
| ಮಾಡಿ | ಬಂಡಿ | ೩೯ |
| ಮಾತಾಳಿ | ಗಳಸಂ | ೭ |
| ಮಿಡಿ | ಪರಳುಗಾಯಿ | ೭೭ |
| ಮೀಟು | ಉತ್ತಮ | ೪೯ |
| ಮೀಸಲು | ಬಳಸದಿರ್ಪುದು | ೧೨ |
| ಮುಕುರ | ಮುಗ್ಧ | ೨೦ |
| ಮುಕ್ಕುಡಿ | ಅವಗಡ | ೪ |
| ಮುಂಗುಡಿ | ಮುಂದುಚೂಣಿ | ೪೭ |
| ಮುಂದುಚೂಣಿ | ಅಗ್ರಬಲ | ೪೭ |

| ಪದ | ಅರ್ಥ | ಪದ್ಯ ಸಂ |
|---|---|---|
| ಮುಮ್ಮೃಳಿ | ರೂಹಳಿದ ಸಾವು | ೩೭ |
| ಮುಸುಕು | ಜವನಿಕೆ | ೧೫ |
| ಮೂಗ | ಮೌನಿ | ೧೬ |
| ಮೂಗು | ಮುಂಗುಡಿ | ೫೫ |
| ಮೂಡಿಗೆ | ಇಷುಧಿ | ೩೯ |
| ಮೂಳೆ | ಎಲು | ೪೦ |
| ಮೊಗ್ಗರ | ಬಲ | ೧೭ |
| ಮೊಳಕೆ | ಅಂಕುರ | ೩೭ |
| ಮೋಡಾಮೋಡಿ | ಕಂದುಗಾಟಿ | ೪೮ |
| ಮೋಹರ | ನೃಪಸೈನ್ಯ | ೩೧ |
| ಮೌಳಿ | ಮಕುಟ | ೭ |

## ರ

| ಪದ | ಅರ್ಥ | ಪದ್ಯ ಸಂ |
|---|---|---|
| ರಂಗು | ಮಟ್ಟು | ೨೩ |
| ರಹ | ಅತ್ಯಾಶ್ಚರ್ಯ | ೫೮ |
| ರಹಣಿ | ಸರಣಿ | ೨೧ |
| ರಹಿ | ಈ ಪ್ರಕಾರ | ೫೮ |
| ರಾಣುವೆ | ಸೇನೆ | ೬೧ |

## ಲ

| ಪದ | ಅರ್ಥ | ಪದ್ಯ ಸಂ |
|---|---|---|
| ಲಗ್ಗೆ | ದಾಳಿ | ೧೭ |
| ಲಹರಿ | ತೆರೆ | ೨೧ |

## ವ

| ಪದ | ಅರ್ಥ | ಪದ್ಯ ಸಂ |
|---|---|---|
| ವಲವರ | ಒಲವು | ೫೧ |
| ವಲ್ಕಲ | ನಾರಸೀರೆ | ೩೩ |
| ವಹಿಲ | ವೇಗ | ೨೫ |
| ವಾಯ | ಪುಸಿ | ೬ |
| ವಾಸಿ | ಪಂಥ | ೧೨ |
| ವಿಡಾಯ | ವಹಣಿ | ೬ |
| ವಿಪಟಂಬರಿ | ಬೀದಿವರಿ | ೧೩ |
| ವೇಡೆಯ | ಹಯಮಂಡಲ | ೪೮ |
| ವೈವಾದ | ಭಿನ್ನ | ೧೦ |
| ವೈಸಿಕ | ಕಪಟಕೃತ್ಯ | ೧೨ |
| ವ್ಯಾಪಾರ | ಉದ್ಯೋಗ | ೫೯ |

## ಶ

| ಪದ | ಅರ್ಥ | ಪದ್ಯ ಸಂ |
|---|---|---|
| ಶ್ರಮ | ಅಧ್ಯಾಸ | ೪೨ |

| ಪದ | ಅರ್ಥ | ಪದ್ಯ ಸಂ |
|---|---|---|
| | **ಸ** | |
| ಸಂಘಟಿಸು | ಸಾಧ್ಯ | ೩೦ |
| ಸಡಗರ | ಒಳ್ಳಿತು | ೬೪ |
| ಸದಮಲ | ನಿರ್ಮಲ | ೨೪ |
| ಸರದಾರ | ಸಮರ್ಥ | ೩೪ |
| ಸಲಗ | ಗೂಳಿ | ೩೨ |
| ಸಲೆ | ಕೊಂಡಾಟದ ನುಡಿ | ೪೬ |
| ಸವಡಿ | ಜೆಣ್ಗ ಜ | ೬೬ |
| ಸವೆದುದು | ಕ್ಷಯವನ್ನೈದಿದುದು | ೪೨ |
| ಸಹಸ | ಸತ್ತ್ವ | ೨೧ |
| ಸೀಗುರಿಸು | ಬಳ್ಳಿಮೂಡು | ೧೬ |
| ಸೀಮ | ಸಾಮರ್ಥ್ಯ | ೨೮ |
| ಶೀಸಕ | ತಲೆಯ ರಾಳಿ | ೧೨ |
| ಸುಗ್ಗಿ | ಹಬ್ಬ | ೧೭ |
| ಸುಂಟಿಗೆಯಡಗು | ಹೃದಯ ಮಾಂಸ | ೧೮ |
| ಸುಂಪುರೆ | ಕೊಂಡಾಟದ ನುಡಿ | ೪೬ |
| ಸೂಟಿ | ವೇಗ | ೩೩ |
| ಸೂಳಯ್ಲು | ಪ್ರೊಯ್ಯ್' | ೪೦ |
| ಸೂಳೆ | ಜೋಡೆ | ೧೯ |
| ಸೊಕ್ಕಿದುದು | ಮೂರ್ಛೆ | ೨೫ |
| ಸ್ವಾಮಿ | ಒಡೆಯ | ೨೮ |
| | **ಹ** | |
| ಹಗಲಿನ ಹಾವಸೆ | ಮಂಜಿನಸರಿ | ೧೦ |
| ಹಲ್ಲಣಿಸು | ನಿಲ್ಲದ್ಯೈದು | ೨೦ |
| ಹಾಣಾಹಾಣಿ | ಬೆರಸಿರುವುದು | ೨೬ |
| ಹಿಂಗಿದುದು | ಬಿಟ್ಟು ಪೋದುದು | ೪೭ |
| ಹೀಹಾಳಿ | ವಾಶಿ | ೨೭ |
| ಹೂಣಿಗ | ಸಾಹಸಿಗ | ೨೬ |
| ಹೂಣಿಹೊಕ್ಕುದು | ಸತ್ಪ್ರಾಣದಿನೊಳಪೊಕ್ಕುದು | ೬೧ |
| ಹೊಸಕ | ತೊಡಹು | ೩೫ |
| ಹೊಹೆ | ಹಸುಳೆ | ೩೧ |
| ಹೊಡಕರಿಸು | ಬೇಗ ಬೆರಸು | ೨೨ |
| ಹೊಡೆಮರಳು | ಬೆಳೆ | ೨೨ |
| ಹೊದಕುಳಿ | ಸಂತಾಪ | ೨೪ |
| ಹೋರಟೆ | ಪೋರ್ಕೆ | ೩೪ |

WD 5185—GBPM—2,000—13-10-54